# ಶ್ರೀ. ದಿವಾಕರ ರಂಗರಾಯರಿಂದ ರಚಿತವಾದ

## ಪುಸ್ತಕಗಳು

| | | | |
|---|---|---|---|
| ಹರಿಭಕ್ತಿಸುಧೆ | .... | .... | ೨—೦—೦ |
| ಗೀತೆಯ ಗುಟ್ಟು | .... | .... | ೧—೦—೦ |
| ಉಪನಿಷತ್-ರಹಸ್ಯ | .... | .... | ೧—೮—೦ |
| ಉಪನಿಷತ್-ಪ್ರಕಾಶ | (ಭಾಗ ೧) | .... | ೦-೧೨—೦ |
| ,, | (ಭಾಗ ೨) | .... | ೦-೧೨—೦ |
| ಸೆರೆಯ ಮರೆಯಲ್ಲಿ | .... | .... | ೧—೦—೦ |
| ಭಕ್ತಿಸೂತ್ರಗಳು | .... | .... | ೧—೬—೦ |
| ಅಂತರಾತ್ಮನಿಗೆ | .... | .... | ೦—೪—೦ |
| Nation's Call | .... | .... | ೦—೬—೦ |

ಪತ್ತೆ :—

ಅಧ್ಯಾತ್ಮ ಕಾರ್ಯಾಲಯ
ಹುಬ್ಬಳ್ಳಿ.

# ಭರತಖಂಡದ ಜೀವಜ್ಯೋತಿಗಳು



ಲೇಖಕ :

**ಹೊಸಕೆರೆ ಚಿದಂಬರಯ್ಯ**



ಕರ್ನಾಟಕ ಶಿಕ್ಷಣ ಸಮಿತಿ, ಹುಬ್ಬಳ್ಳಿ.

೧೯೪೧

# ವಿಷಯಾನುಕ್ರಮಣಿಕೆ



## ಮೂರನೇ ಮುದ್ರಣದ

# ಮುನ್ನುಡಿ

ಈ ಗ್ರಂಥವು ಭರತಖಂಡದ ಜೀವಜ್ಯೋತಿಗಳ ಅನುಭವವನ್ನು ಕನ್ನಡಿಗರಿಗೆ ಮಾಡಿಕೊಡುವದಕ್ಕೆ ೨೦ ವರ್ಷಗಳಹಿಂದೆ ದಿವಂಗತ ಶ್ರೀ. ಹೊಸಕೆರೆ ಚಿದಂಬರಯ್ಯನವರಿಂದ ಬರೆಯಲ್ಪಟ್ಟಿತು. ಮದರಾಸ, ಮುಂಬಯಿ ವಿಶ್ವವಿದ್ಯಾಲಯುಗಳಲ್ಲಿ ಅದು ಪಠ್ಯ ಪುಸ್ತಕವಾಗಿ ಈಗಾಗಲೇ ಜನಪ್ರಿಯುವಾಗಿದೆ. ಧಾರವಾಡ ( ಈಗ ಹುಬ್ಬಳ್ಳಿಯಲ್ಲಿರುವ ) ಕರ್ನಾಟಕ ಶಿಕ್ಷಣಸಮಿತಿಯುವರು ಈಗ ಇದನ್ನು ಮೂರನೆ ಸಾರಿ ಮುದ್ರಿಸಿ ಪ್ರಕಟಿಸುತ್ತಿದ್ದಾರೆ.

ಈ ಮೊದಲು ಎರಡು ಸಾರಿಯೂ ಕೆಲವು ಭಾವಚಿತ್ರಗಳನ್ನು ಕೊಡಲಾಗಿತ್ತು. ವಿದ್ಯಾರ್ಥಿಗಳ ಅನುಕೂಲತೆಗೆ ಸರಿಯಾಗುವಂತೆ ಬೆಲೆ ಹೆಚ್ಚಾಗದಂತೆ ಮಾಡಬೇಕೆಂದು ಈಸಾರಿ ಭಾವಚಿತ್ರಗಳನ್ನು ಕೊಡಲಿಲ್ಲ. ಕಾಗದದ ಬೆಲೆಯೂ ಹೆಚ್ಚಾದದರಿಂದ ಅನಿವಾರ್ಯವಾಗಿ ಶಿಕ್ಷಣ ಸಮಿತಿಯುವರಿಗೆ ಹಾಗೆ ಮಾಡಬೇಕಾದ ಪ್ರಸಂಗ ಬಂತು.

ಇದರಲ್ಲಿ ಪ್ರಕಟವಾದ ಚರಿತ್ರೆಗಳು ಒಳ್ಳೆ ಬೋಧಪ್ರದವಾಗಿದ್ದು ವಿದ್ಯಾರ್ಥಿಗಳಲ್ಲಿ ಹಾಗೂ ಓದುಗರಲ್ಲಿ ಜಾಗ್ರತಿ ಮತ್ತು ದೇಶಪ್ರೇಮವನ್ನು ಹೆಚ್ಚಿಸುವಂತಿವೆ. ಈ ಜೀವನಚರಿತ್ರೆಗಳನ್ನು ಕುರಿತು ಇತಿಹಾಸ ಸಂಶೋಧಕರು ಯಾವದಾದರೂ ಒಂದು ನಿರ್ಣಯಕ್ಕೆ ಬಂದೊಡನೆ ಬೇಕಾದರೆ ತಿದ್ದೋಣವೆಂದು ದಿವಂಗತ ಶ್ರೀ. ಚಿದಂಬರಯ್ಯನವರು ಅಭಿಪ್ರಾಯಪಟ್ಟಿದ್ದರು. ಈಗ್ಗೆ ಕೆಲವರ್ಷಗಳಹಿಂದೆ ಅವರು ಸ್ವರ್ಗಸ್ಥರಾದ್ದರಿಂದ ಆ ಕೆಲಸವು ಹಾಗೆಯೇ ಉಳಿಯಿತು. ಮುಂದೆ ಈ ಪುಸ್ತಕವು ನಾಲ್ಕನೆ ಮುದ್ರಣವನ್ನು ಕಾಣುವ ಸುಯೋಗವು ದೊರೆತಾಗ ಅವಶ್ಯತೋರಿದ ತಿದ್ದುಪಡಿಗಳನ್ನು ಶಿಕ್ಷಣ ಸಮಿತಿಯು ಮಾಡುವದು. ಮೂರನೆಯು ಮುದ್ರಣಕ್ಕೂ ಎಂದಿನಂತೆ ಓದುಗರಿಂದ ಒಳ್ಳೇ ಪ್ರೋತ್ಸಾಹ ದೊರಕುವದಾಗಿ ನಂಬುತ್ತೇನೆ.

**ಹುಬ್ಬಳ್ಳಿ**
೨೨-೫-೧೯೫೧.

**ಹ. ರಾ. ಮೋಹರೆ**
ಸಂಪಾದಕ. ಸಂಯುಕ್ತ ಕರ್ನಾಟಕ

## ಮೊದಲನೆಯ ಮುದ್ರಣದ

# ಮುನ್ನುಡಿ



ಲೋಕದಲ್ಲಿ ಸೂರ್ಯಚಂದ್ರರಿರುವವರೆಗೆ ಕೂಡ ಅವರೊಡನೆ ಸ್ಪರ್ಧೆಮಾಡಿ ತಾನು ಕೀರ್ತಿಶರೀರದಿಂದ ಬೆಳಗುತ್ತಿರುವಂತೆ ಮಾಡಿಕೊಳ್ಳುವ ಯೋಗ್ಯತೆಯು ಬೇರೆ ಯಾವದೊಂದು ಪ್ರಾಣಿಗೂ ಇರದೆ ಮನುಷ್ಯನೊಬ್ಬನಿಗೆ ಮೀಸಲಾಗಿರುವದು. ಮನುಷ್ಯನಿಗೆ ಆ ಯೋಗ್ಯತೆಯನ್ನು ವಿಶೇಷವಾಗಿ ಅವನ ಗುಣಗಳು ತಂದುಕೊಡುವವು. ಆದ್ದರಿಂದ ಪ್ರತಿಯೊಬ್ಬ ಮನುಷ್ಯನೂ ಅಂಥ ಗುಣಗಳನ್ನು ಮೈಗೂಡಿಸಿಕೊಳ್ಳುವ ಪ್ರಯತ್ನವನ್ನು ಮಾಡಬೇಕು. ಇದಕ್ಕೆ ಎರಡು ಮಾರ್ಗಗಳುಂಟು. ಸಾಕ್ಷಾತ್ತಾಗಿ ಗುಣಗಳ ವಿಚಾರವನ್ನು ಮಾಡಿ ಅವುಗಳನ್ನು ಗ್ರಹಿಸುವದು ಒಂದು; ಒಬ್ಬರ ಜೀವನಚರಿತ್ರೆಯಲ್ಲಿ ಅಡಕವಾಗುವ ಆ ಗುಣಗಳನ್ನಾಸ್ವಾದಿಸುವದಿನ್ನೊಂದು. ಇವೆರಡರ ಮೇಲುಕೀಳುಗಳನ್ನು ತಿಳಿಯಹೋದಾಗ ಇವುಗಳಲ್ಲಿ ಮೊದಲನೆಯದನ್ನು ಸಕ್ಕರೆಗೂ ಎರಡನೆಯದನ್ನು ಸಕ್ಕರೆಯಿಂದ ಕೂಡಿದ ಭಕ್ಷ್ಯಕ್ಕೂ ಹೋಲಿಸಬಹುದು. ಇದರಿಂದ ನಮಗೆ ತಿಳಿಯುವದೇನಂದರೆ ಬರೀ ಸಕ್ಕರೆಯನ್ನು ಹೆಚ್ಚಾಗಿ ತಿನ್ನುವದಕ್ಕೇ ಆಗುವದಿಲ್ಲ; ಅದು ಬೇಗ ಸಾಕೆನ್ನಿಸಿಬಿಡುವದು. ಭಕ್ಷ್ಯಗಳನ್ನು ತಿನ್ನುವಾಗ ಅವು ಎಷ್ಟು ತಿಂದರೂ ಬೇಕುಬೇಕೆನ್ನಿಸುತ್ತಿರುವವು. ಇದರಂತೆಯೇ ಗುಣಗಳನ್ನು ಸಾಕ್ಷಾತ್ತಾಗಿ ವಿಚಾರ ಮಾಡುವಾಗ ಅವು ಬೇಗ ಸಾಕೆನ್ನಿಸಿಬಿಡುವವು. ಅವುಗಳನ್ನೇ ಒಬ್ಬನ ಜೀವನಚರಿತ್ರೆಯಲ್ಲಿ ರುಚಿನೋಡುವಾಗ ಅವು ಮತ್ತಷ್ಟು ಬೇಕೆನ್ನಿಸುತ್ತಿರುವವು. ಆದ್ದರಿಂದ ಗುಣಗಳನ್ನು ಗ್ರಹಿಸುವದಕ್ಕೆ ಜೀವನ ಚರಿತ್ರೆಗಳೇ ಬಹು ಉತ್ತಮವಾದ ಉಪಕರಣಗಳು. ಚಿಕ್ಕವಯಸ್ಸಿನವರಿಗಂತು ಇದನ್ನು ಬಿಟ್ಟರೆ ಗತಿಯೇ ಇಲ್ಲ. ನಮ್ಮ ಕನ್ನಡದಲ್ಲಿ ಜೀವನಚರಿತ್ರೆಗಳಿರುವದೇ ಕಡಿಮೆ. ಅವೂ ಅಲ್ಲೊಂದು ಇಲ್ಲೊಂದು—ಹೀಗೆ ಇರುವದರಿಂದ ಅಂಥವುಗಳೆಷ್ಟಿರುವವೆಂಬುದೂ ಮತ್ತು ಎಲ್ಲಿರುವವೆಂಬುದೂ ಕೂಡ ಜನರಿಗೆ ತಿಳಿಯದಂತಾಗಿದೆ. ಈ

ಕೊರತೆಯನ್ನು ಹೋಗಲಾಡಿಸಿ ಅನೇಕರ ಜೀವನಚರಿತ್ರೆಗಳು ಒಂದೇ ಕಡೆ ಸಿಕ್ಕಿ ಚಿಕ್ಕವರೂ ದೊಡ್ಡವರೂ ಎಲ್ಲರೂ ಅವುಗಳನ್ನು ಮನನ ಮಾಡಿಕೊಳ್ಳುವದರ ಮೂಲಕ ನಮ್ಮ ದೇಶೀಯರೆಲ್ಲರಲ್ಲಿಯೂ ಭಾರ ತೀಯತ್ವವು ಹುರಿದುಂಬಿಕೊಳ್ಳುವದಕ್ಕೆ ಅನುಕೂಲವಾಗಬೇಕೆಂಬ ಉದ್ದೇಶದಿಂದ ಇಲ್ಲಿಯ ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಮಿತಿಯವರು ನನಗೆ ನಿಯಮಿಸಿದ ಪ್ರಕಾರ ನಾನು ಈ ಗ್ರಂಥವನ್ನು ರಚನೆ ಮಾಡಿ ರುತ್ತೇನೆ. ನಮ್ಮ ಭರತಖಂಡದ ಇತಿಹಾಸಕಾಲದಲ್ಲಿ ಮುಖ್ಯರಾಗಿ ಯಾವ ಯಾವ ಜೀವಜ್ಯೋತಿಗಳು ಬೆಳಗಿದರೊ ಅಂಥವರ ಚರಿತ್ರೆ ಗಳನ್ನೆಲ್ಲಾ ಸಾಧ್ಯವಾದಷ್ಟುಮಟ್ಟಿಗೆ ಇದರಲ್ಲಿ ಅಡಕಮಾಡಿರುತ್ತೇನೆ. ದೇಶಕ್ಕಾಗಿ ರಕ್ತವನ್ನು ಬಸಿದವರೇ ಆಗಬೇಕೆಂದಾಗಲಿ, ದೇವರಿಗಾಗಿ ಕಣ್ಣೀರನ್ನು ಸುರಿಸಿದವರೇ ಆಗಬೇಕೆಂದಾಗಲಿ, ಸಂಕುಚಿತಬುದ್ಧಿ ಯನ್ನಿಟ್ಟುಕೊಳ್ಳದೆ ಸ್ತ್ರೀಯರಾಗಲಿ, ಪುರುಷರಾಗಲಿ, ಯಾವ ಜಾತಿ ಯವರಾಗಲಿ, ಯಾವ ಉದ್ಯೋಗದವರಾಗಲಿ, ದೇಶಾಭಿಮಾನದಿಂದ, ಧರ್ಮಾಭಿಮಾನದಿಂದ, ದಾನದಿಂದ, ಭೋಗದಿಂದ, ನೀತಿಯಿಂದ, ಧರ್ಮದಿಂದ, ಭಕ್ತಿಯಿಂದ, ಜ್ಞಾನದಿಂದ, ವೈರಾಗ್ಯದಿಂದ, ಸ್ವಾಭಿ ಮಾನದಿಂದ, ಸಹಾನುಭೂತಿಯಿಂದ, ಮತ್ತು ಸಮಾಜಸಂಸ್ಕರಣದಿಂದ ಯಾರು ಇತರರಿಗೆ ಆದರ್ಶಸ್ವರೂಪರಾಗಿರುವರೊ ಅಂಥವರೆಲ್ಲರ ಚರಿತ್ರೆಗಳನ್ನು ಇಲ್ಲಿ ಆರಿಸಿಕೊಂಡಿರುತ್ತೇನೆ. ನಮ್ಮ ದೇಶದಲ್ಲಿ ಯಶಸ್ವಿ ಗಳಿಷ್ಟೇಯೆಂದು ಮಾತ್ರ ಯಾರೂ ತಿಳಿಯಬಾರದು. ನನಗೆ ಸಿಕ್ಕಿದ ಜೀವನಚರಿತ್ರೆಗಳು ಮಾತ್ರ ಇಷ್ಟೆ. ಇನ್ನೂ ಕೆಲವರ ಚರಿತ್ರೆಗಳೂ ನನ್ನ ದೃಕ್ಪಥವನ್ನು ಹಾದುಹೋದವು. ಆದರೆ ಅವುಗಳಲ್ಲಿ ತಕ್ಕಷ್ಟು ಹೂರಣವು ದೊರೆಯಲಿಲ್ಲವಾದ್ದರಿಂದ ಬರೀ ಕಣಕದಿಂದ ಪ್ರಯೋಜನ ವಿಲ್ಲವೆಂದು ನಾನು ಅವುಗಳನ್ನು ಪರದೆಯೊಳಗಿಟ್ಟಿರುವೆನು. ಆರಿಸಿರುವ ಇಷ್ಟು ಚರಿತ್ರೆಗಳಲ್ಲಾದರೂ ನಡೆದಿರುವ ಸಂಗತಿಗಳಿಷ್ಟೇಯೆಂದು ಕೂಡ ಯಾರೂ ಭಾವಿಸಬಾರದು. ಎಷ್ಟೋ ಸಂಗತಿಗಳು ನಮಗೆ ಗೊತ್ತಾ ಗಿಲ್ಲ. ಗೊತ್ತಾಗಿರುವ ಎಷ್ಟೋ ಸಂಗತಿಗಳಲ್ಲಿಯೂ—ಸ್ವಲ್ಪಪ್ರಮಾ ಣದ ಬೆಣ್ಣೆಯನ್ನು ತೆಗೆದುಕೊಂಡು ಬಹು ಪ್ರಮಾಣದ ಮಜ್ಜಿಗೆಯನ್ನು ದೂರಮಾಡುವಂತೆ — ನಾನು ಸಾರಾಂಶವನ್ನು ಗ್ರಹಿಸಿ ಎಷ್ಟೋ

ಸಾಮಾನ್ಯ ವಿಷಯಗಳನ್ನು ಹಿಂದಕ್ಕೆ ತಳ್ಳಿದ್ದೇನೆ. ಯಾವ ಸಂಗತಿ ಗಳು ನಮ್ಮ ಮನಸ್ಸಿಗೊಂದು ಶಿಕ್ಷಣವನ್ನು ಕೊಡಬಲ್ಲವೊ ಅಂಥ ತೂಕ ವಾದ ಸಂಗತಿಗಳನ್ನು ಗ್ರಹಿಸುವದರ ಕಡೆಗೇ ತನ್ನ ಲಕ್ಷ್ಯವೇ ಹೊರತು ಮಜ್ಜಿಗೆಗೆ ಸಮಾನವಾದ ನಿಸ್ಸಾರವಾದ ಆಗುಹೋಗುಗಳನ್ನು ಒಂದ ಕ್ಕೊಂದು ನೇದು ಪುಸ್ತಕವನ್ನು ಹೊರೆಯಾಗಿ ಮಾಡುವದರ ಕಡೆಗೆ ಇಲ್ಲ. ಜೀವನಚರಿತ್ರೆಗಳಲ್ಲಿ ಅನುಕರಣೀಯವಾದ ಗುಣಾತಿಶಯ ಪ್ರದರ್ಶನಗಳೇ "ಆಯುರ್ವೈಘೃತಂ" ಎಂಬ ಶ್ರುತಿಯಂತೆ ಮುಖ್ಯ ವಾದ ಬೆಣ್ಣೆಯಂಥ ಭಾಗವು. ಇನ್ನು ಗೆದ್ದದ್ದು, ಸೋತದ್ದು, ಸಾಧಿ ಸಿದ್ದು, ಬಿಟ್ಟದ್ದು, ಆದದ್ದು, ಹೋದದ್ದು, ಇವೆಲ್ಲಾ ಮಜ್ಜಿಗೆಯಂಥವು. ಪಾಠಶಾಲೆಗಳಲ್ಲಿ ಕಲಿಸುವ ಇತಿಹಾಸವಲ್ಲಿ ಕೂಡ ಗುಣಗಳ ಸಂಬಂಧ ಪಟ್ಟ ಭಾಗಗಳು ಹೆಚ್ಚಾಗಿರುವದಗತ್ಯ. ಇರಲಿ.

ಈ ಗ್ರಂಥವು ಮೂರುಬಗೆಯಾಗಿ ಉಪಯೋಗವಾಗಬಹುದೆಂದು ನನ್ನ ನಿರೀಕ್ಷಣೆ. ಮೊದಲನೇದು ಸಾಮಾನ್ಯ ಜನರು ವಿರಾಮಕಾಲ ದಲ್ಲಿ ಅಕ್ಕರೆಯಿಂದ ಓದುವದಕ್ಕೆ ಆರಿಸಿ ಇಟ್ಟುಕೊಳ್ಳಬಹುದು. ಎರಡ ನೇದು ಪ್ರೌಢತರಗತಿಯ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಗಿ ಶೋಭಿಸ ಬಹುದು. ಮೂರನೇದು ಪ್ರಾಥಮಿಕ ವರ್ಗಗಳ ಶಿಕ್ಷಕರು ಇದರ ಸಾರಾಂಶವನ್ನು ಗ್ರಹಣಮಾಡಿ ತಮ್ಮ ವಿದ್ಯಾರ್ಥಿಗಳಿಗೆ ಸಣ್ಣ ಸಣ್ಣ ಕಥೆಯಾಗಿ ಹೇಳಬಹುದು. ಅಂತು ಈಗ ಇಲ್ಲಿ ಸಂಗ್ರಹಿಸಿರುವ ವಿಷ ಯಗಳಲ್ಲಿರುವ ರಸವು ಬಹುಜನರ ಹೃದಯದಲ್ಲಿ ಹರಿದರೆ ಆಗ ನಾನು ಕೃತಾರ್ಥನಾದೆನೆಂದು ಭಾವಿಸುವೆನು. ಈ ಗ್ರಂಥವನ್ನು ರಚನೆ ಮಾಡುವದರಲ್ಲಿ ಈ ವಿಷಯಗಳಲ್ಲಿ ಇಂದಿನವರೆಗೆ ಪ್ರಸಾರವಾಗಿರುವ ಎಲ್ಲಾ ಪುಸ್ತಕಗಳನ್ನೂ ಬಹುಮಟ್ಟಿಗೆ ವಿಚಾರಕ್ಕೆ ತೆಗೆದುಕೊಂಡಿರು ತ್ತೇನೆ. ಆದ್ದರಿಂದ ಆ ಎಲ್ಲ ಗ್ರಂಥಕರ್ತರಿಗೂ ನಾನು ಸಂಪೂರ್ಣ ಕೃತಜ್ಞನಾಗಿದ್ದೇನೆ. ಈ ಗ್ರಂಥಕ್ಕೆ ಸೇರಿಸಬಹುದಾದ ಇತರ ವ್ಯಕ್ತಿಗಳ ಹೆಸರನ್ನೂ ತಮಗೆ ಗೊತ್ತಿದ್ದರೆ ಅವರ ಚರಿತ್ರೆಯನ್ನೂ ಅಥವಾ ಅದು ಸಿಕ್ಕುವ ಉಗಮಸ್ಥಾನವನ್ನೂ ಇದರಲ್ಲಿ ಉಲ್ಲೇಖಿಸಿರುವ ವ್ಯಕ್ತಿಗಳ ವಿಚಾರದ ಹೆಚ್ಚುಕಡಿಮೆಗಳನ್ನೂ ಅಭಿಜ್ಞರು ದಯವಿಟ್ಟು ತಿಳಿಸಿದರೆ ಅತ್ಯಂತ ಕೃತಜ್ಞತೆಯಿಂದ ಸ್ವೀಕರಿಸಿ ಮುಂದಿನ ಮುದ್ರಣದಲ್ಲಿ ಅವು

ಗಳನ್ನು ಸೇರಿಸುತ್ತೇನೆ. ಈ ಗ್ರಂಥಕ್ಕೆ ಅಲ್ಲಲ್ಲಿಗೆ ಕೆಲಕೆಲವು ವಿಷಯ ಗಳನ್ನು ಒದಗಿಸಿಕೊಟ್ಟ ಶ್ರೀಯುತ ನಾ. ಶ್ರೀ. ರಾಜಪುರೋಹಿತರ ಉಪಕಾರವನ್ನೂ ಮುದ್ರಣಕ್ಕೆ ಮುಂಚೆ ಗ್ರಂಥದ ಕೆಲವು ಭಾಗವನ್ನು ಓದಿ ಕೆಲವು ಉಪಯುಕ್ತವಾದ ಸೂಚನೆಗಳನ್ನು ಮಾಡಿದ ರಿಟೈರ್ಡ್ ಎಜ್ಯುಕೇಶನಲ್ ಇನಸ್ಪೆಕ್ಟರ್ ಮತ್ತು ಕರ್ಣಾಟಕ ರಾಷ್ಟ್ರೀಯ ಶಿಕ್ಷಣ ಸಮಿತಿಯ ಉಪಾಧ್ಯಕ್ಷರಾದ ಶ್ರೀಯುತ ವಿನಾಯಕ ಬಾಬಾಜಿ ಜೋಶಿ, ಬಿ. ಎ , ಇವರ ಉತ್ತೇಜನವನ್ನೂ ನಾನು ಇಲ್ಲಿ ಸ್ಮರಿಸದಿರಲಾರೆನು.

ಆಷಾಢ<br>ವಿಭವ } **ಗ್ರಂಥಕರ್ತ**

## ಎರಡನೆಯ ಮುದ್ರಣದ

# ಪೀಠಿಕೆ

---

ಈ ಗ್ರಂಥವು ಮದರಾಸುಪ್ರಾಂತ, ಮುಂಬಯಿಪ್ರಾಂತ ಎರಡರಲ್ಲಿಯೂ ಆದರಕ್ಕೆ ಪಾತ್ರವಾಗಿ ಎರಡನೆ ಮುದ್ರಣದ ಸುಯೋಗವನ್ನು ಪಡೆದದ್ದೊಂದು ಸಂತೋಷಕರವಾದ ವಿಷಯವು. ಇದರ ಮೊದಲನೇ ಮುದ್ರಣವು ಹೊರಟಾಗ ಕೆಲಕೆಲವರು ಕೆಲಕೆಲವು ತಿದ್ದುಪಾಡುಗಳನ್ನು ಸೂಚಿಸಿದ್ದರು. ಅದನ್ನು ನೆನಪಿನಲ್ಲಿಟ್ಟುಕೊಂಡು ಇತಿಹಾಸದಲ್ಲಿ ಅಭಿಜ್ಞರಾದವರ ಸಹಾಯವನ್ನು ಪಡೆದು ಈ ಮುದ್ರಣದಲ್ಲಿ ಅಲ್ಲಲ್ಲಿ ಅಗತ್ಯವಾದ ತಿದ್ದುಪಾಡುಗಳನ್ನು ಮಾಡಿದ್ದೇನೆ. ಈ ಸಂದರ್ಭದಲ್ಲಿ ಬೆಂಗಳೂರು ದೇಶೀಯ ವಿದ್ಯಾಶಾಲೆಯ ಅಧ್ಯಾಪಕರಾದ ಶ್ರೀಯುತ ಕೃಷ್ಣಯ್ಯಂಗಾರ್ಯರು, ಬಿ. ಎ. ಇವರಿಗೂ ವಿಶ್ವಕರ್ಣಾಟಕದ ಸಂಪಾದಕರಾದ ಶ್ರೀಯುತ ತಾತಾಚಾರ್ಯ ಶರ್ಮರಿಗೂ ನಾನು ಚಿರಋಣಿಯಾಗಿರುವೆನು. ಇಷ್ಟು ನಾನು ತಿದ್ದಿದರೂ ಇನ್ನೂ ದೋಷಗಳೇನಾದರೂ ಉಳಿದುಕೊಂಡಿದ್ದರೆ ಅದಕ್ಕೆ ನನ್ನ ಪ್ರಮಾದಶೇಷವೇ ಕಾರಣವಾಗಿರುವದು. ಅಂಥದ್ದನ್ನು ಯಾರಾದರೂ ದಯವಿಟ್ಟು ತೋರಿಸಿದರೆ ಕೃತಜ್ಞತಾಪೂರ್ವಕವಾಗಿ ಮುಂದೆ ತಿದ್ದಿಕೊಳ್ಳುವೆನು.

ಜನಮಂಡಲಿಗೆ ಅಸ್ವಾಭಾವಿಕವಾಗಿ ತೋರುವಂಥ ಪವಾಡದ ಪ್ರಸಂಗಗಳಿಗೆ ಈ ಗ್ರಂಥದಲ್ಲಿ ಅವಕಾಶವಿರಬಾರದಾಗಿತ್ತೆಂಬ ಇತಿಹಾಸಜ್ಞರ ಸೂಚನೆಯು ನನ್ನ ವಿಚಾರಪಥದಿಂದ ಹಾರಿಹೋಗಿಲ್ಲ. ಆದರೆ ಈ ಗ್ರಂಥದಲ್ಲಿರುವ ಇಪ್ಪತ್ತೈದು ಜನರ ಚರಿತ್ರೆಯಲ್ಲಿ ಅಶೋಕ, ಎರಡನೆ ಪುಲಿಕೇಶಿ, ಪ್ರತಾಪಸಿಂಹ, ಅಕಬರ, ಶಿವಾಜಿ, ಅಹಲ್ಯಾಬಾಯಿ, ರಣಜಿತಸಿಂಗ, ಲಕ್ಷ್ಮೀಬಾಯಿ ಈ ಎಂಟರ ಹೊರತು ಉಳಿದ ಯಾವದಕ್ಕೂ ವಿಶೇಷ ವಿಷಯಗಳಿಗೆ ಐತಿಹಾಸಿಕವಾದ ಹೆಚ್ಚಿನ ಆಧಾರಗಳು ಕಂಡುಬಂದಿಲ್ಲ. ಇವರ ಜೀವನ ಚರಿತ್ರೆಯಿಂದ ಪರಂಪರೆಯಿಂದ ಜೀವಿಸಿಕೊಂಡು ಬಂದಿರುವ ಪ್ರಸಂಗಗಳನ್ನು ಮಾತ್ರ ಇಲ್ಲಿ ಉಲ್ಲೇಖಿ

ಸಿರುವದಾಗಿದೆ. ಇವು ಪವಾಡಗಳಂತೆ ಕಾಣಬಹುದಾದರೂ ಇತಿಹಾಸ ಸಂಶೋಧಕರು ಈ ಜೀವನಚರಿತ್ರೆಗಳಲ್ಲೊಂದು ನಿರ್ಣಯಕ್ಕೆ ಮುಟ್ಟಿದ ಮೇಲೆ ತಿದ್ದೋಣವೆಂದು ಇವುಗಳನ್ನು ಈಗ ಇರುವಂತೆಯೇ ಬಿಟ್ಟಿರುತ್ತೇನೆ.

ವಿಭವ ಆಷಾಢ
ಬೆಂಗಳೂರು } **ಹೊಸಕೆರೆ ಚಿದಂಬರಯ್ಯಾ**

ವಂದೇ ಮಾತರಮ್

# ಭರತಖಂಡದ ಜೀವಜ್ಯೋತಿಗಳು

---

## ಗೌತಮಬುದ್ಧ

---

### ಹುಟ್ಟು

ಪ್ರಪಂಚದಲ್ಲಿ ಅನಾದಿಕಾಲದಿಂದ ಎಷ್ಟೋ ಜನರು ಹುಟ್ಟಿ ಎಷ್ಟೋ ದಿನಗಳಿದ್ದು ವ್ಯವಹಾರ ಮಾಡಿರುತ್ತಾರೆ. ಆದರೆ ಈ ಪ್ರಪಂಚದ ಹಣೆಯ ಬರಹವೆಷ್ಟೆಂಬುದರ ಕಡೆಗೆ ಕಣ್ಣು ಹಾಕಿ ಸಂಪೂರ್ಣ ವಿಚಾರ ಮಾಡಿ ಅದರ ಕೊರಳಿಗೆ ಬೆಲೆಯ ಪಟ್ಟಿಯನ್ನು ಕಟ್ಟಿದವರು ಮಾತ್ರ ವಿರಳ. ಪ್ರಪಂಚವು ಅಸಾರವೆಂದು ಅದನ್ನು ಕಸದ ಗುಡ್ಡೆಯಂತೆ ಮೂಲೆಗೊತ್ತಿ ಅದರ ಸಂಬಂಧವನ್ನು ಬಿಡಿಸಿಕೊಂಡಿರುವವರು ಕೆಲವರುಂಟು. ಪ್ರಪಂಚದಲ್ಲಿ ಬಗೆಬಗೆಯ ಅನರ್ಥ ಪರಂಪರೆಗಳೊದಗಿದ್ದರಿಂದಲೋ ದಾರಿದ್ರ್ಯ ದುಃಖದಿಂದಲೋ ಅಥವಾ ಏನಾದರೊಂದು ಮಹತ್ವಾಕಾಂಕ್ಷೆಯಿಂದಲೋ ಒಂದು ಬಗೆಯ ವೈರಾಗ್ಯವು ಅವರಿಗೆ ಬಂದಿರುವದು. ಯಾವ ಅನರ್ಥದ ವಾಸನೆಯನ್ನೂ ಕಾಣದೆ ಅಷ್ಟೈಶ್ವರ್ಯವನ್ನು ಹುಲ್ಲಿಗಿಂತ ಕಡೆಯಾಗಿ ಕಂಡ ನಿಜವಾದ ವೈರಾಗ್ಯಕ್ಕೆ ಉದಾಹರಣೆಯನ್ನು ಹೇಳಿ ಬೆಟ್ಟುಮಡಿಸ

ಬೇಕಾದರೆ ಮೊದಲನೆಯವನಾಗುವಂಥವನು ಒಬ್ಬನು ಮಾತ್ರ ಇರುವನು. ಇವನು ಕಾಶಿಗೆ ಉತ್ತರದಲ್ಲಿ ರೋಹಿಣೀನದಿಯ ದಡದಲ್ಲಿರುವ ಕಪಿಲವಸ್ತುವೆಂಬ ಊರಿನ ಅರಸಾಗಿದ್ದ ಆರಸುಮನೆತನದ ಶುದ್ಧೋದನನ ಮಗನು. ಇವನ ತಾಯಿ ಮಾಯಾದೇವಿ. ಈ ಮಹಾರಾಜ್ಞಿಯು ನಲವತ್ತೈದನೆಯ ವಯಸ್ಸಿನವರೆಗೂ ಮಕ್ಕಳಿಲ್ಲದೆ ಆಗ ಗರ್ಭಿಣಿಯಾಗಿ ಹೆರಿಗೆಗೆಂದು ತವರುಮನೆಗೆ ಹೋಗುತ್ತ ದಾರಿಯಲ್ಲಿ ನದಿಯ ದಡದ ಮೇಲಿರುವ "ಲಂಬಿನಿ" ಎಂಬ ಮನೋಹರವಾದ ತಮ್ಮ ಉಪವನದ ಹತ್ತರದಲ್ಲಿಯೇ ಆಯಾಸಗೊಂಡು ರಥದಿಂದಿಳಿದು ಒಂದು ಬೂರಗದ ಮರದ ಕೆಳಗೆ ವಿಶ್ರಮಿಸಿಕೊಳ್ಳುತ್ತ ರಮಣೀಯವಾದ ಹಸರು ಹುಲ್ಲಿನ ಮೇಲೆಯೇ ಕ್ರಿ. ಪೂ. ೬೦೦ ರಲ್ಲ ಈ ಸುಪುತ್ರನನ್ನು ಹಡೆದಳು. ನಡುದಾರಿಯಲ್ಲಿಯೇ ಹೆರಿಗೆಯಾದದ್ದಕ್ಕಾಗಿ ತಂದೆತಾಯಿಗಳ ಮನಸ್ಸಿಗೆ ಬಹಳ ಸಂಕೋಚವಾಯಿತು. ಶುದ್ಧೋದನನು ಸಮೀಪದಲ್ಲಿ ತಪಶ್ಚರ್ಯೆಯನ್ನು ಮಾಡುತ್ತಿದ್ದ ಅಸೀತನೆಂಬ ಋಷಿಯನ್ನು ಕರೆದುಕೊಂಡು ಬಂದು ತೋರಿಸಲು ಆ ಋಷಿಯು ಶಾಂತಿಮಯವಾದ ಆ ಶಿಶುವಿನ ಮುಖಚರ್ಯೆಯನ್ನು ನೋಡಿ ಅದರ ಭಾವೀ ಕಲ್ಯಾಣವನ್ನು ಊಹಿಸಿ ಹೇಳಿ ಅದಕ್ಕೆ ಸಿದ್ಧಾರ್ಥನೆಂಬ ಹೆಸರಿಟ್ಟನು. ಶುದ್ಧೋದನನು ಅಲ್ಲಿಂದ ಪತ್ನಿಯೊಡನೆ ಪಟ್ಟಣಕ್ಕೆ ಹಿಂದಿರುಗಿದನು.

## ವಿವಾಹ

ಹಡೆದ ಏಳು ದಿನಗಳಲ್ಲಿಯೇ ಮಾಯಾದೇವಿಯು ಮಗನನ್ನು ಬಿಟ್ಟು ಮೃತ್ಯುವನ್ನು ಮಡಿಲಲ್ಲಿ ಹಾಕಿಕೊಳ್ಳಬೇಕಾಯಿತು. ಆಗ ಆಕೆಯು ತನ್ನ ಸವತಿಯಾದ ಪ್ರಜಾವತಿಯ ತೊಡೆಯ ಮೇಲೆ ತನ್ನ ಮುದ್ದುಮಗುವನ್ನಿಟ್ಟು ಮೃತಳಾದಳು. ಪ್ರಜಾವತಿಯ ಪಾಲನೆಯಿಂದ ಸಿದ್ಧಾರ್ಥನು ನಿರಾತಂಕದಿಂದ ಬೆಳೆದನು. ಆದರೆ ಈ ಹುಡುಗನ ಸ್ಥಿತಿಯು ಒಂದುಬಗೆಯಲ್ಲಿ ವಿಲಕ್ಷಣವಾಗಿತ್ತು. ಆಟಪಾಟಗಳ ಆನಂದದಲ್ಲಿ ಮಗ್ನನಾಗದೆ ಸಿದ್ಧಾರ್ಥನು ಊರ ಹೊರಗಣ ಒಂದು ಜಂಬೂವೃಕ್ಷದ ನೆರಳಿನಲ್ಲಿ ಸುಮ್ಮನೆ ಕುಳಿತು ಏನನ್ನೋ ತನ್ಮಯಚಿತ್ತದಿಂದ ಆಗಾಗ್ಗೆ ಯೋಚಿಸುತ್ತಿದ್ದನು. ಇದರಿಂದ ಜನರು ಇವನಿಗೇನೋ ಒಂದುಬಗೆಯ ಮಂಕು ಕವಿದುಕೊಂಡಿರುವದೆಂದು

ತಿಳಿದುಕೊಂಡರು. ಹೀಗಾದ್ದರಿಂದ ಅವನು ದೊಡ್ಡವನಾದ ಮೇಲೆ ಅವನಿಗೆ ಹೆಣ್ಣು ಕೊಡುವದಕ್ಕೆ ಕೂಡ ವಿಶೇಷವಾಗಿ ಯಾರೂ ಮುಂದಕ್ಕೆ ಬರದೆ ಹೋದರು. ಅರಸನಾದ ಶುದ್ಧೋದನನು ಹೇಗಾದರೂ ಮಗನ ಮದುವೆಯನ್ನು ಮಾಡಬೇಕೆಂದು ಸಡಗರವನ್ನು ನಡೆಸಿದಾಗ ಸಿದ್ಧಾರ್ಥನು ತನ್ನ ಮುಖದಿಂದ ಸಂತುಷ್ಟಳೆಂದು ತೋರಿದಂಥ ಯಶೋಧರೆಯೆಂಬ ಕನ್ಯೆಯನ್ನು ವರಿಸಿದನು. ಬೇಕಾದಷ್ಟು ವೈಭವದಿಂದ ವಿವಾಹಮಹೋತ್ಸವವು ನೆರವೇರಿತು. ಆಗ ಸಿದ್ಧಾರ್ಥನ ವಯಸ್ಸು ಹತ್ತೊಂಬತ್ತು. ಆಮೇಲೆ ಸಿದ್ಧಾರ್ಥನ ಗೃಹಸ್ಥವೃತ್ತಿಯು ಸರ್ವವಿಧದಿಂದಲೂ ಸುಖಕರವಾಗಿ ನಡೆಯಿತು. ಕೆಲವು ದಿನಗಳಲ್ಲಿ ಸಿದ್ಧಾರ್ಥನಿಗೆ ರೋಹಿಲನೆಂಬ ಮಗನು ಹುಟ್ಟಿದನು.

## ವಿರಕ್ತನಾದದ್ದು

ಅವನಿಗೆ ಇಪ್ಪತ್ತೊಂಬತ್ತನೆಯ ವಯಸ್ಸು ಬಂದಾಗ ಒಮ್ಮೆ ನಗರಶೋಭೆಯನ್ನು ನೋಡಿಕೊಂಡು ಬರಬೇಕೆಂದಿಚ್ಛೆಯಾಯಿತು. ಈ ಸಮಯದಲ್ಲಿ ಭಾವನಾಮಯನಾದ ತನ್ನ ಮಗನ ಮನಸ್ಸಿಗೆ ತಳಮಳವನ್ನುಂಟುಮಾಡುವಂಥ ಯಾವ ವಸ್ತುವೂ ಕಣ್ಣಿಗೆ ಬೀಳದೆ ನಗರವೆಲ್ಲಾ ಸಂಪೂರ್ಣವಾಗಿ ಆನಂದಕರವೇ ಆಗಿರುವಂತೆ ವ್ಯವಸ್ಥೆಯನ್ನು ಮಾಡಿ ಶುದ್ಧೋದನನು ಚೆನ್ನನೆಂಬ ಸಾರಥಿಯನ್ನು ಕೊಟ್ಟು ಮಗನನ್ನು ಕಳುಹಿಸಿದನು. ಸಿದ್ಧಾರ್ಥನು ರಥಾರೂಢನಾಗಿ ಆನಂದಾನುಭವಮಾಡುತ್ತ ಬರುತ್ತಿರುವಾಗ ದಾರಿಯಲ್ಲಿ ಒಬ್ಬ ಮುದುಕನು ಅವನಿಗೆ ದೃಗ್ಗೋಚರನಾದನು. ಸಿದ್ಧಾರ್ಥನು ಇದುವರಿಗೆ ಮುದುಕರನ್ನು ನೋಡಿಯೇ ಇರಲಿಲ್ಲ. ಚರ್ಮವೆಲ್ಲಾ ಸುಕ್ಕಿರುವದನ್ನೂ ಕಣ್ಣುಗಳು ಆಳವಾದ ಗುಂಡಿಗಳಾಗಿದ್ದದ್ದನ್ನೂ ಹಲ್ಲುಗಳಿಲ್ಲದ ಬಚ್ಚುಬಾಯನ್ನೂ ಬೆಳ್ಳಗೆ ನರೆತ ಕೂದಲನ್ನೂ ಬಗ್ಗಿದ ಸೊಂಟವನ್ನೂ ಕಣ್ಣು ಕಾಣದೆ ಕೈಯಲ್ಲಿ ಕೋಲುಹಿಡಿದುಕೊಂಡು ತಡವರಿಸುತ್ತಿರುವದನ್ನೂ ನೋಡಿದೊಡನೆ ಸಿದ್ಧಾರ್ಥನ ಎದೆಯಲ್ಲಿ ಧಮ್ಮೆಂದಿತು. ಇದು ಯಾವ ಪ್ರಾಣಿಯೆಂದು ಅವನು ಚೆನ್ನನನ್ನು ಕೇಳಿದನು. ಚೆನ್ನನು ಯಥಾರ್ಥವನ್ನು ಹೇಳಿದನು. "ಹಾಗಾದರೆ ಈ ಸ್ಥಿತಿಯು ನನಗೂ

ಬರುವದುಂಟೆ ” ಎಂದು ಸಿದ್ಧಾರ್ಥನ ಮನಸ್ಸಿನಲ್ಲಿ ಒಂದು ಬಗೆಯ ತಳಮಳವು ಹೊಗೆಯಾಡುವದಕ್ಕಾರಂಭವಾಯಿತು. ಇದನ್ನೇ ಯೋಚಿಸುತ್ತ ಹೋಗುವಷ್ಟರಲ್ಲಿ ಒಬ್ಬ ರೋಗಿಯು ಎದುರಿಗೆ ಬಂದನು. ವಿಕಾರ ಸ್ವರದಿಂದ ನರಳುತ್ತ ದೈನ್ಯದಿಂದ ನೋಡುತ್ತ ದುಃಖವೇ ಆಕೃತಿಗೊಂಡಂತೆ ತೋರುತ್ತಿದ್ದ ಆ ರೋಗಿಯನ್ನು ನೋಡಿದೊಡನೆ ಸಿದ್ಧಾರ್ಥನು ಮತ್ತಿಷ್ಟು ಗಾಬರಿಯಾದನು. ಚೆನ್ನನು ಅವನ ವಿಷಯವನ್ನೂ ರಾಜಕುಮಾರನಿಗೆ ಸೂಕ್ಷ್ಮವಾಗಿ ತಿಳಿಯಹೇಳಿದನು. ಇಂಥ ದುಃಖವು ತನಗೂ ಕಾದಿರುವದೆಂದು ಸಿದ್ಧಾರ್ಥನ ತಳಮಳವು ಸಣ್ಣ ಸಣ್ಣ ಜ್ವಾಲಾರೂಪವನ್ನು ಪಡೆಯಿತು. ಆಗ ಚೆನ್ನನು ಆ ದಾರಿಯನ್ನೇ ಬಿಟ್ಟು ರಥವನ್ನು ಮತ್ತೊಂದು ದಾರಿಗೆ ತಿರುಗಿಸಿದನು. ದೈವಯೋಗದಿಂದ ಅಲ್ಲೊಂದು ಶವವೇ ಇದಿರಾಗಿ ಬಂತು. ಮುಖವೆಲ್ಲಾ ವಿಕಾರವಾಗಿ ಜಡವಾಗಿ ಹೊಲಸಾಗಿ ಸ್ಮಶಾನಯಾತ್ರೆಗೆ ಹೊರಟಿದ್ದ ಶವದ ವಿಚಾರವನ್ನು ಚೆನ್ನನ ಮುಖದಿಂದ ತಿಳಿದಾಗ ಸಿದ್ಧಾರ್ಥನ ತಳಮಳವು ಚೆನ್ನಾಗಿ ಹತ್ತಿಕೊಂಡು ಉರಿಯುವದಕ್ಕೇ ಆರಂಭವಾಯಿತು. ಆಗ ಸಿದ್ಧಾರ್ಥನು ಹೀಗೆ ಎಲ್ಲದೂ ಕೊನೆಗೆ ಮಣ್ಣಾಗಿ ಹೋಗುವದಾದ ಮೇಲೆ ಇನ್ನು ಮುಂದೇನೂ ನೋಡತಕ್ಕದ್ದಿಲ್ಲವೆಂದು ಮಹಾಚಿಂತೆಯಿಂದ ಕೂಡಿದ ಮುಖವುಳ್ಳವನಾಗಿ ಊರ ಕಡೆಗೆ ಹಿಂದಿರುಗಿ ಅರಮನೆಯ ಮುಂದೆ ಬಂದು ನಿಂತನು. ಆಗ ಪದ್ಧತಿಯ ಪ್ರಕಾರ ಒಬ್ಬ ಕನ್ಯೆಯು ಬಂದು “ ನಿನ್ನನ್ನು ಹಡೆದ ತಾಯಿ-ತಂದೆಗಳೂ ಮದುವೆಮಾಡಿಕೊಂಡ ಸ್ತ್ರೀಯೂ ಧನ್ಯರು ” ಎಂಬರ್ಥದ ಹಾಡನ್ನು ಹೇಳಿ ಆರತಿಯನ್ನೆತ್ತಿದಳು. ಸಿದ್ಧಾರ್ಥನು “ ನಾನು ದುಃಖದ ಪರಿಹಾರವನ್ನು ಕಂಡು ಆ ಕನ್ಯೆಯ ಆಶಯದಂತೆ ಅವರನ್ನು ಧನ್ಯರನ್ನಾಗಿ ಮಾಡಬೇಕು ” ಎಂದು ನಿಶ್ಚಯಮಾಡಿಕೊಂಡು ಒಂದು ರತ್ನಮಾಲಿಕೆಯನ್ನು ಆ ಆರತಿಯ ತಟ್ಟೆಯೊಳಕ್ಕೆ ಹಾಕಿದನು. ಪ್ರಾಪಂಚಿಕ ಸುಖಾಭಿಲಾಷಿಯಾದ ಆ ಹುಡುಗಿಯು ತಾನು ಒಂದು ವೇಳೆ ಸಿದ್ಧಾರ್ಥನ ಪತ್ನಿಯೂ ಕೂಡ ಆಗಬಹುದಾದ ಸಮಯ ಒದಗಬಹುದೆಂದಂದುಕೊಂಡು ಹೋದಳು. ಇತ್ತ ಸಿದ್ಧಾರ್ಥನು ಚಿಂತಾತುರವಾದ ಮುಖಮುದ್ರೆಯಿಂದ ಒಳಹೊಕ್ಕನು. ಪ್ರತಿದಿನವೂ ಆನಂದದ ತೆರೆಗಳನ್ನು ಹಾಯಿಸುತ್ತಿದ್ದ ಯಶೋಧರೆಯೂ ರೋಹಿಲನೂ

ಅಂದು ನೀರಸರಾಗಿದ್ದರು. ಮಗನು ಈ ರೀತಿಯಾಗಿ ದಿಗ್ಭ್ರಾಂತನಾಗಿರುವದನ್ನು ನೋಡಿ ಶುದ್ಧೋದನನು ನರ್ತನಗಾಯನಾದಿ ಕಲಾಪಗಳನ್ನು ಹೂಡಿದನು. ಯಾವದೂ ಸಿದ್ಧಾರ್ಥನ ಮನಸ್ಸನ್ನು ಸೆಳೆಯಲಿಲ್ಲ. ಸಿದ್ಧಾರ್ಥನು ರಾತ್ರಿ ಮಲಗುವ ಮನೆಗೆ ಹೋದನು. ಹಂಸತೂಲಿಕಾತಲ್ಪವು ಅವನಿಗೆ ಮುಳ್ಳುಹಾಸಿಗೆಯಾಗಿ ತೋರಿತು. ಏನು ಮಾಡಿದರೂ ಕಣ್ಣಿಗೆ ನಿದ್ರೆಹತ್ತದೆ ಅವನಿಗೆ ಮೈಯೆಲ್ಲಾ ಉರಿಯುಂಟಾದಂತಾಯಿತು. ಆಗ ಅವನು ಅಲ್ಲಿಂದೆದ್ದು ಆ ರಾತ್ರಿಯೇ ಉಪವನಕ್ಕೆ ಹೋಗಿ ಸುಮ್ಮನೆ ತಿರುಗಾಡುತ್ತಿದ್ದನು. ಅಲ್ಲಿ ಅವನಿಗೆ ಒಬ್ಬ ಯೋಗಿಯ ದರ್ಶನವಾಯಿತು. ನೀನು ಯಾರೆಂದು ಸಿದ್ಧಾರ್ಥನು ಕೇಳಲು ಆ ಯೋಗಿಯು ತಾನು ದುಃಖಮಯವಾದ ಈ ಪ್ರಪಂಚವನ್ನು ಬಿಟ್ಟು ಸುಖವನ್ನು ಹುಡುಕುವವನೆಂದು ಹೇಳಿದನು. ತಾನೂ ಅದೇ ದಾರಿಯನ್ನು ಹಿಡಿಯಬೇಕೆಂದು ನಿಶ್ಚಯಿಸಿ ಕೊನೆಯ ಸಲ ಹೆಂಡತಿಯನ್ನೂ ಮಗನನ್ನೂ ಒಮ್ಮೆ ನೋಡಬೇಕೆಂದು ಸಿದ್ಧಾರ್ಥನು ಮನೆಗೆ ಬಂದನು. ಯಶೋಧರೆಗೆ ತುಂಬ ನಿದ್ರೆ ಹತ್ತಿತ್ತು. ರೋಹಿಲನು ತಾಯಿಯ ತೋಳಮೇಲೆ ತಲೆಯನ್ನಿಟ್ಟುಕೊಂಡು ನಿದ್ರೆಹೋಗಿದ್ದನು. ಒಮ್ಮೆ ಅವರ ಮುದ್ದುಮುಖಕ್ಕೆ ಮುತ್ತುಕೊಡಬೇಕೆಂದು ಸಿದ್ಧಾರ್ಥನ ಮನಸ್ಸು ತವಕಿಸಿತು. ಆದರೆ ಅವರನ್ನು ಎಚ್ಚರಗೊಳಿಸುವದು ಸಿದ್ಧಾರ್ಥನ ಮನಸ್ಸಿಗೆ ಬರಲಿಲ್ಲ. ಮನೆಗೆ ಬೆಂಕಿಹತ್ತಿದರೆ ಒಡನೆ ಹೊರಬೀಳುವ ಹಾಗೆ ಸಿದ್ಧಾರ್ಥನು ಹೃದಯದಲ್ಲಿ ಪ್ರಜ್ವಲಿಸುತ್ತಿರುವ ಅಗ್ನಿಯಿಂದ ತತ್‌ಕ್ಷಣವೇ ಪ್ರಯತ್ನಪೂರ್ವಕವಾಗಿ ಆ ಸ್ಥಳದಿಂದ ಹಿಂದಿರುಗಿ ಬಾಗಿಲನ್ನು ದಾಟಿ ಚೆನ್ನನನ್ನೆಬ್ಬಿಸಿ ಸಂಗಡ ಕರೆದುಕೊಂಡು ಒಂದು ಉತ್ತಮಾಶ್ವವನ್ನೇರಿ ಹೊರಟನು. ಆ ನಗರದ ಮೇರೆಯನ್ನು ದಾಟಿದ ಮೇಲೆ ಸಿದ್ಧಾರ್ಥನು ತನ್ನ ರಾಜಯೋಗ್ಯವಾದ ವಸ್ತ್ರಾಭರಣಗಳನ್ನೆಲ್ಲಾ ಚೆನ್ನನ ಕೈಯಲ್ಲಿ ಕೊಟ್ಟು ತಪೋವನಕ್ಕೆ ತೆರಳುತ್ತಿರುವ ತನ್ನ ಮನೋಗತವನ್ನು ತಿಳಿಸಿ ಅವನನ್ನು ಕುದುರೆಯೊಡನೆ ಹಿಂದಕ್ಕೆ ಕಳುಹಿಸಿ ಬಿಟ್ಟನು. ಬೆಳಗಾದ ಮೇಲೆ ಅರಮನೆಯವರೂ ಊರಿನವರೂ—ಎಲ್ಲರೂ ಚೆನ್ನನಿಂದ ಈ ಸಮಾಚಾರವನ್ನು ಕೇಳಿ ಅತ್ಯಂತ ದುಃಖಾಕುಲಿತರಾದರು. ನಗರವೆಲ್ಲಾ ರೋದನ ಧ್ವನಿಯಿಂದ ತುಂಬಿತು.

## ಸನ್ಯಾಸ

ಆ ದಿನ ಪೌರ್ಣಿಮೆಯಾಗಿತ್ತು. ಹಾಲು ಚೆಲ್ಲಿದ ಹಾಗೆ ಬಿದ್ದಿದ್ದ ಬೆಳದಿಂಗಳಲ್ಲಿ ಸಿದ್ಧಾರ್ಥನು ಲೋಕದ ದುಃಖಕ್ಕೆ ಪರಿಹಾರವೇನೆಂದು ಚಿಂತಿಸುತ್ತ ಹೊರಟನು. ಅಲ್ಲೊಬ್ಬ ಬೇಡನು ಮೃಗಪಕ್ಷಿಗಳಿಗೆ ಮೋಸ ಮಾಡಬೇಕೆಂದು ಕಾವಿಯ ಬಟ್ಟೆಯನ್ನು ಧರಿಸಿ ಬರುತ್ತಿರಲು ಸಿದ್ಧಾರ್ಥನು ಅವನನ್ನು ನೋಡಿ ನಮಸ್ಕರಿಸಿ ಆ ವಸ್ತ್ರಗಳನ್ನು ತನಗೆ ಕೊಡೆಂದು ಬೇಡಿದನು. ಆ ಬೇಡನು ತಾನು ಬರೀ ವೇಷದವನೇ ಹೊರತು ಪೂಜ್ಯನಲ್ಲವೆಂದು ಹೇಳಿದರು ಕೂಡ ಸಿದ್ಧಾರ್ಥನು ಅವನನ್ನು ಆದರಿಸಿ ಅವನಿಂದ ಅವುಗಳನ್ನು ಪಡೆದು ತನ್ನ ಕತ್ತಿಯಿಂದಲೇ ತನ್ನ ಜುಟ್ಟನ್ನು ತಾನೇ ಕೊಯ್ದು ಹಾಕಿ ಆ ಬೇಡನ ಕಾವಿಯನ್ನು ಧರಿಸಿ ಆ ತನ್ನ ಕತ್ತಿ ಮೊದಲಾದದ್ದನ್ನು ಆ ಬೇಡನಿಗೇ ಕೊಟ್ಟುಬಿಟ್ಟು ಅಂದಿನಿಂದ ಅವನು ಸನ್ಯಾಸಿಯೇ ಆದನು.

## ಸಿದ್ಧಾರ್ಥನು ಬುದ್ಧನಾದದ್ದು

ಅಲ್ಲಿಂದ ಮುಂದೆ ಸಾಗಿದ ಸಿದ್ಧಾರ್ಥನು ಒಂದು ಆಶ್ರಮಕ್ಕೆ ಹೋಗಿ ಅಲ್ಲಿ ಬ್ರಾಹ್ಮಣರಲ್ಲಿ ಯಜ್ಞಯಾಗಾದಿಗಳ ಮರ್ಮವನ್ನೆಲ್ಲ ತಿಳಿದನು. ಆದರೂ ಮನಸ್ಸಿಗೆ ಸಮಾಧಾನವಾಗಲಿಲ್ಲ. ಶಾಂತತೆಯನ್ನು ಪಡೆಯುವದಕ್ಕೆ ಏನು ಮಾಡಬೇಕೆಂದು ಸಿದ್ಧಾರ್ಥನು ಅವರನ್ನು ಕೇಳಿದನು. ಅವರು ತಮಗೇನೂ ಹೆಚ್ಚಿನದು ತಿಳಿಯದೆಂದೂ ಪಿಂಡ ಪರ್ವತದಲ್ಲಿರುವ ಪ್ರಸಿದ್ಧ ಮಹರ್ಷಿಗಳನ್ನು ಕೇಳಿದರೇನಾದರೂ ತಿಳಿಯಬಹುದೆಂದೂ ಹೇಳಿದರು. ಒಡನೆ ಅವನು ಅಲ್ಲಿಂದ ಹೊರಟು ತನ್ನ ಇಷ್ಟ ಸಿದ್ಧಿಗಾಗಿ ಏಳು ದಿನ ಒಂದು ಮಾವಿನ ತೋಪಿನಲ್ಲಿ ತಪಶ್ಚರ್ಯೆಯಿಂದಿದ್ದನು. ಆಮೇಲೆ ವಿಂಧ್ಯಾದ್ರಿಯಲ್ಲಿ ಆರು ವರ್ಷ ಅನ್ನನೀರು ಕೂಡ ಇಲ್ಲದಂಥ ಕಠಿನ ತಪಶ್ಚರ್ಯೆಯಾಯಿತು. ಒಮ್ಮೆ ಅವನು ಮುಂದಡಿಯಿಡಲಾರದೆ ಒಂದುಕಡೆ ಬಿದ್ದು ಆಮೇಲೆ ಸ್ವಲ್ಪ ಸ್ವಲ್ಪವಾಗಿ ಆಹಾರವನ್ನು ತೆಗೆದುಕೊಳ್ಳುವದಕ್ಕಾರಂಭಿಸಿದನು. ಕೊನೆಗೆ ಆವನು ಪಿಂಡಪರ್ವತವೆಂಬ ಸ್ಥಲವನ್ನು ಸೇರಿ ಆಲಲೋಮನೆಂಬ ಸಾಧುವನ್ನು ಆಶ್ರಯಿಸಿದನು. ಆಲಲೋಮನು

ಇವನ ಸಂಶಯಗಳನ್ನೆಲ್ಲಾ ಕಳೆದು ಪ್ರಪಂಚದಲ್ಲಿ ಸುಖವಿಲ್ಲವಾದ್ದರಿಂದ ಅದು ತುಚ್ಛವೆಂದೂ ದುಃಖಮಯವಾದ ಪ್ರಪಂಚದಲ್ಲಿರುವಾಗ ಪರಸ್ಪರ ಬಂಧುಪ್ರೇಮದ ವರ್ತನೆಯೊಂದೇ ಸಾಧಕವೆಂದೂ ಮನಗಾಣಿಸಿದನು. ಆಗ ಸಿದ್ಧಾರ್ಥನ ಮನಸ್ಸು ಸಮಾಧಾನವನ್ನು ಪಡೆಯಿತು. ಆ ಮನಸ್ಸಿನ ಪರಿಸ್ಥಿತಿಯನ್ನು ನೋಡಿ ಅಲಲೋಮನು ಅವನಿಗೆ ಬುದ್ಧನೆಂದು ಹೆಸರಿಟ್ಟು ಈ ಮೂಲಮಂತ್ರವನ್ನು ಲೋಕಕ್ಕೆಲ್ಲಾ ಉಪದೇಶ ಮಾಡೆಂದು ಆಜ್ಞೆಮಾಡಿದನು. ಸಿದ್ಧಾರ್ಥನಿಗೂ ಅದೇ ಬೇಕಾಗಿತ್ತು. ಆದ್ದರಿಂದ ಅವನು ಮುಂದೆ ಬುದ್ಧನೆಂಬ ಹೆಸರಿನಿಂದ ಉಪದೇಶಕ್ಕಾಗಿ ಹೊರಟನು. ಗೌತಮನೆಂಬ ಮನೆತನದ ಹೆಸರಿನಿಂದ ಕೂಡಿ ಬುದ್ಧನು ಪೂರ್ಣಚಂದ್ರನಾಗಿ ತನ್ನ ಷೋಡಶ ಕಿರಣಗಳನ್ನು ಪಸರಿಸಿ ಜಗತ್ತಿನ ವಾತಾವರಣವನ್ನೆಲ್ಲ ಆನಂದಕರವಾಗಿ ಮಾಡುವ ಉದ್ಯೋಗಕ್ಕೆ ದೀಕ್ಷೆಯನ್ನು ವಹಿಸಿದನು.

## ಬುದ್ಧಧರ್ಮದ ಸಾಮಾನ್ಯ ಪ್ರಸಾರ

ಪರಮ ಶಾಂತಿಯನ್ನು ಪಡೆದ ಬುದ್ಧನು ತನ್ನನ್ನು ಮೊದಲು ಈ ದಾರಿಗೆ ತಿರುಗಿಸಿದಂಥ ಅಲಾರಾ ಮತ್ತು ಉದ್ರಕ ಎಂಬ ಗುರುಗಳ ಮತ್ತು ತನ್ನ ತಪಶ್ಚರ್ಯೆಯ ಕಾಲದಲ್ಲ ಮೊದಲು ಶಿಷ್ಯತ್ವವನ್ನು ತೋರಿಸಿ ಕೊಂಡಿದ್ದಂಥ ಕೆಲವರ ಬಳಿಗೆ ಹೋಗಿ ತನ್ನ ಸಿದ್ಧಾಂತವನ್ನು ಉಪದೇಶ ಮಾಡಿ ಅವರ ಮನಸ್ಸಿನ ತಳಮಳವನ್ನು ಕಳೆದು ಅವರನ್ನು ತನ್ನ ಶಿಷ್ಯರನ್ನಾಗಿ ಮಾಡಿಕೊಂಡನು. ಅಲ್ಲಿಂದ ಹೊರಟು ಅವನು ಅನೇಕ ಊರುಗಳನ್ನು ತಿರುಗುತ್ತ ಜನರ ವಿಷಯಾಸಕ್ತಿಯನ್ನು ತಗ್ಗಿಸುತ್ತ ಅಶಾಶ್ವತವಾದ ಈ ಪ್ರಪಂಚದಲ್ಲಿ ಬಂಧುಪ್ರೇಮ ಮೊದಲಾದ ಸದ್ವರ್ತನವೇ ಗತಿಯೆಂದು ಹೇಳುತ್ತ ಉತ್ತಮ ನೀತಿ ಮಾರ್ಗವನ್ನು ಉಪದೇಶ ಮಾಡಿದನು. ಇದರಿಂದ ಎಲ್ಲರ ಮನಸ್ಸೂ ತನಗೆ ತಾನೇ ಬುದ್ಧನ ಕಡೆಗೆ ಹೊರಳಿ ಬರುವದಕ್ಕಾರಂಭಿಸಿತು. ಇವನ ಉಪದೇಶವು ಸರ್ವರಿಗೂ ಹಾಲುಕುಡಿದ ಹಾಗೆ ಹಿತವಾಗುತ್ತಿದ್ದದರಿಂದ ಅನೇಕ ಬ್ರಾಹ್ಮಣರು ಕೂಡ ಬಂದು ತಮ್ಮ ಕರ್ಮಜಡತ್ವವೆಂಬ ಕಗ್ಗಂಟುಗಳನ್ನು ಕತ್ತರಿಸಿಹಾಕಿ ಬೌದ್ಧದೀಕ್ಷೆಯನ್ನು ವಹಿಸಿಬಿಟ್ಟರು. ಆದ್ದರಿಂದ ಅವನ ಶಿಷ್ಯವೃಂದವು ಅಪಾರವಾಗಿ ಬೆಳೆಯಿತು.

## ಬಿಂಬಸಾರನು ಶಿಷ್ಯನಾದದ್ದು

ಹೀಗೆ ತನ್ನ ಧರ್ಮವನ್ನು ಹರಡುತ್ತ ಬುದ್ಧನು ರಾಜಗೃಹಕ್ಕೆ ಬಂದನು. ಅಲ್ಲಿ ಬಿಂಬಸಾರನು ಅರಸನಾಗಿದ್ದನು. ಆಗ ಬುದ್ಧನು ತೆಂಗಿನ ಚಿಪ್ಪನ್ನು ಕೈಯಲ್ಲಿ ಹಿಡಿದು ಭಿಕ್ಷೆಗೆ ಹೊರಟನು. ಬುದ್ಧನ ಮುಖವನ್ನು ನೋಡಿ ಆವನ ತೇಜಸ್ಸಿಗೆ ಬೆರಗಾಗಿ ಅವನ ವಿಚಾರವನ್ನು ಜನರು ಬಿಂಬಸಾರನ ಕಿವಿಯ ಮೇಲೆ ಹಾಕಿದರು. ಬಿಂಬಸಾರನು ಸಾಕ್ಷಾತ್ತಾಗಿ ಬಂದು ನೋಡಿ ಅವನ ಪ್ರಭಾವದಿಂದ ವಶೀಕೃತನಾದವನಾಗಿ ಅವನಿಗೆ ಉತ್ತಮವಾದ ವಸ್ತ್ರಾಲಂಕಾರಗಳನ್ನು ಕೊಡಹೋದನು. ಬುದ್ಧನು ಅವುಗಳನ್ನು ಸ್ವೀಕರಿಸಲಿಲ್ಲ. ರೋಗಕ್ಕೆ ಪರಿಹಾರೋಪಾಯವನ್ನು ಮಾಡಬೇಕೇ ಹೊರತು ಪುಷ್ಟಿಗೊಡುವದು ಹೇಗೆ ಯೋಗ್ಯವಲ್ಲವೋ ಹಾಗೆ ವಿಷಯಾಸಕ್ತಿಯನ್ನು ಹೋಗಲಾಡಿಸಬೇಕೇ ಹೊರತು ಆದರ ಉಲ್ಬಣಕ್ಕೆ ಒತ್ತಾಶೆ ಮಾಡುವದು ಯೋಗ್ಯವಲ್ಲವೆಂದು ಬುದ್ಧನು ಹೇಳಿದನು. ಈ ಉತ್ಕಟವಾದ ವೈರಾಗ್ಯವನ್ನೂ ಇದರಿಂದ ಅವನಿಗುಂಟಾಗಿರುವ ಶಾಂತಿಯನ್ನೂ ನೋಡಿ ಬಿಂಬಸಾರನು ತಾನೂ ಕುಟುಂಬಸಮೇತನಾಗಿ ಆವನಿಗೆ ಶಿಷ್ಯನಾದನು.

## ಕಪಿಲವಸ್ತುವಿಗೆ ಹೋಗಲೊಪ್ಪಿದ್ದು

ಬುದ್ಧನು ಅಲ್ಲಿಂದ ತನ್ನ ಧರ್ಮವನ್ನು ಹಬ್ಬಿಸುತ್ತ ಒಂದು ಆಶ್ರಮವನ್ನು ಸೇರಿ ಅಲ್ಲಿ ತನ್ನ ನೀತಿತತ್ತ್ವಗಳನ್ನುಪದೇಶ ಮಾಡುತ್ತ ನಿಂತನು. ತನ್ನ ಮಗನು ಹೀಗೆ ಸಂಚಾರದಲ್ಲಿ ಹೊರಬಿದ್ದಿರುವದನ್ನು ಕೇಳಿ ಆವನನ್ನು ಊರಿಗೆ ಕರೆದು ತಂದು ತನ್ನ ದಾರಿಗೆ ತಿರುಗಿಸಬೇಕೆಂದು ಉದ್ದೇಶ ಮಾಡಿ ಶುದ್ಧೋದನನು ತನ್ನ ಮಂತ್ರಿಯನ್ನು ಅವನ ಬಳಿಗೆ ಕಳುಹಿಸಿದನು. ಆ ಮಂತ್ರಿಯು ಹುಡುಕಿಕೊಂಡು ಬಂದಾಗ ಬುದ್ಧನು ಧ್ಯಾನಾರೂಢನಾಗಿ ಕೂತಿದ್ದನು. ಮಂತ್ರಿಗೆ ಅವನ ಗುರ್ತು ಸಿಕ್ಕಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಬುದ್ಧನೇ ಬಹಿರ್ಮುಖನಾಗಿ ಮಂತ್ರಿಯನ್ನು ಗುರ್ತು ಹಿಡಿದು ಮಾತಾಡಿಸಿದನು. ಮಂತ್ರಿಯು ಆಶ್ಚರ್ಯಚಕಿತನಾಗಿ ನಡೆದ ಸಂಗತಿಯನ್ನೆಲ್ಲ ಕೇಳಿ ಮನೆಯ ಜನರ ದುರವಸ್ಥೆಯನ್ನೆಲ್ಲ ಅವನ ಮುಂದೆ ವರ್ಣಿಸಿ ಇನ್ನಾದರೂ ಸರಿಯಾದ

ಪ್ರಾಪಂಚಿಕ ವರ್ಗಕ್ಕೆ ತಿರುಗೆಂದು ತನ್ನ ವಾಗ್ಜಾಲವನ್ನು ಹರಡಿದನು. ಆದು ಬುದ್ಧನ ಮನಸ್ಸನ್ನು ಕೂದಲೆಳೆಯಷ್ಟು ಸಹ ಕದಲಿಸ ಲಿಲ್ಲ. ಪ್ರಾಪಂಚಿಕನಾಗಿ ಯಜ್ಞಯಾಗಾದಿ ಸತ್ಕರ್ಮಗಳನ್ನು ಮಾಡಿ ದರೂ ತಾನು ಮತ್ತೆ ಜನ್ಮವೆತ್ತಬೇಕಾಗುವದೆಂದೂ ತನಗೆ ಈ ಜಗತ್ತು ಸ್ವಪ್ನದ ಜಗತ್ತಿನಂತೆಯೂ ಹೆಂಡಿರು ಮಕ್ಕಳು ಛತ್ರದಲ್ಲಿ ಕ್ಷಣಕಾಲ ಜೊತೆಯಾದವರಂತೆಯೂ ತೋರುವರೆಂದು ಮುಂತಾಗಿ ಬುದ್ಧನು ಮಂತ್ರಿಗೆ ಬುದ್ಧಿಯನ್ನು ಹೇಳಿದನು. ಕೊನೆಗೆ ತಂದೆಯನ್ನು ಸಮಾ ಧಾನಗೊಳಿಸುವದಕ್ಕಾದರೂ ಒಮ್ಮೆ ಕಪಿಲವಸ್ತುವಿಗೆ ಬರಬೇಕೆಂದು ಮಂತ್ರಿಯು ಕೇಳಲು ಬುದ್ಧನು ಆಗಲೆಂದೊಪ್ಪಿಕೊಂಡನು.

## ರಕ್ತಸಂಬಂಧಿಗಳೆಲ್ಲಾ ಶಿಷ್ಯರಾದದ್ದು

ಮಂತ್ರಿಯು ಹಿಂದಿರುಗಿ ಬಂದು ನಡೆದ ವಿದ್ಯಮಾನವನ್ನೆಲ್ಲ ಹೇಳುತ್ತಲೇ ಮಹಾ ಪತಿವ್ರತೆಯಾದ ಯಶೋಧರೆಯು ತನ್ನ ಗಂಡನ ಮತವೇ ತನ್ನದೆಂದು ತಾನು ಮುಂದಾಗಿಯೇ ಮುಂಡನವನ್ನು ಮಾಡಿಸಿ ಕೊಂಡು ಉತ್ತಮವಸ್ತ್ರಾಭರಣಗಳನ್ನು ಕಿತ್ತೊಗೆದು ಕಾಷಾಯವನ್ನುಟ್ಟು ಕೊಂಡಳು. ತಂದೆಯು ಮನೆಗೆ ಮಗನನ್ನು ಬರಮಾಡಿಕೊಳ್ಳುವದಕ್ಕೆ ಉತ್ಸಾಹದಿಂದ ಸಿದ್ಧನಾದನು. ಇತ್ತ ಬುದ್ಧನು ಕಪಿಲ ವಸ್ತುವಿಗೆ ಹೊರಟು ಬರುತ್ತ ದಾರಿಯಲ್ಲಿ ಒಬ್ಬ ಹುಡುಗಿಯನ್ನು ಕಂಡು ನೀರನ್ನು ಕೇಳಿದನು. ಆ ಹುಡುಗಿಯು ತಾನು ಹೊಲೆ ಯಳಾದ್ದರಿಂದ ಆ ಪುಣ್ಯವನ್ನು ಕಟ್ಟಿಕೊಳ್ಳುವ ಯೋಗವಿಲ್ಲೆಂದು ಹೇಳಿದಳು. ಇಂಥ ಸತ್ಯವನ್ನಾಡುವ ನಿನ್ನಲ್ಲಿ ಹೊಲೆಯತನವಿಲ್ಲೆಂದು ಆಕೆಯ ಕೈಯಿಂದ ನೀರನ್ನು ತೆಗೆದುಕೊಂಡು ಆಕೆಯ ಪ್ರಾರ್ಥನೆಯಂತೆ ಆಕೆಯನ್ನು ತನ್ನ ಶಿಷ್ಯಳನ್ನಾಗಿ ಮಾಡಿಕೊಂಡು ಕಪಿಲವಸ್ತುವಿನ ಹತ್ತರಕ್ಕೆ ಬಂದನು. ಊರಲ್ಲೆಲ್ಲ ರಾಜಪುತ್ರನನ್ನು ಬರಮಾಡಿಕೊಳ್ಳುವ ಸಡಗರವು ನಡೆದಿತ್ತು. ಬುದ್ಧನು ಯಾರಿಗೂ ತಿಳಿಯದಂತೆ ಪುರ ಪ್ರವೇಶಮಾಡಿ ಒಂದು ಧರ್ಮಶಾಲೆಯಲ್ಲಿಳಿದುಕೊಂಡನು. ಈ ಸುದ್ದಿ ಯನ್ನು ಕೇಳುತ್ತಲೇ ಅರಮನೆಯವರೂ ಊರಿನವರೂ ಎಲ್ಲರೂ ಅಲ್ಲಿಗೆ ಬಂದು ಜಾತ್ರೆಯಂತೆ ನೆರೆದರು. ಎಲ್ಲರೂ ಅತ್ತದ್ದೂ ಕರೆದದ್ದೂ ಆಯಿತು; ಮತ್ತು ಅವನ ಮನೋವೃತ್ತಿಯನ್ನು ತಿರುಗಿಸುವದಕ್ಕೆ

ಪ್ರಯತ್ನಿಸಿದ್ದೂ ಆಯಿತು. ಕೊನೆಗೆ ರಾಜನು ಭಿಕ್ಷೆಗಾದರೂ ಮನೆಗೆ ಬರಬೇಕೆಂದು ಅಂಗಲಾಚಿ ಬೇಡಿಕೊಂಡನು. ಅದು ತನ್ನ ಧರ್ಮಕ್ಕೆ ವಿರೋಧವೆಂದು ಬುದ್ಧನು ರಾಜವೀಥಿಯಲ್ಲಿ ಹೊರಟು ಭಿಕ್ಷೆಯನ್ನೇ ಬೇಡಿ ಒಂದು ಸರೋವರದ ಬಳಿಯಲ್ಲಿ ಊಟಕ್ಕೆ ಕುಳಿತನು. ಪತಿಯು ಮನೆಗೆ ಬರುವದಿಲ್ಲವೆಂದು ನಿಶ್ಚಯವಾಗುತ್ತಲೆ ಯಶೋಧರೆಯೂ ತನ್ನ ಮಗನೊಡನೆ ಆ ಸರೋವರದ ಬಳಿಗೆ ಬಂದು ಪತಿಗೆ ನಮಸ್ಕರಿಸಿ ಕಣ್ಣೀರು ಹಾಕಿ ತನ್ನನ್ನೂ ಕರೆದುಕೊಂಡು ಹೋಗಬೇಕಾಗಿತ್ತೆಂದು ಹಲುಬಿದಳು. ಇಂಥ ಪ್ರಾಪಂಚಿಕ ವ್ಯಸನಗಳನ್ನು ಹಚ್ಚಿಕೊಳ್ಳಬಾರದೆಂದು ಬುದ್ಧನು ತನ್ನ ದಿವ್ಯೋಪದೇಶವನ್ನು ಮಾಡಿ ಕೊನೆಗೆ ಅವರನ್ನು ತನ್ನ ಶಿಷ್ಯರಾಗಿ ಒಪ್ಪಿಕೊಂಡ ಮೇಲೆ ಅವರಿಗೂ ಹೊಟ್ಟೆ ತಣ್ಣಗಾಯಿತು. ಬುದ್ಧನು ತಾನು ತಂದಿದ್ದ ಭಿಕ್ಷಾನ್ನವನ್ನು ಅವರಿಗೂ ನೀಡಿದನು. ಇಷ್ಟರಲ್ಲಿ ಈ ಪ್ರಪಂಚದಲ್ಲಿ ತನಗಿನ್ನೇನು ಸುಖವೆಂದು ಶುದ್ಧೋದನನು ರಾಜ್ಯವನ್ನು ತನ್ನ ಇನ್ನೊಬ್ಬ ಮಗನಿಗೆ ಕೊಟ್ಟು ತಾನೂ ಸನ್ಯಾಸಿಯಾಗಿ ಬುದ್ಧನಿಗೆ ಶಿಷ್ಯನಾದನು.

## ಅಂತಿಮಕಾಲ

ಬುದ್ಧನು ಹೀಗೆ ಸಂಚಾರವನ್ನು ಮಾಡಿ ಮಾಡಿ ಅನೇಕ ಶಿಷ್ಯರನ್ನು ಪಡೆದನು. ಅವನು ಮಳೆಗಾಲದ ನಾಲ್ಕು ತಿಂಗಳು ಎಲ್ಲಿಯಾದರೂ ಒಂದುಕಡೆ ಇದ್ದುಕೊಂಡು ತನ್ನ ಶಿಷ್ಯವೃಂದಕ್ಕೆ ತನ್ನ ಸಿದ್ಧಾಂತವನ್ನುಪದೇಶ ಮಾಡುತ್ತಿದ್ದನು. ಮತ್ತು ಮಳೆಗಾಲವು ಕಳೆಯುತ್ತಲೇ ಒಬ್ಬೊಬ್ಬರೊಂದೊಂದು ಕಡೆಗೆ ಹೊರಟು ಎಲ್ಲರೂ ಬುದ್ಧ ಧರ್ಮದ ಪ್ರಸಾರ ಮಾಡುತ್ತಿದ್ದರು. ತಪಸ್ಸು ಮೊದಲಾದವುಗಳಿಂದ ಮುಕ್ತಿಯೆಂಬಭಿಪ್ರಾಯವನ್ನು ತೆಗೆದೊಗೆದು ಪರೋಪಕಾರದಿಂದ ಮತ್ತು ಬಂಧುಪ್ರೇಮದಿಂದಲೇ ಮುಕ್ತಿಯೆಂದು ಜನರ ಮನಸ್ಸಿನಲ್ಲಿ ಬಿಂಬಿಸುವಂತೆ ಮಾಡುವದೇ ಅವನ ಮುಖ್ಯ ಉದ್ದೇಶವಾಗಿತ್ತು. ಇಪ್ಪತ್ತೊಂಭತ್ತನೆಯ ವರ್ಷ ಮೊದಲುಗೊಂಡು ಇದಕ್ಕಾಗಿ ಹೆಣಗಿ ತನ್ನ ಉಪದೇಶವು ಜನಮಂಡಲಿಯಲ್ಲಿ ಫಲಪ್ರದವಾಗಿರುವದನ್ನು ಕಣ್ಣಾರೆ ಕಂಡು ಬುದ್ಧನು ತನ್ನ ಎಂಭತ್ತನೆಯ ವಯಸ್ಸಿನಲ್ಲಿ ಕಾಶಿಗೆ ಈಶಾನ್ಯದಲ್ಲಿರುವ ಕುಶೀನರಕ್ಕೆ ಹೋಗುವಾಗ ದಾರಿಯಲ್ಲಿ ಹಿರಣ್ಯಾವತೀ

ನದಿಯ ಹತ್ತಿರ ಒಂದು ಸಾಲವೃಕ್ಷದ ಕೆಳಗೆ ದಕ್ಷಿಣಾಭಿಮುಖನಾಗಿ ಮಲಗಿ ಶಾಶ್ವತನಿರ್ವಾಣವನ್ನು ಹೊಂದಿದನು. ಅವನ ಧರ್ಮವು ಎಷ್ಟೋ ಕಾಲ ಪ್ರಬಲ ಸ್ಥಿತಿಯಲ್ಲಿದ್ದು ಈ ಜಗತ್ತಿನಲ್ಲಿ ಎಲ್ಲಾ ಧರ್ಮಗಳಿಗಿಂತಲೂ ಮೇಲಾದದ್ದೆನಿಸಿತ್ತು. ಕಾಲಚಕ್ರ ಪ್ರಭಾವದಿಂದ ಅದು ಈಚೀಚೆಗೆ ಕಳೆಗುಂದುತ್ತ ಬಂತು. ಈ ಧರ್ಮಪಂಥದವರು ಈಗಲೂ ಕೂಡ ಹಿಂದುಸ್ತಾನದಲ್ಲಿ ಮಾತ್ರವೇ ಅಲ್ಲದೆ ಚೀನ, ಜಪಾನ, ತಿಬೇಟ, ಸಿಂಹಲದ್ವೀಪ-ಮೊದಲಾದ ರಾಜ್ಯಗಳಲ್ಲಿ ಕೂಡ ಇನ್ನೂ ಇದ್ದಾರೆ. ಬೌದ್ಧರ ವಿಹಾರಮಂದಿರಗಳು ಸಾವಿರಾರು ವರ್ಷಗಳು ಕಳೆದರೂ ಕೂಡ ಇನ್ನು ಅಚ್ಚಳಿಯದೆ ನಿಂತಿವೆ. ಬುದ್ಧನ ಕೀರ್ತಿಯಂತೂ ಆಚಂದ್ರಾರ್ಕಸ್ಥಾಯಿಯಾಗಿದೆ. ಜನರು ಅಂಧಶ್ರದ್ಧೆಯಿಂದ ಹಿಂಸಾಪ್ರಧಾನವಾದ ಯಜ್ಞಯಾಗಾದಿ ಕರ್ಮಗಳನ್ನು ಮಾಡಿ ಫಲಕ್ಕಾಗಿ ಪರಲೋಕವನ್ನು ನಿರೀಕ್ಷಿಸುತ್ತ ನಿಟ್ಟುಸಿರಿಡುತ್ತಿದ್ದ ಕಾಲದಲ್ಲಿ ಆ ಆಯಾಸವನ್ನು ತಪ್ಪಿಸಿ ಜಿತೇಂದ್ರಿಯತ್ವದಿಂದ ಮತ್ತು ಪರೋಪಕಾರ, ಭೂತ-ದಯೆ ಮೊದಲಾದವುಗಳಿಂದ ಇಲ್ಲಿಯೇ ಶಾಂತಿಯನ್ನು ಸೂರೆಗೊಳ್ಳುವ ಬುದ್ಧನ ಉಪದೇಶವು ದೇಶಭಾಷೆಯಲ್ಲಿ ಮುಂದುವರಿದದ್ದರಿಂದ ದ್ವಾದಶ ವರ್ಷ ಅನಾವೃಷ್ಟಿಯಿಂದ ಗರಗಾದ ಭೂಮಿಗೆ ಸುವೃಷ್ಟಿಯಾದಂತೆ ಪರಿಣಮಿಸಿತು. ಸನ್ಯಾಸಿಗಳ ಜೀವನಕ್ರಮ, ಜನ್ಮಾಂತರ, ದೇವತೆಗಳ ವಿಚಾರ, ಇಂಥ ಎಷ್ಟೋ ವಿಷಯಗಳಲ್ಲಿ ಬೌದ್ಧಧರ್ಮವು ವೇದಕ್ಕನುಗುಣವಾಗಿಯೇ ಇದೆ. ಬುದ್ಧನು ಹೇಳುವ ನಿರ್ವಾಣವು ಅದ್ವೈತಿಗಳ ಅಭಿಪ್ರಾಯದಂತೆ ಶ್ರುತಿಯಲ್ಲಿ ಹೇಳುವ ಜೀವ-ಬ್ರಹ್ಮೈಕ್ಯಕ್ಕೆ ಬಹುಮಟ್ಟಿಗೆ ಹೋಲುತ್ತದೆ. ಬುದ್ಧನ ಧರ್ಮವು ವಿಷಯಾಭಿಲಾಷೆಗೂ ಜಪತಪಾನುಷ್ಠಾನಕ್ಕೂ ನಡುವಿನ ಒಂದು ಮಾರ್ಗವೆನ್ನಬಹುದು. ಬುದ್ಧನು ಪರಲೋಕವನ್ನೂ ಶಾಶ್ವತನಾದ ಆತ್ಮನನ್ನೂ ಒಪ್ಪುವದಿಲ್ಲ. ಅವನ ಅಭಿಪ್ರಾಯದಂತೆ ಸ್ತ್ರೀಯರಿಗೂ ಸನ್ಯಾಸವುಂಟು. ವೇದಮತಕ್ಕೂ ಇವನಿಗೂ ಇವೇ ಮುಖ್ಯ ಭೇದಗಳು. ಬೌದ್ಧ ಧರ್ಮವೆಂದರೆ ಸಾಮಾನ್ಯವಾಗಿ ಅತ್ಯುಚ್ಚ ತರಗತಿಯ ನೀತಿನಿಯಮಗಳು. ಇವುಗಳ ಪ್ರಚಾರದಿಂದ ಅಸಂಖ್ಯಾಕ ಜನರ ಮನೋವೃತ್ತಿಯನ್ನು ಸುಧಾರಿಸಿದ ಗೌತಮಬುದ್ಧನ ಮಹಿಮೆಯು ಅತ್ಯಂತ ಪ್ರಶಂಸನೀಯವಾದದ್ದು.

# ಅಶೋಕ

---

## ಪೀಠಿಕೆ

ಏಕಕಾಲದಲ್ಲಿ ಎರಡು ಕೈಯಲ್ಲಿಯೂ ಕತ್ತಿಯನ್ನು ತಿರುಗಿಸುವಂತೆ ಭೋಗವೈರಾಗ್ಯಗಳೆರಡನ್ನೂ ಸಮಕಾಲದಲ್ಲಿ ಪ್ರದರ್ಶನ ಮಾಡುವ ಪ್ರತಿಭಾಶಾಲಿಗಳು ಇದ್ದರು. ಅಂಥವರನ್ನು ಪ್ರಕಾಶಗೊಳಿಸುವ ಪ್ರತಿಷ್ಠೆಯು ಈ ಅಖಂಡ ಭೂಮಂಡಲದಲ್ಲಿ ಭರತಖಂಡದ ಹೊರತು ಬೇರೆ ಯಾವ ಭೂಭಾಗಕ್ಕೂ ಸಲ್ಲುವದಿಲ್ಲವೆಂದು ಎದೆಯ ಮೇಲೆ ಕೈ ಇಟ್ಟುಕೊಂಡು ಹೇಳಬಹುದು. ಈಗ್ಗೆ ಎರಡು ಸಾವಿರ ವರ್ಷಗಳ ಹಿಂದೆ ಒಮ್ಮೆ ಭಾರತೀದೇವಿಯು ಅಂಥ ಒಂದು ಪುತ್ರರತ್ನವನ್ನು ಪಡೆದಳು. ಆ ವ್ಯಕ್ತಿಯ ಸ್ಥೂಲ ದೇಹವು ಸ್ವಲ್ಪ ಕಾಲದಲ್ಲಿಯೇ ಅಂತರ್ಧಾನವಾಗಿದ್ದರೂ ಕೀರ್ತಿಶರೀರವು ಮಾತ್ರ ಕುಲಾಚಲಗಳ ಸಹವಾಸಿಯಾಗಿ ಇನ್ನೂ ಅಚ್ಚಳಿಯದೆ ಇರುವದು. ಆ ಮಹಾತ್ಮನೇ ಈ ನಮ್ಮ ಕಥಾನಾಯಕನು.

## ಹುಟ್ಟು

ಮಗಧ ದೇಶದ ಹೆಸರು ನಮ್ಮ ಭರತನಿವಾಸಿಗಳಿಗೆ ಹೊಸದಲ್ಲ; ಏಕೆಂದರೆ ಅದರ ವರ್ಣನೆಯು ಮಹಾಭಾರತದಲ್ಲಿ ಕೂಡ ಬಂದಿರುವದು. ಅಲ್ಲಿಂದ ಇತಿಹಾಸಕ್ಕಿಳಿದರೆ ಚಾಣಿಕ್ಯನೆಂಬ ಬ್ರಾಹ್ಮಣನ ಸಹಾಯದಿಂದ ಮಗಧ ರಾಜ್ಯದ ಸಿಂಹಾಸನಾರೋಹಣವನ್ನು ಮಾಡಿ ಗ್ರೀಸ ಮೊದಲಾದ ಪರದೇಶಗಳೊಡನೆ ಬಂಧುತ್ವವನ್ನು ಬೆಳೆಸಿದ ಚಂದ್ರಗುಪ್ತನ ಮಗನಾದ ಬಿಂದುಸಾರನು ಪಾಟ್ನ ಅಥವಾ ಪಾಟಲೀಪುತ್ರವೆಂಬ ಊರಲ್ಲಿ ರಾಜ್ಯವೈಭವವನ್ನು ಅನುಭವಿಸುತ್ತಿದ್ದನು. ಅಲ್ಲಿಗೆ ಸಮೀಪದಲ್ಲಿದ್ದ ಚಂಪಾನಗರವೆಂಬ ಊರಿನಲ್ಲಿ ಒಬ್ಬ ಬ್ರಾಹ್ಮಣನಿಗೆ ಅತ್ಯಂತ ಸುಂದರಳಾದ ಸುಭದ್ರಾಂಗಿ ಎಂಬ ಒಬ್ಬ ಮಗಳಿದ್ದಳು. ಆಕೆಗೆ ವಿವಾಹವಾಗುವ ವಯಸ್ಸು ಬಂತು. ಆ ಬ್ರಾಹ್ಮಣನು ತಕ್ಕ ವರನನ್ನು ಹುಡುಕುತ್ತಿರುವಾಗ ಒಬ್ಬ ಜ್ಯೋತಿಷನು ಆ ಹುಡುಗಿಯ ಜಾತಕವನ್ನು ನೋಡಿ ಈಕೆಯ ಹೊಟ್ಟೆಯಲ್ಲಿ ಮಹಾಚಕ್ರವರ್ತಿಯಾಗುವಂಥವನು

ಹುಟ್ಟುವನೆಂದು ಭವಿಷ್ಯವನ್ನು ಹೇಳಿ ತನ್ನ ದಾರಿಯನ್ನು ಹಿಡಿದು ಹೋದನು. ಇತ್ತ ಆ ಬ್ರಾಹ್ಮಣನು ತನ್ನ ಮಗಳ ಸೌಂದರ್ಯದಿಂದ ಬಿಂಬಸಾರನ ಮನಸ್ಸು ಸೋಲಬಹುದೆಂದು ಯೋಚಿಸಿ ಆಕೆಯನ್ನು ಆ ರಾಜನ ದೃಕ್ಪಥಕ್ಕೆ ವಿಷಯವಾಗಿ ಮಾಡಿದನು. ಬ್ರಾಹ್ಮಣನ ಊಹೆಯೇನೂ ವ್ಯರ್ಥವಾಗಲಿಲ್ಲ. ಬಿಂದುಸಾರನು ಆಕೆಯನ್ನು ಪಟ್ಟದ ರಾಣಿಯಾಗಿಯೇ ಪರಿಗ್ರಹಿಸಿದನು. ಆ ಗರ್ಭದಲ್ಲಿಯೇ ನಮ್ಮ ಕಥಾನಾಯಕನಾದ ಅಶೋಕನು ಆವಿರ್ಭವಿಸಿದನು.

## ಶಿಕ್ಷಣ

ಅಶೋಕನಿಗೆ ಏನೇನು ಶಿಕ್ಷಣಗಳು ದೊರೆತವೆಂಬುದಕ್ಕೆ ಆಧಾರ ವೇನೂ ಇಲ್ಲದಿದ್ದರೂ ಯುದ್ಧಕಲೆಯಲ್ಲಿ ಅವನಿಗೆ ಉತ್ತಮವಾದ ಶಿಕ್ಷಣವು ದೊರೆತಿತ್ತೆಂಬ ವಿಷಯದಲ್ಲಿ ಸಂಶಯವಿಲ್ಲ. ಬಗೆಬಗೆಯ ಆಯುಧಗಳ ಪ್ರಯೋಗದಲ್ಲಿ ನೈಪುಣ್ಯವನ್ನು ಪಡೆದಿದ್ದ ಇವನಿಗೆ ಬೇಟೆಯಲ್ಲಿ ಹೆಚ್ಚು ಅಭಿರುಚಿಯು ತೋರುತ್ತಿತ್ತು. ಇದಕ್ಕೆ ಕಾರಣ ವಿಲ್ಲದೆ ಇಲ್ಲ. ಇವನ ಹಿರಿಯರ ಕಾಲದಿಂದಲೂ ಬೇಟೆ ಎಂಬುದು ಉಳಿದ ಎಲ್ಲ ಮಹೋತ್ಸವಗಳನ್ನೂ ಮರೆಸಿತ್ತು. ಚಿಕ್ಕ ವಯಸ್ಸಿ ನಲ್ಲಿಯೇ ತನ್ನ ಬಾಹುಬಲವನ್ನು ತಂದೆಗೆ ತೋರಿಸಿ ಸಂತೋಷಪಡುವ ಸುಯೋಗವು ಅಶೋಕನಿಗೆ ಒದಗಿತು. ತಕ್ಷಶಿಲೆ ಎಂಬ ಭಾಗದಲ್ಲಿ ಅಂದರೆ ಪಂಜಾಬಿಗೆ ಸೇರಿದ ರಾವಲಪಿಂಡಿ ಜಿಲ್ಲೆಯಲ್ಲಿ ಆಗ ಜನಗಳ ದೊಂದು ಗದ್ದಲವೆದ್ದಿತು. ಮಹಾರಾಜನಾದ ಬಿಂದುಸಾರನು ತನ್ನ ಮತ್ತೊಬ್ಬ ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟಿದ ಸುಷೀಮನೆಂಬವನನ್ನು ಯುವರಾಜನನ್ನಾಗಿ ಮಾಡಿಕೊಂಡಿದ್ದರೂ ಕೂಡ ಆ ಗದ್ದಲವನ್ನಡ ಗಿಸುವದಕ್ಕೆ ಅಶೋಕನನ್ನೇ ಕಳುಹಿಸಿದನು. ಅಶೋಕನು ಭುಜ ವನ್ನು ಚಪ್ಪರಿಸಿಕೊಂಡು ತಕ್ಷಶಿಲೆಯ ಮುಂದೆ ರಣಭೇರಿಯನ್ನು ಹೊಡೆದ ಮಾತ್ರಕ್ಕೇ ಅವನ ಹೆಸರನ್ನು ಕೇಳಿ ಅಲ್ಲಿನ ಜನರೆಲ್ಲರೂ ಎದೆಯೊಡೆದು ಬಂದು ಆ ಗದ್ದಲವು ಅಲ್ಲಿನ ಅಧಿಕಾರಿಗಳ ಅತ್ಯಾಚಾರ ದಿಂದಲೇ ಹೊರತು ಬೇರೆ ಅಲ್ಲವೆಂದು ತೇಲಿಸಿ ಹೇಳಿಕೊಂಡರು. ಅಶೋಕನು ಆಗ ಪುರಪ್ರವೇಶ ಮಾಡಿ ದುಷ್ಟರನ್ನು ದಂಡಿಸಿ ಪ್ರಜೆಗಳ ಮೇಲೆ ಪ್ರಜಾವಾತ್ಸಲ್ಯವನ್ನು ತೋರಿಸಿ ಹಿಂದಿರುಗಿ ಬಂದು ತಂದೆಗೆ ನಮಸ್ಕರಿಸಿದನು.

## ವಿವಾಹ

ಮಗನ ಯೋಗ್ಯತೆಯನ್ನು ನೋಡಿ ಬಿಂದುಸಾರನು ಅಶೋಕನನ್ನು ಉಜ್ಜಯಿನಿಯ ಅಧಿಪತಿಯನ್ನಾಗಿ ಮಾಡಿದನು. ಉಜ್ಜಯಿನಿಯು ಪುರಾಣ ಪ್ರಸಿದ್ಧವಾದ ಪ್ರಾಚೀನನಗರಿ ಇಲ್ಲಿ ಅಶೋಕನು ಬಹು ವಿಚಕ್ಷಣೆಯಿಂದ ಆಳುತ್ತಿದ್ದನು. ವಿದಿಶಾ ನಗರದಲ್ಲಿದ್ದ ಒಬ್ಬ ವೈಶ್ಯ ಕನ್ನೆಯನ್ನು ನೋಡಿದಾಗ ಆಕೆಯ ರೂಪಲಾವಣ್ಯಗಳಿಗೆ ಮರುಳಾಗಿ ಅಶೋಕನು ಆಕೆಯನ್ನು ತನ್ನ ಪತ್ನಿಯನ್ನಾಗಿ ಮಾಡಿಕೊಂಡನು. ಆಕೆಯ ಹೊಟ್ಟೆಯಲ್ಲಿ ಮಹೇಂದ್ರನೆಂಬ ಮಗನೂ ಸಂಘಮಿತ್ರೆಯೆಂಬ ಮಗಳೂ ಹುಟ್ಟಿದರು.

## ಅರಸುತನ

ಅಶೋಕನು ಉಜ್ಜಯಿನಿಯಲ್ಲಿರುವಾಗ ತಕ್ಷಶಿಲೆಯಲ್ಲಿ ಮತ್ತೆ ಗದ್ದಲವೆದ್ದಿತು. ಆಗ ಬಿಂದುಸಾರನು ತನ್ನ ಬಳಿಯಲ್ಲಿ ಯುವರಾಜನಾಗಿದ್ದ ಸುಷೀಮನನ್ನು ಅದರ ಶಾಂತತೆಗೆ ಕಳುಹಿಸಿದನು. ಸುಷೀಮನು ಅತ್ತ ಹೋದ ಮೇಲೆ ಇತ್ತ ಬಿಂದುಸಾರನ ದೇಹದಲ್ಲಿ ಅಸ್ವಸ್ಥತೆಯುಂಟಾಯಿತು. ತನ್ನ ಬಳಿಕ ತನ್ನ ಪ್ರೀತಿಪಾತ್ರನಾದ ಸುಷೀಮನಿಗೇ ಕಿರೀಟಧಾರಣವಾಗತಕ್ಕದ್ದೆಂಬು ಬಿಂದುಸಾರನಿಗೊಂದು ಚಪಲವಿತ್ತು. ಆದರೆ ಸುಷೀಮನು ಜನರ ಪ್ರೀತಿಗೆ ಪಾತ್ರನಾಗಿರಲಿಲ್ಲ. ಅಶೋಕನ ಸದ್ಗುಣಸಂಪತ್ತಿಗೆ ಎಲ್ಲರೂ ಮರುಳಾಗಿದ್ದರು. ಆದ್ದರಿಂದ ಈ ಸಮಯದಲ್ಲಿ ಅಶೋಕನನ್ನು ಬರಮಾಡಿಕೊಂಡು ಅವನನ್ನು ಸಿಂಹಾಸನದ ಮೇಲೆ ಕೂಡಿಸಿಬಿಡಬೇಕೆಂದು ಮಂತ್ರಿಗಳೆಲ್ಲರೂ ಸೇರಿ ಒಳಸಂಚನ್ನು ನಡೆಯಿಸಿ ಒಡನೆ ಬರಹೇಳಿ ಅಶೋಕನಿಗೆ ಓಲೆಯನ್ನು ಕಳುಹಿಸಿದರು. ಇತ್ತ ಕ್ರಿ. ಪೂ. ೨೭೨ ರಲ್ಲಿ ಬಿಂದುಸಾರನ ದೇಹತ್ಯಾಗವಾಯಿತು. ಅಷ್ಟುಹೊತ್ತಿಗೆ ಅಶೋಕನೂ ಬಂದು ಒದಗಿದನು. ಜನರೆಲ್ಲರೂ ಒಕ್ಕಟ್ಟಾಗಿ ಅಶೋಕನನ್ನೇ ಸಿಂಹಾಸನದ ಮೇಲಕ್ಕೆ ಹತ್ತಿಸಿದರು. ಈ ಸುದ್ದಿ ತಕ್ಷಶಿಲೆಗೆ ಹರಿಯಿತು. ಸುಷೀಮನು ತಾನು ರಾಜನಾಗಬೇಕೆಂದು ಅಲ್ಲಿಂದ ಒಂದೇ ಉಸಿರಿಗೆ ಓಡಿಬಂದನು. ಅವನಿಗೆ ಅಡಚಣೆಯನ್ನುಂಟುಮಾಡಬೇಕೆಂದು ಮಂತ್ರಿವರ್ಗದವರು ರಾಜಧಾನಿಯ

ಅಗಳ್ತಿಯು ತುಂಬ ಕಟ್ಟಿಗೆ ಮೊದಲಾದವುಗಳನ್ನು ಹಾಕಿ ಬೆಂಕಿಯನ್ನು ಹಚ್ಚಿದ್ದರು. ಸುಷೀಮನು ಅಗಳ್ತಿಯನ್ನೇ ದಾಟಿ ಊರೊಳಗಿಳಿದು ಬಿಡುವೆನೆಂದು ಹಾರಿದನು. ದುರ್ದೈವದಿಂದ ಅದು ಸಾಧ್ಯವಾಗದೆ ಅವನು ಅಗಳ್ತಿಯ ಅಗ್ನಿಗೆ ಆಹುತಿಯಾಗಬೇಕಾಯಿತು. ಆಮೇಲೆ ಅಶೋಕನು ನಿರಂಕುಶನಾಗಿ ಆಳುವದಕ್ಕೆ ಮೊದಲು ಮಾಡಿದನು.

## ವಿರಕ್ತಿ ತಲೆದೋರಿದ್ದು

ಅಶೋಕನು ಮಹಾಕ್ಷಾತ್ರ ತೇಜಸ್ಸಿನಲ್ಲಿ ಅಗ್ರಗಣ್ಯನಾಗಿದ್ದರೂ ಅದರ ಪ್ರಭಾವವು ಬಹುಕಾಲ ಬೆಳಗಲಿಲ್ಲ. ಕೆಲವು ದಿವಸಗಳಲ್ಲಿಯೇ ಮನಸ್ಸಿನ ಮಾರ್ಗವು ಬದಲಾಯಿತು. ಒಂದುವೇಳೆ ಅವನು ಗೋದಾವರೀ ಮತ್ತು ಮಹಾನದಿ ಇವೆರಡರ ನಡುವಣ ಕಲಿಂಗ ರಾಜ್ಯವನ್ನು ಬಾಯಿಯಲ್ಲಿ ಹಾಕಿಕೊಳ್ಳುವದಕ್ಕೆ ಹೋಗಿದ್ದನು. ಅವನ ಉದ್ದೇಶವೂ ನೆರವೇರಿತು. ಕಲಿಂಗ ರಾಜ್ಯವು ತಾನು ಮಗಧರಾಜ್ಯಕ್ಕೆ ಬಂಧು ಅಂಟಿಕೊಂಡರೂ ಅಶೋಕನ ಮನಸ್ಸನ್ನು ಸರ್ವರಾಜ್ಯಗಳಿಂದಲೂ ಬಿಡಿಸಿ ಬೇರೆ ಮಾಡಿತು. ಆ ಸಮಯದಲ್ಲಿ ಅವನು ಭರತಖಂಡದ ಮುಕ್ಕಾಲು ಪಾಲಿನ ಮೇಲೆ ತನ್ನ ಶಾಸನವನ್ನು ನಡೆಸುತ್ತಿದ್ದನು. ಇಷ್ಟು ವಿಸ್ತಾರವಾಗಿ ಹರಡಿಕೊಂಡಿದ್ದ ಮನಸ್ಸಿಗೆ ಆ ಯುದ್ಧದಲ್ಲಾದ ಅನಾಹುತಗಳನ್ನೂ ಸೆರೆಸಿಕ್ಕಿದವರ ಗೋಳುಗಳನ್ನೂ ಭೋರ್ಗರೆಯುವ ರಕ್ತಪ್ರವಾಹವನ್ನೂ ಚೆಂಡಾಡುವ ತಲೇ ಬುರುಡೆಗಳನ್ನೂ ನೋಡಿದೊಡನೆ ಒಮ್ಮೆಗೇ ಈ ವೃತ್ತಿಯು ತನಗೆ ಯೋಗ್ಯವಲ್ಲವೆನಿಸಿತು. ಗೆಲ್ಲಬೇಕೆಂದಿದ್ದರೆ ಪ್ರೇಮದಿಂದ ಗೆದ್ದ ಗೆಲವು ಗೆಲುವೇ ಹೊರತು ಕತ್ತಿಯ ಮೊನೆಯಿಂದ ಗೆಲ್ಲುವದು ಕೇವಲ ಕ್ಷುದ್ರವೆಂದು ಅವನಿಗೆ ಭಾಸವಾಯಿತು.

## ಬೌದ್ಧಧರ್ಮ

ಮಹಾಮಹಿಮನಾದ ಬುದ್ಧನ ಅವತಾರವು ಸಮಾಪ್ತಿಯಾಗಿ ಇನ್ನೂರು ವರ್ಷಗಳ ಮೇಲಾಗಿದ್ದವು. ಆ ವಿಭೂತಿಯು ಕಾಲದಲ್ಲಿ ತಲೇ ತಗ್ಗಿಸಿಕೊಂಡಿದ್ದ ಬ್ರಾಹ್ಮಣರು ಈಗ ಅವನ ತತ್ವಗಳು ಹುಳತು ನಾತವಿಟ್ಟಿರುವ ಸಮಯವನ್ನು ನೋಡಿ ಮೆಲ್ಲಗೆ ತಮ್ಮ ಕಾಲುಚಾಚುವ

ಸಡಗರದಲ್ಲಿದ್ದರು. ಬಿಂದುಸಾರನ ಮನೆಯಲ್ಲಿಯೂ ಕೂಡ ವಾತಾವರಣವೆಲ್ಲಾ ವೇದಘೋಷದಿಂದ ತುಂಬಿಹೋಗಿತ್ತು. ಆದರೂ ಬೌದ್ಧ ಧರ್ಮೋಪದೇಶಕರೆಂಬ ಕಿಡಿಗಳು ಸಂಪೂರ್ಣವಾಗಿ ಆರಿ ಬೂದಿಯಾಗಿರಲಿಲ್ಲ. ಅಲ್ಲೊಬ್ಬರು ಇಲ್ಲೊಬ್ಬರು ಹೀಗೆ ಮಿಣುಗುಟ್ಟುತ್ತಿದ್ದರು. ಅವರ ಉಪದೇಶವು ಅಶೋಕನ ಮನಸ್ಸಿಗೆ ಬೆನ್ನಾಗಿ ಹಿಡಿಯಿತು. ಆದ್ದರಿಂದ ಬೌದ್ಧನಾಗಿ ಮನೋವೃತ್ತಿಯನ್ನು ಸುಧಾರಿಸಿಕೊಂಡ ಹೊರತು ಗತ್ಯಂತರವಿಲ್ಲವೆಂದು ಅಶೋಕನು ಮುದ್ಗಲಪುತ್ರತಿಷ್ಯ ಎಂಬವರಿಂದಬೌದ್ಧಮತದ ದೀಕ್ಷೆಯನ್ನು ತೆಗೆದುಕೊಂಡನು.

## ಬೌದ್ಧಧರ್ಮ ಪ್ರಸಾರ

ತಾನೊಬ್ಬನು ಕೃತಾರ್ಥನಾಗುವದು ಅವನಿಗೆ ಸಾಕೆನಿಸಲಿಲ್ಲ ಮತ್ತು ಅಧಿಕಾರದರ್ಪದಿಂದ ಹೊರಗಣ ಪರಿಸ್ಥಿತಿಯನ್ನು ಆಳುವ ಮಾತ್ರದಿಂದ ತಾನು ಅರಸನೆನಿಸುವದಕ್ಕೆ ಯೊಗ್ಯನಾಗುವದಿಲ್ಲವೆಂದೂ ಸರ್ವರನ್ನೂ ತನ್ನ ಹಿಮ್ಮೇಳದವರನ್ನಾಗಿ ಮಾಡಿಕೊಂಡರೆ ಮಾತ್ರ ತಾನು ರಾಜನೆಂದೂ ಅವನಿಗೆ ತೋರಿತು. ಅಂದಿನಿಂದಲೇ ಅವನು ಪ್ರಜೆಗಳ ನೀತಿಗಳನ್ನು ಸುಧಾರಿಸಿ ಪ್ರತಿಯೊಬ್ಬರಲ್ಲಿಯೂ ಬುದ್ಧನ ಚೈತನ್ಯವನ್ನು ತುಂಬಬೇಕೆಂದು ಮೊದಲು ಮಾಡಿದನು. ಮೌದ್ಗಲಪುತ್ರತಿಷ್ಯರಿಂದ ಬೌದ್ಧ ಮಹಾತತ್ತ್ವಗಳನ್ನೆಲ್ಲಾ ತಿಳಿದುಕೊಂಡು ಅವುಗಳಲ್ಲಿ ಮುಖ್ಯವಾದ ಎಂಭತ್ತನಾಲ್ಕು ಸಾವಿರ ಮುಖ್ಯ ವಾಕ್ಯಗಳಿಗೆ ಒಂದೊಂದಕ್ಕೊಂದೊಂದರಂತೆ ಬೇರೆ ಬೇರೆ ಸ್ಥಲಗಳಲ್ಲಿ ಎಂಭತ್ತನಾಲ್ಕು ಸಾವಿರ ಚೈತ್ಯಮಂದಿರಗಳನ್ನು ಕಟ್ಟಿಸಿ ಎಲ್ಲಾ ಕಡೆಯಲ್ಲಿಯೂ ಬೌದ್ಧಧರ್ಮ ವಿಚಾರದ ಪಾಠಪ್ರವಚನಗಳೂ ತಪಶ್ಚರ್ಯೆಯುಗಳೂ ನಡೆಯುವಂತೆ ಮಾಡಿದನು. ಪ್ರತಿಯೊಂದು ಚೈತ್ಯದಲ್ಲಿಯೂ ಅಜಾತಶತ್ರುವಾದ ಬುದ್ಧನ ಅಸ್ಥಿಗಳನ್ನು ಪ್ರತಿಷ್ಠೆ ಮಾಡಿದನು. ಇಲ್ಲಿ ಹೀಗೆ ನಡೆಯುತ್ತಿರಲು ತಿಷ್ಯನು ತನ್ನ ಧ್ಯಾನದ ಪರಮಾವಧಿಯನ್ನು ಮುಟ್ಟುವದಕ್ಕಾಗಿ ಈ ವ್ಯವಹಾರದಿಂದ ಮರೆಯಾಗಬೇಕೆಂದು ಒಂದು ಪರ್ವತಕ್ಕೆ ಹೊರಟು ಹೋದನು.

## ಪಾಪಭೀತಿ

ಇತ್ತ ಬೌದ್ಧಮತದ ವ್ಯಾಪನೆಯು ಮಂದವಾಗಿರುವದನ್ನು ನೋಡಿ ಅಶೋಕನು ಒಂದು ಕ್ರಿಯೆಯನ್ನು ಮಾಡಹೇಳಿ ಬೌದ್ಧ ಭಿಕ್ಷುಕರಿಗೆಲ್ಲಾ ಆಜ್ಞೆ ಮಾಡಿದನು. ಈ ಆಜ್ಞೆಯನ್ನು ನಡಿಸುವದಕ್ಕೆ ಹೋದ ಮಂತ್ರಿಯು ಅದಕ್ಕೆ ಒಪ್ಪದೆ ಇದ್ದ ಭಿಕ್ಷುಗಳನ್ನೆಲ್ಲಾ ಒಬ್ಬೊಬ್ಬರನ್ನಾಗಿ ಬಲೀಹಾಕಿಬಿಟ್ಟನು. ಈ ಸುದ್ದಿಯನ್ನು ಕೇಳುತ್ತಲೇ ಅಶೋಕನ ಎದೆ ಜರ್ಝರಿತವಾಯಿತು. ಇದರ ಪಾಪವು ತನಗೆಲ್ಲಿ ಬಡಿಯುವದೋ ಎಂದು ಅಶೋಕನಿಗೆ ನಡುಕ ಹುಟ್ಟಿತು. ಕಂಡಕಂಡವರಿಗೆಲ್ಲಾ ಶರಣು ಹೋಗಿ ಅವನು ಇದರ ಪರಿಣಾಮವೇನೆಂದು ಕೇಳಿದನು. ಎಲ್ಲರೂ ತಿಷ್ಯನ ಕಡೆಗೆ ಬೆರಳು ತೋರಿಸಿಬಿಟ್ಟರು. ತಿಷ್ಯನನ್ನು ಕರೆದುತರಹೇಳಲು ಬೌದ್ಧಧರ್ಮದ ಪುನರುದ್ಧಾರಕ್ಕೆ ಹೊರತು ಬೇರೊಂದು ಕಾರಣಕ್ಕೆ ಅವನು ಇತ್ತ ತಿರುಗಿ ನೋಡನೆಂದು ಎಲ್ಲರೂ ಹೇಳಿದರು. ಅವನ ಸಂಕಲ್ಪವು ತನಗೂ ಅಭಿಮತವೆಂದು ಹೇಳಿ ಅಶೋಕನು ನಾವೆಯೊಡನೆ ಕೆಲವರನ್ನು ತಿಷ್ಯನ ಬಳಿಗೆ ಕಳುಹಿಸಿದನು. ಮತ್ತು ಅವರು ಬಂದಾಗ ಬಹುವೈಭವದಿಂದ ಅವರನ್ನು ಇದಿರುಗೊಂಡು ಕರೆದುತಂದು ತಿಷ್ಯನ ಮುಂದೆ ತನ್ನ ಮನಸ್ಸನ್ನು ಬಿಚ್ಚಿ ಹೇಳಿದನು. ಆ ಪಾಪದ ಸಂಬಂಧವು ನಿನಗಿಲ್ಲವೆಂದು ತಿಷ್ಯನು ಹೇಳಿದ ಮೇಲೆ ಅಶೋಕನ ಮನಸ್ಸಿನ ಹೊಯ್ದಾಟವು ನೆಲೆಗೆ ನಿಂತಿತು.

## ಬೌದ್ಧಧರ್ಮದ ಮಹಾಸಭೆ

ತಿಷ್ಯನಿಗೆ ಮಾತು ಕೊಟ್ಟಿದ್ದಂತೆ ಅಶೋಕನು ಬೌದ್ಧಮತದ ಪುನರುದ್ಧಾರಕ್ಕೆ ಕಂಕಣವನ್ನು ಕಟ್ಟಿಕೊಂಡನು. ಇದಕ್ಕಾಗಿ ಅವನು ತಿಷ್ಯನ ಅಪ್ಪಣೆಯಂತೆ ಬೌದ್ಧಧರ್ಮದ ಮೂರನೇ ಮಹಾಸಭೆಯನ್ನು ನೆರೆಸಿದನು. ಇದು ಬುದ್ಧನ ಮಹಾನಿರ್ವಾಣವಾದ ೨೩೬ ವರ್ಷಗಳ ಮೇಲೆ ನಡೆದ ಸಭೆ. ಈ ಸಭೆಗೆ ಎಲ್ಲಾ ಕಡೆಗಳಿಂದಲೂ ಜನರು ಬಂದರು. ತಿಷ್ಯನು ಅಗ್ರಾಸನಾಧಿಪತಿಯಾಗಿದ್ದು ಪ್ರತಿಯೊಬ್ಬನನ್ನೂ ಕರೆದು ಬೌದ್ಧ ತತ್ವಗಳ ವಿಷಯವಾಗಿ ಪರೀಕ್ಷೆ ಮಾಡಿದನು. ಎಷ್ಟೋ ಜಳ್ಳುಗಳು ಹೊರಟವು. ಅವುಗಳನ್ನೆಲ್ಲಾ ಸಂಘದಿಂದ ಹೊರಕ್ಕೆ

ತಳ್ಳಿ ಗಟ್ಟಿ ಕಾಳುಗಳನ್ನು ಉಳಿಸಿಕೊಂಡು ಅವರಿಗೆಲ್ಲಾ ಪ್ರತಿದಿನವೂ ಬೌದ್ಧ ತತ್ವಗಳನ್ನು ಉಪದೇಶ ಮಾಡಿದನು. ಈ ಉಪದೇಶವು ನಿರಂತರವಾಗಿ ಒಂಭತ್ತು ತಿಂಗಳು ನಡೆಯಿತು. ಇದರಿಂದ ಅನೇಕ ಜನ ಬೌದ್ಧ ಧರ್ಮೋಪದೇಶಕರು ಸಿದ್ಧರಾದರು. ಅಶೋಕನು ಇದರಿಂದ ತಾನು ಕೃತಾರ್ಥನಾದೆನೆಂದು ಒಮ್ಮೆ ಆಡಿತೋರಿಸಿದಾಗ ತಿಷ್ಯನು ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ಧರ್ಮೋಪದೇಶಕ್ಕೆ ಕೊಟ್ಟರೆ ಮಾತ್ರ ನೀನು ಕೃತಾರ್ಥನಾಗುವೆಯೆಂದನು. ಅಗತ್ಯವಾಗಿ ಹಾಗೆ ಮಾಡುತ್ತೇನೆಂದು ಅಶೋಕನು ತನ್ನ ಪ್ರೌಢವಯಸ್ಸಿನ ಮಗನನ್ನೂ ಮಗಳನ್ನೂ ಧರ್ಮಪ್ರಸಾರಕರನ್ನಾಗಿ ಧಾರೆಯೆರೆದನು. ಯಾವ ಮಗನು ದೇವಲೋಕದ ಮಹೇಂದ್ರನಂತೆ ಅತ್ಯುಚ್ಚ ವೈಭವದಿಂದ ಭೂಮಂಡಲದ ಸಮಸ್ತ ರಾಜರ ತಲೆಯನ್ನು ಮೆಟ್ಟುವ ಪ್ರತೀಕ್ಷೆ ಇತ್ತೋ ಅಂಥ ಮಹೇಂದ್ರನನ್ನೂ ಯಾವ ಮಗಳು ಒಬ್ಬ ಚಕ್ರವರ್ತಿಯ ಪಟ್ಟಮಹಿಷಿಯಾಗಿ ಪ್ರಾಪಂಚಿಕವಾದ ಸರ್ವಸೌಭಾಗ್ಯಗಳನ್ನೂ ಸೂರೆಗೊಳ್ಳಬಹುದಾಗಿತ್ತೋ ಅಂಥ ಸಂಘಮಿತ್ರೆ ಎಂಬ ಮಗಳನ್ನೂ ಲೋಕೋದ್ಧಾರಕ್ಕಾಗಿ ಬೌದ್ಧಧರ್ಮವನ್ನು ಪ್ರಸಾರ ಮಾಡಲು ಕೊಟ್ಟ ಅಶೋಕನ ಔದಾರ್ಯವು ಅವರ್ಣನೀಯವಾದದ್ದು. ವಿಚಾರಪ್ರಧಾನನಾದ ಅಶೋಕನು ಇದಕ್ಕೆ ಸಮ್ಮತಿಸಿದ್ದು ದೊಡ್ಡದಲ್ಲ. ಆ ಇಬ್ಬರು ಮಕ್ಕಳು ಧರ್ಮಪ್ರಸಾರಕ್ಕೆ ಹೊರಟು ಉಜ್ಜಯಿನಿಯ ಹತ್ತಿರದಲ್ಲಿರುವ ಚೈತ್ಯಗಿರಿಗೆ ಹೋದಾಗ ಪ್ರೇಮಪ್ರಧಾನಳಾದ ಅವರ ತಾಯಿಯು ಗೈರಿಕವಸ್ತ್ರದಿಂದ ಆವೃತರಾಗಿರುವ ಮಕ್ಕಳನ್ನು ನೋಡಿ ಹಿಡಿಸಲಾರದಷ್ಟು ಆನಂದದಿಂದಲೇ ಅವರಿಗೆ ಸತ್ಕಾರಗಳನ್ನು ಮಾಡಿ ಅಂದಿನ.ದಿನ ತನ್ನ ಹೊಟ್ಟೆ ತಣ್ಣಗಾಯಿತೆಂದು ತಿಳಿದುಕೊಂಡದ್ದು ಪ್ರಪಂಚಕ್ಕೇ ಒಂದು ಅನ್ಯಾದೃಶವಾದ ಉದಾಹರಣೆಯಾಗಿದೆ. ಹೀಗೆ ಈ ಸಭೆಯಲ್ಲಿ ಯೋಗ್ಯತೆಯನ್ನು ಪಡೆದು ಹೊರಟವರು ಕಾಶ್ಮೀರ, ಹಿಮಾಲಯ, ಸಿಂಧುದೇಶ, ಬರ್ಮಾ, ದಕ್ಷಿಣ ಹಿಂದುಸ್ಥಾನ, ಸಿಲೋನ, ಮೊದಲಾದ ಕಡೆಗಳಲ್ಲೆಲ್ಲಾ ತುಂಬಿಕೊಂಡು ದಶದಿಕ್ಕುಗಳಲ್ಲಿಯೂ ಜ್ಞಾನ, ಧರ್ಮ, ನೀತಿ, ಪವಿತ್ರತೆ, ತ್ಯಾಗ, ವೈರಾಗ್ಯ—ಇವುಗಳ ಉಚ್ಚ ಸ್ವರೂಪವಿರುವ ಬೌದ್ಧ ತತ್ವಗಳ ಡಂಗುರವನ್ನು ಹೊಡೆದರು. ಈ ರೀತಿಯಲ್ಲಿ ಪರಿಣಮಿಸಿದ ಮಹಾಸಭೆಯಿಂದ ಬುದ್ಧನು ನೆಟ್ಟಿದ್ದ

ಬೀಜವು ಅಶೋಕನ ಕಾಲಕ್ಕೆ ಮೊಳೆತು, ಚಿಗಿತು, ಗಿಡವಾಗಿ, ಮರವಾಗಿ, ಹೂಬಿಟ್ಟು ಫಲಿಸಿತು.

## ತೀರ್ಥಯಾತ್ರೆ

ಬೌದ್ಧಮತ ಪ್ರಸಾರವು ತಿಷ್ಯನ ಪ್ರತಿಭೆಯಿಂದ ಹೀಗೆ ನಡೆಯುತ್ತಿರಲು ಅಶೋಕನು ಉಪಗುಪ್ತನೆಂಬ ಭಿಕ್ಷುವಿನೊಡನೆ ತೀರ್ಥಯಾತ್ರೆಗೆ ಹೊರಟನು. ಅಶೋಕನು ತೀರ್ಥಯಾತ್ರೆಯ ನೋಟಗಳನ್ನು ನೋಡಿಕೊಂಡು ಬರುವದಾಗಿರಲಿಲ್ಲ. ಬೌದ್ಧ ಧರ್ಮದ ಪ್ರಸಾರದ ವಿಚಾರವೇ ಅವನ ರಕ್ತದ ಪ್ರತಿಯೊಂದು ಕಣವನ್ನೂ ಬಿಸಿಮಾಡುತ್ತಿತ್ತು. ಬುದ್ಧನು ಸಂಚಾರ ಮಾಡಿದ ಸ್ಥಳಗಳನ್ನೆಲ್ಲಾ ಸಂಚರಿಸುತ್ತ ಅಶೋಕನು ಅಲ್ಲಲ್ಲಿ ಜನರ ಕಣ್ಣಿಗೆ ಕಟ್ಟಿದ ಹಾಗೆ ಆಗುವಂತೆ ಸೂತ್ರರೂಪವಾದ ಧರ್ಮೋಪದೇಶಗಳನ್ನು ಶಿಲೆಗಳ ಮೇಲೆ ಕೆತ್ತಿಸಿ ನಿಲ್ಲಿಸುವದು, ದೊಡ್ಡ ದೊಡ್ಡ ಕಂಬಗಳನ್ನು ನೆಡಿಸಿ ಅವುಗಳ ಮೇಲೆ ಅಮೂಲ್ಯವಾದ ವಾಕ್ಯಗಳನ್ನು ಬರೆಸುವದು, ಬಾಯಿಯಿಂದ ಧರ್ಮೋಪದೇಶ ಮಾಡುವದು ನಡವಳಿಕೆಯಿಂದ ಧರ್ಮವನ್ನು ತೋರಿಸುವದು, ಧರ್ಮ ಸಭೆಗಳನ್ನು, ಮಾಡುವದು— ಹೀಗೆ ನಡೆಸಿದ್ದರಿಂದ ಬರೀ ಊರು ಕೇರಿಗಳಲ್ಲಿ ಮಾತ್ರವೇ ಅಲ್ಲದೆ ಗಿರಿಗಹ್ವರಗಳಲ್ಲಿ ಕೂಡ ಬೌದ್ಧ ಧರ್ಮದ ಪ್ರತಿಧ್ವನಿ ಬರುವಂತೆ ಆಯಿತು. ಬ್ರಾಹ್ಮಣರ ಕಾಲಕ್ಕೆ ಧರ್ಮಮರ್ಮಗಳು ಅಧಿಕಾರಿಗಳೆಂಬ ಕೆಲವರಿಗೆ ಮಾತ್ರ ತಿಳಿಯುತ್ತಿತ್ತು. ಅಶೋಕನ ಕಾಲದಲ್ಲಿ ಜಾತಿಭೇದವಿಲ್ಲದೆ ಸಮಸ್ತ ಸದಾಚಾರಗಳೂ ಸಾರ್ವಜನಿಕಸಂಪತ್ತಾದವು. ಬ್ರಾಹ್ಮಣರ ಸಿದ್ಧಾಂತಗಳು ಕೇವಲ ವಿಚಾರಪ್ರಧಾನವಾದವುಗಳಾಗಿದ್ದು ಕೆಲಕೆಲವು ವಿಷಯಗಳ ಮೇಲೆ ಅಂಧಶ್ರದ್ಧೆಯನ್ನಿಡಬೇಕಾದ ಅಗತ್ಯವಿತ್ತು. ಅಶೋಕನ ಉಪದೇಶಗಳೆಲ್ಲ ತಲೆನೋವು ತರುವ ಸಿದ್ಧಾಂತಗಳಿಲ್ಲದೆ ಪ್ರೇಮಪ್ರಧಾನವಾಗಿ ಹೃದಯವನ್ನು ವಿಕಾಸಗೊಳಿಸುವ ನೀತಿಗಳಿದ್ದದರಿಂದ ಅವು ಜನರ ಮನಸ್ಸಿಗೆ ಬಹುಬೇಗ ಕಚ್ಚಿಕೊಳ್ಳುವದಕ್ಕೆ ಅವಕಾಶವಾಯಿತು. ಬ್ರಾಹ್ಮಣರು ಒಬ್ಬರಿಗೊಬ್ಬರಿಗೆ ಹಾಕಿದ್ದ ಶಾಸ್ತ್ರನಿಯಮದ ಗಂಟನ್ನು ಬಿಚ್ಚಿ ಅಶೋಕನು ಪ್ರೇಮದ ಗಂಟನ್ನು ಹಾಕಿದನು.

## ಧರ್ಮದ ಆಳಿಕೆ

ತನ್ನ ಮನಸ್ಸಿನ ಸುಸ್ಥಿತಿಗೆ ಕಲಿಂಗ ದೇಶದಲ್ಲಿ ನಡೆದ ಹಿಂಸೆಯ ಜಿಹಾಸೆಯೇ ಕಾರಣವಾದ್ದರಿಂದ ಅಶೋಕನು ಅಹಿಂಸಾವ್ರತವು ಎಲ್ಲೆಲ್ಲಿಯೂ ಆದಷ್ಟು ಹೆಚ್ಚು ನಡೆಯಬೇಕೆಂದು ಶಾಸನಮಾಡಿದನು; ನಿರಪರಾಧಿಗಳಾದ ಹಕ್ಕಿಪಕ್ಷಿಗಳ ಮತ್ತು ಪ್ರಾಣಿಗಳ ವಧೆಯನ್ನು ನಿಷೇಧಿಸಿದನು; ಇಷ್ಟೇ ಅಲ್ಲ- ಅಲ್ಲಲ್ಲಿ ಔಷಧಾಲಯಗಳನ್ನಿಟ್ಟು ಮನುಷ್ಯರ ಮತ್ತು ಪಶುಗಳ ರೋಗಕ್ಕೆ ಚಿಕಿತ್ಸೆಯನ್ನು ಮಾಡಿಸುತ್ತಿದ್ದನು; ಮತ್ತು ಆ ಕೆಲವು ಚಿಕಿತ್ಸೆಗಳು ಎಲ್ಲರಿಗೂ ತಿಳಿದಿರಬೇಕೆಂದು ವಿಶ್ವಸನೀಯಗಳಾದ ಚಿಕಿತ್ಸೆಗಳನ್ನು ಆರಿಸಿ, ಅವುಗಳ ಅನುಪಾನವನ್ನು ಸಹ ಕಲ್ಲಿನ ಮೇಲೆ ಬರೆಸಿ, ಎಲ್ಲರ ಕಣ್ಣಿಗೆ ಬೀಳುವ ಕಡೆಯಲ್ಲಿ ನೆಡಿಸಿದನು. ಅಹಿಂಸಾವ್ರತದ ವಿಷಯದಲ್ಲಿ ಇಷ್ಟು ಒಲವು ಇದ್ದರೂ ದುಷ್ಟನಿಗ್ರಹದ ವಿಷಯದಲ್ಲಿ ಅವನು ಹಿಂದೆಗೆಯುತ್ತಿರಲಿಲ್ಲ. ಒಮ್ಮೆ ತನ್ನ ಕಿರಿಯ ಹೆಂಡತಿಯಾದ ತಿಷ್ಯರಕ್ಷಿತೆಯು ಸವತಿಯ ಮಗನಾದ ಕುನಾಲನೆಂಬವನ ರೂಪಸೌಂದರ್ಯಕ್ಕೆ ಮೋಹಿಸಿದಳು. ಮಹಾಧರ್ಮಿಷ್ಠನಾಗಿದ್ದ ಕುನಾಲನು ಆ ಸೆಳೆತಕ್ಕೆ ಸಿಕ್ಕಲಿಲ್ಲ, ಇದರಿಂದ ಅನುತಪ್ತಳಾದ ತಿಷ್ಯರಕ್ಷಿತೆಯು ಅವನ ಮೇಲೆ ತನ್ನ ರೊಚ್ಚನ್ನು ತೀರಿಸಿಕೊಳ್ಳಬೇಕೆಂದು ರಹಸ್ಯವಾಗಿ ಕುನಾಲನ ಕಣ್ಣನ್ನು ಕೀಳುವಂತೆ ಆಜ್ಞಾಪತ್ರವನ್ನು ಬರೆದು, ಕಳವಿನಿಂದ ಅಶೋಕನ ಮುದ್ರೆಯನ್ನೊತ್ತಿ, ತಕ್ಷಶಿಲೆಯ ಅಧಿಕಾರಿಯ ಬಳಿಗೆ ಕಳುಹಿಸಿದಳು. ಆ ಅಧಿಕಾರಿಯು ಮೊದಲು ಈ ಕೃತ್ಯವನ್ನು ಮಾಡುವದಕ್ಕೆ ಹಿಂದುಮುಂದು ನೋಡಿ ಆಮೇಲೆ ಉಪಾಯಾಂತರವನ್ನರಿಯದೆ ಅದನ್ನು ನಡೆಸಿದನು. ಆಮೇಲೆ ಕುನಾಲನು ಕುರುಡನಾಗಿ ತನ್ನ ಹೆಂಡತಿಯ ಕೈಹಿಡಿದುಕೊಂಡು ಹಾಡುತ್ತ ಊರಿಗೆ ಬರಲು ಅಶೋಕನು ಇದನ್ನು ತಿಳಿದು ಅತ್ಯಂತ ಸಂತಪ್ತನಾಗಿ ಆ ಮಹಾದುಷ್ಟಾತ್ಮಳಾದ ತಿಷ್ಯರಕ್ಷಿತೆಯನ್ನು ಸಜೀವವಾಗಿ ಸುಡಿಸಿಬಿಟ್ಟನು. ಹೀಗೆ ದುಷ್ಟನಿಗ್ರಹವೂ ಅಹಿಂಸಾವ್ರತವೂ ಎರಡೂ ಮುಗಿಲು ಮುಟ್ಟಿದ್ದವಲ್ಲದೆ ವಿದ್ಯೆಯ ವಿಷಯಕ್ಕೂ ಅಶೋಕನ ಕಾಲವು ಹೆಸರಾಗಿದೆ. ಅಶೋಕನ ಕಾಲದಲ್ಲಿ ಈಗಿನ ಅಕ್ಷರಲಿಪಿಯಿರಲಿಲ್ಲ. ಒಂದೊಂದು ಶಬ್ದಕ್ಕೊಂದೊಂದು ಸಂಜ್ಞೆ ಇರುತ್ತಿತ್ತು. ವಸ್ತುವಿನ ಚಿತ್ರದ ಛಾಯೆಯನ್ನು ಕೊಡುವ ಪದ್ಧತಿ

ಇತ್ತು. ಇದು ಅಷ್ಟು ಅನುಕೂಲವಾಗಿರಲಿಲ್ಲ. ಅಕ್ಷರಕ್ಕೊಂದು ಚಿಹ್ನೆಯನ್ನು ಮಾಡುವ ಲಿಪಿಯು ಅಶೋಕನ ಕಾಲದಲ್ಲಿ ಹುಟ್ಟಿತು. ಅಕ್ಷರಲಿಪಿಯ ಅಭಾವದಿಂದ ವಿದ್ಯೆಗೇನೂ ಕೊರತೆ ಇರಲಿಲ್ಲ. ಅಶೋಕನ ಕಾಲದ ನರೇಂದ್ರವಿಹಾರವೆಂಬ ವಿಶ್ವವಿದ್ಯಾಲಯವೂ ತಕ್ಷಶಿಲೆಯ ಶಿಕ್ಷಣ ಮಂದಿರವೂ ಅತ್ಯಂತ ಪ್ರಶಂಸನೀಯಗಳಾಗಿದ್ದವು. ಅವುಗಳಲ್ಲಿ ಪ್ರವೇಶ ದೊರೆಯುವದಕ್ಕೆ ಎಷ್ಟೋ ಯೋಗ್ಯತೆ ಬೇಕಾಗುತ್ತಿತ್ತು. ಅಲ್ಲಿ ಯೋಗ್ಯತೆಯನ್ನು ಪಡೆದು ಬಂದರೆಂದರೆ ಅವರ ಮುಂದೆ ಎಲ್ಲರೂ ಮೂಗಿನ ಮೇಲೆ ಬೆರಳಿಟ್ಟುಕೊಳ್ಳಬೇಕಾಗಿತ್ತು. ಸಂಗೀತ ಮತ್ತು ಚಿತ್ರಕಲೆ ಮೊದಲಾದ ಯಾವ ಕುಶಲ ವಿದ್ಯೆಯೂ ಕಡಿಮೆಯಾಗಲಿಲ್ಲ. ಈ ಸ್ಥಿತಿಯನ್ನು ನೆಲೆಗೊಳಿಸುವ ದೇಶಹಿತಕ್ಕೆ ಭಂಡಾರದ ಹಣವೆಲ್ಲ ವೆಚ್ಚವಾದ ಮೇಲೆ ಅಶೋಕನು ತಾನು ಉಣ್ಣುವ ಚಿನ್ನದ ತಟ್ಟೆ ಮೊದಲಾದವುಗಳನ್ನು ಮಾರಿದ್ದಲ್ಲದೆ ತನ್ನ ಕೊನೆಯ ಕಾಲದಲ್ಲಿ ಪ್ರಾಣವಾಯು ಮೇಲಕ್ಕೇರುವಾಗ ಧರ್ಮಪ್ರಸಾರಕ್ಕಾಗಿಯೇ ರಾಜ್ಯವನ್ನು ಧಾರೆಯೆರೆದಿರುವೆನೆಂದಂದು ಸುಮ್ಮನಾದನು. ರಾಜಧರ್ಮವನ್ನು ಪಾಲಿಸಿದ ಅರಸರೆಷ್ಟೋ ಉಂಟು. ಅದರ ಜೊತೆಗೆ ತಮ್ಮ ಆತ್ಮೋನ್ನತಿಯನ್ನು ಮಾಡಿಕೊಂಡವರು ಕಡಿಮೆ. ಅಂಥ ಜನರಿದ್ದರೂ ಸಮಸ್ತ ಜನಮಂಡಲಿಯ ಆತ್ಮೋನ್ನತಿಗೂ ಸಂಪೂರ್ಣ ಸಹಾಯವನ್ನು ಮಾಡಿಸಿದ್ಧರಾದವರು ಸಿಕ್ಕಲಾರರು. ಭರತಭೂಮಿಗೆ ಅಶೋಕನ ಆಳಿಕೆಯ ಯೋಗವು ೩೭ ವರ್ಷ ಇತ್ತು. ಬರ್ಮಾರಾಜ್ಯವು ಸೇರುವದಕ್ಕೆ ಮುಂಚೆ ಹಿಂದುಸ್ತಾನದ ವಿಸ್ತಾರವೆಷ್ಟಿತ್ತೋ ಅದಕ್ಕಿಂತ ಹೆಚ್ಚು ವಿಸ್ತಾರವಾದ ರಾಜ್ಯಕ್ಕೆ ಅಧೀಶ್ವರನಾಗಿದ್ದ ಅಶೋಕನು ಈಗ ಎರಡು ಸಾವಿರ ವರ್ಷಗಳಾದರೂ ಮಾಸದೆ ಇರುವಂಥ ಕೀರ್ತಿಶರೀರದಿಂದ ವಿರಾಜಿಸುತ್ತಿರುವನು.



# ಶ್ರೀ ಶಂಕರಾಚಾರ್ಯರು

## ಹುಟ್ಟು

ಇತರ ಧರ್ಮಪಂಥಗಳೆಲ್ಲಾ ತಮಗೆ ಹೊರಗಣವುಗಳೆಂದು ಭಾವಿಸುವ ಪಂಥಗಳು ಎಲ್ಲಾ ದೇಶಗಳಲ್ಲಿಯೂ ಇರಬಹುದು; ಆದರೆ ಸರ್ವಧರ್ಮಗಳನ್ನೂ ಹೊಟ್ಟೆಯಲ್ಲಿ ಹಾಕಿಕೊಳ್ಳುವಂಥ ಪಂಥವನ್ನು ಪಡೆದಿರುವ ಸುಯೋಗವು ಭರತಖಂಡಕ್ಕೊಂದಕ್ಕೆ ಮಾತ್ರ ಇರುವದು. ನಮ್ಮ ವೈದಿಕಧರ್ಮಪಂಥದ ಆ ಮಹತ್ವವನ್ನು ಎದ್ದು ಕಾಣುವಂತೆ ತೋರಿಸಿದ ಶ್ಲಾಘನೆಯು ನಮ್ಮ ಶ್ರೀಶಂಕರಾಚಾರ್ಯರಿಗೆ ಮೀಸಲಾಗಿರುವದು. ಆಚಾರ್ಯರ ಜನ್ಮಸ್ಥಾನವು ಕೇರಳದೇಶದಲ್ಲಿ ಪವಿತ್ರವಾದ ಪೂರ್ಣಾನದಿಯ ದಡದ ಮೇಲಿರುವ ಕಾಲಟಿ ಎಂಬ ಅಗ್ರಹಾರ. ಇವರ ತಂದೆಯ ಹೆಸರು ಶಿವಗುರು. ಇವರು ನಂಬೂದ್ರಿ ಎಂಬ ವರ್ಗದ ಬ್ರಾಹ್ಮಣರು. ಶಿವಗುರುವಿನ ಪತ್ನಿಯು ಪುತ್ರಾಪೇಕ್ಷೆಯಿಂದ ಬಹುಕಾಲ ಶಿವಾರಾಧನೆಯನ್ನು ಮಾಡಲು ಶಿವನು ಆಕೆಯ ಭಕ್ತಿಭಾವಕ್ಕೆ ಮೆಚ್ಚಿ ಪ್ರಸನ್ನನಾಗಿ ಒಂದು ದಿನ ಸ್ವಪ್ನದಲ್ಲಿ ಬಂದು ಅಲ್ಪಾಯುವಾದರೂ ಸುಪುತ್ರನಾಗಬೇಕೆಂದು ಆಕೆಯ ಅಭಿಮತವನ್ನರಿತು ಹಾಗಾಗಲೆಂದು ವರವನ್ನು ಕೊಟ್ಟು ಹೋದನು. ಅದರಂತೆ ಸುಮಾರು ಕ್ರಿ. ಪೂ. ೪೦ ವರ್ಷಗಳ ಹಿಂದೆ ಶ್ರೀಶಂಕರಾಚಾರ್ಯರ ಜನ್ಮವಾಯಿತು.

## ಬಾಲ್ಯ

ಮಗನ ಅಭ್ಯುದಯವನ್ನು ನೋಡುವ ಸುಯೋಗವಿಲ್ಲದ ಶಿವಗುರು ಬಹು ಸ್ವಲ್ಪ ಕಾಲದಲ್ಲಿಯೇ ಕೈಲಾಸವಾಸಿಯಾದನು. ಆಮೇಲೆ ತಾಯ ಪೋಷಣೆಯಲ್ಲಿ ಮಗನು ನಿರಾತಂಕದಿಂದ ಬೆಳೆದನು. ಉಕ್ತ ಕಾಲಕ್ಕೆ ಅಕ್ಷರಾಭ್ಯಾಸವೂ ಉಪನಯನವೂ ನಡೆದವು. ವೇದ ವೇದಾಂಗಗಳ ಅಧ್ಯಯನವೂ ಬಹುಬೇಗ ಮುಗಿಯಿತು. ಆಚಾರ್ಯರ ಬುದ್ಧಿಯು ಬಹುತೀವ್ರವಾಗಿದ್ದದರಿಂದ ವಿದ್ಯಾಭ್ಯಾಸಕ್ಕೆ ಹೆಚ್ಚು ಕಾಲವು ಹಿಡಿಯಲಿಲ್ಲ. ಆಚಾರ್ಯರ ಅಪ್ರತಿಮಪ್ರತಿಭೆಯು ಎಲ್ಲ ಕಡೆಗೂ

ಹಬ್ಬಿತು. ಒಡನೆ ಆ ವರ್ಗದವರಲ್ಲಿ ಕನ್ಯಾಪಿತೃಗಳಾಗಿದ್ದವರೆಲ್ಲರೂ ತಮ್ಮ ತಮ್ಮ ಕನ್ಯೆಯರ ಜಾತಕಗಳೊಡನೆ ನಾನು ಮುಂದು ತಾನು ಮುಂದೆಂದು ಬಂದರು. ಮನೆಯಲ್ಲಿ ಸೊಸೆಯು ಒಗೆತನವನ್ನು ಮಾಡಿದ್ದನ್ನು ನೋಡಬೇಕೆಂಬ ಹಂಬಲು ಆಚಾರ್ಯರ ತಾಯಿಗೂ ಬಲವಾಗಿತ್ತು. ಏನು ಮಾಡುವದು! ಶಾಸ್ತ್ರಗಳನ್ನೆಲ್ಲ ಕರತಲಾ ಮಲಕವಾಗಿ ಮಾಡಿಕೊಂಡಿದ್ದ ಆಚಾರ್ಯರ ಪ್ರವೃತ್ತಿಯು ಸನ್ಯಾಸದ ಕಡೆಗೆ ಬಹು ವೇಗವಾಗಿ ಹರಿಯುತ್ತಿತ್ತು. ಒಬ್ಬ ಸ್ತ್ರೀಯ ಆಶ್ರಯ ವನ್ನು ಪಡೆದು ತಮ್ಮ ಸರ್ವಸಾಹಸದಿಂದಲೂ ಪುನ್ನಾಮನರಕವೊಂದ ರಿಂದ ಪಾರಾಗುವದಕ್ಕಿಂತಲೂ ಒಬ್ಬ ಸದ್ಗುರುವನ್ನಾಶ್ರಯಿಸಿ ಸರ್ವ ನರಕಗಳಿಂದಲೂ ಪಾರಾಗುವದು ಆಚಾರ್ಯರಿಗೆ ಉಚಿತವೆನಿಸಿತು. ಸ್ವರ್ಗವನ್ನು ಕೂಡ ನರಕವೆಂದು ತಿಳಿಯುವಷ್ಟು ಸ್ವರ್ಗ-ನರಕಗಳನ್ನು ಮೀರಿದ ಪರಮಾನಂದವನ್ನು ತಾವೂ ಪಡೆದು ಇತರರಿಗೂ ಅದನ್ನು ಸೂರೆ ಮಾಡುವವರ ಮೂಲಕ ತಮ್ಮ ಜನ್ಮವನ್ನು ಸಾರ್ಥಕಗೊಳಿಸ ಬೇಕೆಂಬ ಇಚ್ಛೆಯು ಆಚಾರ್ಯರಿಗೆ ಉತ್ಕಟವಾಗಿರುವಂತೆ ತೋರಿತು. ಇದನ್ನು ಕಂಡು ಆ ಕನ್ಯಾಪಿತೃಗಳೆಲ್ಲರೂ ನಿಟ್ಟುಸಿರು ಬಿಡುತ್ತ ಹೋಗ ಬೇಕಾಯಿತು.

## ಮನೆಯನ್ನು ಬಿಟ್ಟು ಹೊರಟಿದ್ದು

ಮಗನನ್ನು ಮದುವೆಯ ಕಡೆಗೆ ಒಲಿಸಬೇಕೆಂದು ತಾಯಿ ಬೇಕಾ ದಷ್ಟು ಪ್ರಯತ್ನವನ್ನು ಮಾಡುತ್ತಿದ್ದಳು. ಹೀಗಿರುವಾಗ ಒಂದು ದಿನ ಒಂದು ಸಂಗತಿ ನಡೆಯಿತು. ತಾಯಿ, ಮಗ—ಇಬ್ಬರೂ ಪೂರ್ಣಾ ನದಿಗೆ ಸ್ನಾನಕ್ಕೆ ಹೋಗಿದ್ದರು. ಮಗನು ನೀರೊಳಕ್ಕೆ ಇಳಿಯುತ್ತಲೇ ಒಂದು ಮೊಸಳೆಯು ಬಂದು ಅವನ ಕಾಲನ್ನು ಹಿಡಿದೆಳೆಯಿತು. ಆಚಾರ್ಯರು ತಮ್ಮ ಸನ್ಯಾಸದ ಮೇಲೆ ಇರುವ ಉತ್ಕಟವಾದ ಇಚ್ಛೆಯನ್ನು ಪೂರ್ಣಮಾಡಿಕೊಳ್ಳಬೇಕೆಂದು ತಮ್ಮ ತಾಯಿಯನ್ನು ಕೂಗಿ "ಅವ್ವಾ, ಹೋದೆನು, ಹೋದೆನು; ಮೊಸಳೆಯು ನನ್ನನ್ನು ಬಲವಾಗಿ ಎಳೆಯುತ್ತಿದೆ. ನಾನು ಸನ್ಯಾಸಿಯಾಗಿ ಸತ್ತರೆ ನನಗೊಂದು ಬಗೆಯ ತೃಪ್ತಿಯಾಗುವದು. ಅದಕ್ಕೆ ಸಮ್ಮತಿಯನ್ನು ಕೊಡು" ಎಂದು ಚೀರಲು ತಾಯಿಯು ಗಾಬರಿಯಾಗಿ ನಿರಾಶಳಾಗಿ ಉಪಾ

ಯಾಂತರವನ್ನರಿಯದೆ ಹೇಗಾದರೂ ಮಗನಿಗೆ ಸಮಾಧಾನ ವಾಗಲೆಂದು ದುಃಖದಿಂದ "ಆಗಬಹುದು" ಎಂದುತ್ತರ ಕೊಟ್ಟಳು. ಹೇಗೋ ಒಡನೆ ಮೊಸಳೆಯು ಬಿಟ್ಟು ಹೋಯಿತು. ಆಗಲೇ ಆಚಾರ್ಯರು ಅಲ್ಲಿಯೇ ಮನಸ್ಸಿನಲ್ಲಿ ಆಪತ್ಸನ್ಯಾಸವನ್ನು ಸಂಕಲ್ಪ ಮಾಡಿಕೊಂಡೇ ನೀರಿನಿಂದ ಮೇಲಕ್ಕೆ ಬಂದರು. ಮಗನು ಸಜೀವನಾಗಿ ಬಂದದ್ದು ತಾಯಿಗೆ ಅತ್ಯಾನಂದವಾಯಿತು. ಆದರೇನು ಪ್ರಯೋಜನ! ಆಚಾರ್ಯರು ಕ್ರಮಸನ್ಯಾಸವನ್ನು ತೆಗೆದುಕೊಳ್ಳುವದಕ್ಕಾಗಿ ಸದ್ಗುರುವನ್ನು ಹುಡುಕಿಕೊಂಡು ಹೊರಡುವ ಉದ್ಯೋಗವನ್ನು ನಡೆಸಿದರು. ವೃದ್ಧಳಾದ ತಾಯಿಯು ತನ್ನ ಉತ್ತರಕ್ರಿಯೆಗೆ ಯಾರೂ ದಿಕ್ಕಿಲ್ಲದಂತಾಗುವದೆಂದು ಪೇಚಾಡಲು ಆಚಾರ್ಯರು ತಾವು ಸನ್ಯಾಸಿಯಾದರೂ ಕೂಡ ಆ ಸಮಯಕ್ಕೆ ಬಂದು ಮಾತೃಋಣವನ್ನು ತೀರಿಸುವೆನೆಂದು ಮಾತು ಕೊಟ್ಟು ಆಕೆಯ ಯೋಗಕ್ಷೇಮವನ್ನು ತಮ್ಮ ಸಮೀಪದ ಬಂಧುವರ್ಗದವರಿಗೊಪ್ಪಿಸಿ ಆಕೆಯ ಆಶೀರ್ವಾದವನ್ನು ಪಡೆದು ಹೊರಕ್ಕೆ ಕಾಲ್ದೆಗೆದರು.

## ಆಶ್ರಮ ಸ್ವೀಕಾರ

ಆಗಿನ ಕಾಲದಲ್ಲಿ ನರ್ಮದಾತೀರದಲ್ಲಿ "ಗೋವಿಂದ" ಎಂಬ ಒಬ್ಬ ವಿದ್ವತ್ಸನ್ಯಾಸಿಗಳ ಅಧ್ಯಕ್ಷತೆಯಲ್ಲಿ ಒಂದು ವಿದ್ಯಾಪೀಠವು ಬಹಳ ಹೆಸರುವಾಸಿಯಾಗಿತ್ತು. ಅವರು ವೇದಾಂತಸೂತ್ರ ಮೊದಲಾದವುಗಳಿಗೆ ಪರಂಪರಾಗತವಾದ ಅರ್ಥವನ್ನು ಉಪದೇಶ ಮಾಡುವದಕ್ಕೆ ದೀಕ್ಷಾಬದ್ಧರಾಗಿದ್ದರು. ಇವರಲ್ಲಿ ಮತ್ತೊಂದು ವಿಶೇಷವೇನೆಂದರೆ ಎಲ್ಲರೂ ಉಪನಿಷತ್ತೆಂದು ಗೌರವಿಸುವಂಥ ಮಾಂಡೂಕ್ಯಕಾರಿಕೆಯನ್ನು ಬರೆದ ಶ್ರೀ ಗೌಡಪಾದರು ಇವರ ಗುರುಗಳಾಗಿದ್ದರು. ಈ ಪ್ರಾಶಸ್ತ್ಯವುಳ್ಳ ಅವರ ಯಶಸ್ಸಿನ ಸುವಾಸನೆಯನ್ನು ಹಿಡಿದು ಆಚಾರ್ಯರು ಅಲ್ಲಿಗೆ ಹೋಗಿ ತಮ್ಮ ವಿದ್ಯಮಾನವನ್ನೆಲ್ಲಾ ಹೇಳಿದರು. ಶ್ರೀ ಗೋವಿಂದಭಗವತ್ಪಾದರು ಅವರ ಸಚ್ಛಿಷ್ಯತ್ವವನ್ನು ಮನಗಂಡು ಅವರನ್ನು ತಮ್ಮ ಶಿಷ್ಯರನ್ನಾಗಿ ಪರಿಗ್ರಹಿಸಿ ವಿಧಿಪ್ರಕಾರವಾಗಿ ಸನ್ಯಾಸ ದೀಕ್ಷೆಯನ್ನು ಕೊಟ್ಟು ಅವರಿಗೆ ಪರಂಪರಾಗತವಾದ ವೇದಾಂತಾರ್ಥವನ್ನು ಉಪದೇಶ ಮಾಡಿದರು. ಇಷ್ಟೇ ಅಲ್ಲ, ಆಚಾರ್ಯರ ಬುದ್ಧಿ

ಪ್ರತಿಭೆಯನ್ನು ನೋಡಿ ಅದನ್ನು ಲೋಕೋದ್ಧಾರಕ್ಕಾಗಿ ಉಪಯೋಗ ಪಡಿಸಬೇಕೆಂಬ ಯೋಚನೆಯು ಅವರಿಗೆ ಉಂಟಾಯಿತು. ಅವೈದಿಕ ವಾದ ಬೌದ್ಧಧರ್ಮವು ಕಳೆಗುಂದುತ್ತಿದ್ದರೂ ವೈದಿಕವಾದ ಕರ್ಮ ಮಾರ್ಗವೂ ಅರ್ಥವತ್ತಾಗಿರಲಿಲ್ಲ. ಆತ್ಮನು ಯಜ್ಞವನ್ನು ಮಾಡು ವವನಾಗಿ ಹೃದಯವೆಂಬ ಅಗ್ನಿಕುಂಡದಲ್ಲಿ ಧ್ಯಾನವೆಂಬ ಅಗ್ನಿಯಲ್ಲಿ ವಿಷಯೇಚ್ಛೆಯೆಂಬ ತುಪ್ಪವನ್ನೂ ಕೋಪವೆಂಬ ಪಶುವನ್ನೂ ಹೋಮ ಮಾಡಬೇಕೆಂಬ ಒಳಗಣ ಜೀವರೂಪವಾದ ಅನುಸಂಧಾನವು ಹೆಸರಿಲ್ಲ ದಂತಾಗಿ ಯಜ್ಞಯಾಗಾದಿಗಳೆಲ್ಲಾ ಹೊರಗಣ ಅಸ್ಥಿಪಂಜರದಂಥ ಮಂತ್ರತಂತ್ರಗಳಲ್ಲಿ ಮುಗಿದು ಹೋಗುತ್ತಿದ್ದವಲ್ಲದೆ ಅಷ್ಟರಿಂದಲೇ ಮುಕ್ತಿಯೆಂಬ ಭಾವನೆಯು ಬೇರೂರಿಕೊಂಡಿತ್ತು. ಇದಲ್ಲದೆ ವೇದದ, ಸ್ಮೃತಿಯ ಅಥವಾ ಪುರಾಣಗಳ ಒಂದೊಂದು ವಾಕ್ಯವನ್ನು ಹಿಡಿದು ನಿಂದ್ಯವಾದ ವಾಮಾಚಾರವನ್ನು ಅದಕ್ಕೆ ಬೆರೆಸಿ ಒಂದೊಂದನುಷ್ಠಾನ ವನ್ನೇರ್ಪಡಿಸಿಕೊಂಡು ಬೇರೆ ಬೇರೆ ಪಂಗಡಗಳಾಗಿ ಒಬ್ಬರಿಗೊಬ್ಬರು ದುರಭಿಮಾನದಿಂದ ಬಡಿದಾಡುವ ಗುಂಪುಗಳ ಹಾವಳಿಯು ಆಗ ಬಹಳವಾಗಿತ್ತು. ಇವುಗಳ ಹುಟ್ಟಡಗಿಸುವ ಸಾಮರ್ಥ್ಯವು ಈ ಶಿಷ್ಯ ನಲ್ಲಿರುವದೆಂದು ಶ್ರೀ ಗೋವಿಂದಭಗವತ್ಪಾದರು ಆಚಾರ್ಯರನ್ನು ಕರೆದು "ಪಾಠಪ್ರವಚನಾದಿಗಳಿಂದ ಶಿಷ್ಯರನ್ನು ಸಿದ್ಧಗೊಳಿಸಿ ಭಾಷ್ಯ ವನ್ನು ರಚಿಸಿ ಅದ್ವೈತಮತದ ಪುನರುಜ್ಜೀವನವನ್ನು ಮಾಡಬೇಕು" ಎಂದು ತಮ್ಮಾಶಯವನ್ನು ಸೂಚಿಸಿ ಅವರನ್ನು ಮೊದಲು ಕಾಶಿಗೆ ಕಳುಹಿಸಿದರು.

## ಕಾಶಿಯ ವಾಸ

ಸದ್ಗುರುಗಳ ಅಪ್ಪಣೆಯಂತೆ ಆಚಾರ್ಯರು ಕಾಶಿಯನ್ನು ಸೇರಿ ಅಲ್ಲಿ ತಮ್ಮ ಪಾಠಪ್ರವಚನಗಳಿಗಾರಂಭಿಸಿದರು. ಕಲ್ಲನ್ನು ಕೂಡ ಕರಗಿ ಸುವಂಥ ಇವರ ಬೋಧನ ಸಾಮರ್ಥ್ಯವನ್ನು ಕೇಳಿ ಅನೇಕರು ಬಂದು ಇವರ ಶಿಷ್ಯರಾಗಿ ಇವರ ಉಪದೇಶ ಮಹಿಮೆಯಿಂದ ತಮ್ಮ ಅಜ್ಞಾ ನಾಂಧಕಾರವನ್ನು ಹೋಗಲಾಡಿಸಿಕೊಂಡರು. ಆಚಾರ್ಯರು ಕಾಶಿ ಯಲ್ಲಿರುವಾಗಲೇ ಚೋಳದೇಶದಿಂದ ಪದ್ಮಪಾದರೆಂಬವರು ಬಂದು ಶಿಷ್ಯತ್ವಕ್ಕೆ ನಿಂತರು. ಹಿಂದಿನ ಎಲ್ಲಾ ಶಿಷ್ಯರಿಗಿಂತಲೂ ಇವರ ಮೇಲೆ ಹೆಚ್ಚು ಪ್ರೀತಿಯುಂಟಾದದ್ದನ್ನು ನೋಡಿ ಉಳಿದ ಶಿಷ್ಯರ ಮನಸ್ಸಿನಲ್ಲಿ

ಕುಕಲ್ಪನೆಯುಂಟಾಗಿರುವದೆಂದು ತಿಳಿದು ಆಚಾರ್ಯರು ಒಮ್ಮೆ ನೀರಿನ ಮೇಲೆ ಆ ಪದ್ಮಪಾದರು ನಡೆದುಕೊಂಡು ಬಂದಂಥ ಯೋಗ್ಯತಾ ವಿಶೇಷ ವನ್ನು ಜನರಿಗೆ ತೋರಿಸಿ ಅವರ ದುರ್ಭಾವನೆಯನ್ನು ದೂರ ಮಾಡಿದ ರೆಂದು ಹೇಳುತ್ತಾರೆ. ಆಚಾರ್ಯರು ಪಾಠಪ್ರವಚನಗಳನ್ನು ಹೇಳುವ ದರ ಜೊತೆಗೆ ತಮ್ಮ ಅವಕಾಶ ಕಾಲದಲ್ಲಿ ವಿಷ್ಣುಸಹಸ್ರನಾಮಭಾಷ್ಯ ಮೊದಲಾದ ಸಣ್ಣ ಸಣ್ಣ ಗ್ರಂಥಗಳನ್ನು ರಚಿಸಿದರು. ಅಲ್ಲದೆ ತಾವು ಕರ್ಮ ಮಾರ್ಗವನ್ನು ಹಿಡಿಯದೆ ಒಮ್ಮೆಗೇ ಸನ್ಯಾಸವನ್ನು ಸ್ವೀಕರಿಸಿದ್ದು ಸಯುಕ್ತಿಕವೆಂದು ತೋರಿಸುವದನ್ನು ಲಕ್ಷ್ಯದಲ್ಲಿಟ್ಟುಕೊಂಡು ಭಗವ ದ್ಗೀತಾಭಾಷ್ಯವನ್ನೂ ಬರೆದರು. ಆಚಾರ್ಯರು ಒಂದು ದಿನ ಗಂಗಾ ಸ್ನಾನ ಮಾಡಿ ಬರುತ್ತ ಒಬ್ಬ ಚಂಡಾಲನನ್ನು ನೋಡಿ ದೂರ ಹೋಗೆ ನ್ನಲು ಅವನು " ದೂರ ಹೋಗಬೇಕಾದ್ದು ಆತ್ಮವೋ ? ದೇಹವೋ ?" ಎಂದು ಅವರಿಗೆ ಪ್ರಶ್ನೆ ಹಾಕಿದನು. ಆತ್ಮನು ದೇಹಾದಿಗಳಿಗಿಂತ ಭಿನ್ನ ನೆಂಬೀ ಬಗೆಯ ಜ್ಞಾನವುಳ್ಳವನು ಚಂಡಾಲನಾದರೂ ತಮಗೆ ಗುರು ಸ್ವರೂಪನೆಂದು ಆಗಲೇ ಗುಣಗ್ರಾಹಿಗಳಾದ ಆಚಾರ್ಯರು ಹೇಳಿರುವ ಮನೀಷಾಪಂಚಕವೆಂಬ ಶ್ಲೋಕಗಳು ಈಗಲೂ ಪ್ರಚಾರದಲ್ಲಿವೆ. ವ್ಯಾಸರು ಆಚಾರ್ಯರ ಮನಸ್ಸಿನ ಪರಿಸ್ಥಿತಿಯನ್ನು ಪರೀಕ್ಷೆ ಮಾಡುವ ದಕ್ಕಾಗಿ ಆ ಚಂಡಾಲ ರೂಪಿನಲ್ಲಿ ಕಾಣಿಸಿಕೊಂಡರೆಂದು ಜನರ ಭಾವನೆ ಯಿದೆ. ಒಂದು ದಿನ ಆಚಾರ್ಯರು ದಾರಿಯಲ್ಲಿ ಬರುತ್ತ ವ್ಯಾಕರಣ ಶಾಸ್ತ್ರವನ್ನು ಕಂಠಪಾಠ ಮಾಡುತ್ತಿದ್ದ ಒಬ್ಬನನ್ನು ನೋಡಿ ಅವನು ತನ್ನ ಅಮೂಲ್ಯವಾದ ಆಯುಸ್ಸನ್ನು ವ್ಯರ್ಥವಾಗಿ ಹೀಗೆ ಕಳೆಯುತ್ತಿರುವನೆಂಬ ಕನಿಕರದಿಂದ ಶ್ಲೋಕರೂಪವಾಗಿ ಹೇಳಿದ 'ಭಜಗೋವಿಂದಂ' ಶ್ಲೋಕ ಗಳು ಈಗಲೂ ಎಷ್ಟೋ ಜನರ ನಾಲಿಗೆಯಲ್ಲಿ ನಲಿದಾಡುತ್ತಿವೆ. ಆಮೇಲೆ ಆಚಾರ್ಯರು ಬದರಿಕಾಶ್ರಮಕ್ಕೆ ಹೋಗಿ ವಿರಾಮವಾಗಿ ಕುಳಿತು ಬ್ರಹ್ಮಸೂತ್ರಭಾಷ್ಯ, ಉಪನಿಷದ್ಭಾಷ್ಯ- ಮೊದಲಾದ ಅನೇಕ ಗ್ರಂಥಗಳನ್ನು ಮಾಡಿಕೊಂಡು ಬಂದರು. ಈ ಸಮಯದಲ್ಲಿ ಸಾಕ್ಷಾ ದ್ವ್ಯಾಸರೇ ವೃದ್ಧ ಬ್ರಾಹ್ಮಣ ರೂಪಿನಿಂದ ಆಚಾರ್ಯರ ಬಳಿಗೆ ಬಂದು ಅನೇಕ ಬಗೆಯ ಪೂರ್ವಪಕ್ಷಗಳನ್ನು ಮಾಡಿ ಆಚಾರ್ಯರ ಭಾಷ್ಯವ ಸರ್ವತೋಮುಖದಿಂದ ವಿಚಾರ ಮಾಡಿದ ಪೂರ್ಣಗ್ರಂಥವಾಗಿರುವಂತೆ ಮಾಡಿದರೆಂಬ ಹೇಳಿಕೆಯುಂಟು. ಅಂತೂ ಪರಮತವಾದಿಗಳ

ತಂಡೋಪತಂಡವಾಗಿ ಬಂದು ಬಗೆಬಗೆಯ ಪೂರ್ವಪಕ್ಷಗಳನ್ನೊಡ್ಡಿ ಕೊನೆಗೆ ತಮ್ಮ ಸಿದ್ಧಾಂತದ ಅಸಾರವನ್ನು ತಿಳಿದು ಆಚಾರ್ಯರ ಮತ ವನ್ನು ಆದರದಿಂದ ಸ್ವೀಕರಿಸುತ್ತಿದ್ದರು.

## ಮಂಡನಮಿಶ್ರರು ಶಿಷ್ಯರಾದದ್ದು

ಈ ರೀತಿಯಲ್ಲಿ ಕಾಶಿಯಲ್ಲಿ ಅಪರಿಮಿತವಾದ ಶಿಷ್ಯಪರಿವಾರವನ್ನು ಪಡೆದು ಆಚಾರ್ಯರು ಅವರಿಗೆಲ್ಲಾ ಶ್ರುತಿಯುಕ್ತ್ಯನುಭವ ಸಹಿತವಾದ ತಮ್ಮ ಸಿದ್ಧಾಂತವನ್ನು ಮನಗಾಣಿಸಿ ಅದರ ಪ್ರಸಾರಕ್ಕಾಗಿಯೂ ಆಗ ಕರ್ಮಕಾಂಡದಲ್ಲಿ ನಿಷ್ಣಾತರಾಗಿದ್ದ ಶ್ರೀ ಕುಮಾರಿಲಭಟ್ಟರಿಂದ ತಮ್ಮ ಭಾಷ್ಯಕ್ಕೆ ವಾರ್ತಿಕವನ್ನು ಬರೆಸಬೇಕೆಂಬ ಉದ್ದೇಶದಿಂದಲೂ ಅಲ್ಲಿಂದ ಹೊರಟರು. ಅಷ್ಟುಹೊತ್ತಿಗೆ ಆಚಾರ್ಯರ ಯಶೋದುಂದುಭಿಯು ಎಲ್ಲೆಲ್ಲಿಯೂ ಧ್ವನಿಮಾಡಿದ್ದರಿಂದ ಆಗಿನ ರಾಜರೆಲ್ಲಾ ಇವರನ್ನು ಅನೇಕೋಪಚಾರಗಳಿಂದ ತಮ್ಮ ತಮ್ಮ ರಾಜಧಾನಿಗೆ ಬರಮಾಡಿ ಕೊಂಡು ಅವರ ಪ್ರಜ್ಞಾವಿಶೇಷವನ್ನು ಗೌರವಿಸುವದಕ್ಕಾರಂಭಿಸಿದರು. ಹೋದ ಹೋದ ಕಡೆಗಳಲ್ಲೆಲ್ಲಾ ತಮ್ಮ ಪಾಠಪ್ರವಚನವೂ ಮತ್ತು ಪರಮತದವರೊಡನೆ ವಾದಮಾಡಿ ಅವರಿಗೆ ಅದ್ವೈತದ ಯಥಾರ್ಥ ವನ್ನು ಮನಗಾಣಿಸೋಣವೂ ನಡೆದಿತ್ತು. ಹೀಗೆ ಪ್ರಯಾಣವನ್ನು ಸಾಗಿಸುತ್ತ ಪ್ರಯಾಗಕ್ಕೆ ಬಂದಾಗ ಅಲ್ಲಿ ಅವರಿಗೆ ಕುಮಾರಿಲಭಟ್ಟರು ದೊರೆತರು. ಕುಮಾರಿಲಭಟ್ಟರು ಬೌದ್ಧರ ಹುಳುಕುಗಳನ್ನೆಲ್ಲಾ ತಿಳಿದು ಅವುಗಳನ್ನೆಲ್ಲಾ ಎತ್ತಿಹಾಕಿ ಕರ್ಮಮಾರ್ಗವನ್ನು ಸ್ಥಾಪಿಸುವದಕ್ಕೆ ಸಾಹಸವನ್ನು ಮಾಡಿದವರಾಗಿದ್ದು ತಮ್ಮ ಆ ಜಯದ ಫಲವಾಗಿ ಬೌದ್ಧರಿಗೆ ರಾಜರಿಂದ ಪ್ರಾಣಹಾನಿಯಾದದ್ದಕ್ಕೆ ವ್ಯಥೆಗೊಂಡು ತಾವಾ ಗಿಯೇ ದೇಹಾಂತಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿ ತುಷದ ಚಿತೆಯನ್ನೇರಿದ್ದರು. ಆಗ ಆಚಾರ್ಯರು ಬಂದು ತಮ್ಮ ಭಾಷ್ಯವನ್ನು ಅವರ ಮುಂದಿಟ್ಟು ತಮ್ಮ ಉದ್ದೇಶವನ್ನು ವ್ಯಕ್ತ ಗೊಳಿಸಿದಾಗ ಕುಮಾರಿಲಭಟ್ಟರು ಆ ಅವಸರದಲ್ಲಿಯೇ ಉತ್ಸಾಹದಿಂದ ಅದರ ಸ್ವಲ್ಪ ಭಾಗವನ್ನು ಓದಿನೋಡಿ ಸಂತೋಷಿಸಿ ತಮಗೆ ಅವಕಾಶ ವಿಲ್ಲದ್ದರಿಂದ ಆ ಕಾರ್ಯವನ್ನು ನೆರವೇರಿಸಿಕೊಳ್ಳುವದಕ್ಕೆ ಮಂಡನ

ಮಿಶ್ರರ ಕಡೆಗೆ ಹೋಗಬೇಕೆಂದೂ ಅವರಿಗೆ ನಿವೃತ್ತಿಮಾರ್ಗವನ್ನು ಮನ ಗಾಣಿಸಿ ಈ ಉದ್ದೇಶವನ್ನು ಸಾಧಿಸತಕ್ಕದೆಂದೂ ಸೂಚನೆ ಮಾಡಿ ತಮ್ಮ ಪ್ರಾಯಶ್ಚಿತ್ತವನ್ನು ಪೂರ್ಣಮಾಡಿಕೊಂಡು ಬಿಟ್ಟರು. ಮಂಡನ ಮಿಶ್ರರು ದಿಗ್ದಂತಿಗಳಾದ ಪಂಡಿತರಾಗಿದ್ದರು. ಆದ್ದರಿಂದ ಅವರನ್ನು ಒಲಿಸಿಕೊಂಡು ತಮ್ಮ ಕಾರ್ಯವನ್ನು ಸಾಂಗಮಾಡುವದು ಹೆಚ್ಚು ಶೋಭಾಸ್ಪದವೆಂದು ಆಚಾರ್ಯರಿಗೆ ತೋರಿತು. ಆಗ ಆಚಾರ್ಯರು ಇಂದೂರು ಸಂಸ್ಥಾನದಲ್ಲಿ ನರ್ಮದಾತೀರದಲ್ಲಿರುವ ಮಾಹಿಷ್ಮತಿಗೆ ಬಂದರು. ಅಲ್ಲಿ ಮಂಡನಮಿಶ್ರರು ಆಸ್ಥಾನದಲ್ಲಿ ಮುಖ್ಯ ಪಂಡಿತ ರಾಗಿದ್ದು ಕರ್ಮಮಾರ್ಗಪ್ರವರ್ತಕರಲ್ಲಿ ಅಗ್ರಗಣ್ಯರಾಗಿದ್ದರು ಆಚಾ ರ್ಯರು ಬಹುವೈಭವದಿಂದ ಕೂಡಿದ ಅವರ ಮನೆಗೆ ಹೋಗಿ ವಾದ ಭಿಕ್ಷೆಯನ್ನು ಬೇಡಿದರು. ಇಬ್ಬರಿಗೂ ವಾದವು ಗೊತ್ತಾಯಿತು. ಇಂಥ ದಿಗ್ದಂತಿ ಪಂಡಿತರಿಬ್ಬರ ವಾದಕ್ಕೆ ಮಧ್ಯಸ್ಥಗಾರರೇ ಎಲ್ಲಿಯೂ ದೊರೆ ಯಲಿಲ್ಲ. ಮಂಡನಮಿಶ್ರರಿಗೆ ಭಾರತಿಯೆಂಬ ಹೆಂಡತಿಯಿದ್ದಳು. ಆಕೆಯು ತನ್ನ ವಿದ್ವತ್ತಿನಲ್ಲಿ ಸಾಕ್ಷಾತ್ಸರಸ್ವತಿಯನ್ನು ಮರೆಸಿದ್ದಳು. ಕೊನೆಗೆ ಆಕೆಯೇ ಮಧ್ಯಸ್ಥಗಾರಳೆಂದು ನಿಶ್ಚಯವಾಯಿತು. ಕರ್ಮ ಮಾರ್ಗವು ಗೆದ್ದರೆ ಆಚಾರ್ಯರು ಸನ್ಯಾಸವನ್ನು ಬಿಟ್ಟು ಮದುವೆ ಯಾಗಬೇಕೆಂದೂ ಜ್ಞಾನಮಾರ್ಗವು ಗೆದ್ದರೆ ಮಂಡನಮಿಶ್ರರು ಸನ್ಯಾಸಿ ಯಾಗಬೇಕೆಂದೂ ಪಂಥಗಳಾದವು. ವಾದವು ಎಷ್ಟೋ ತೀಕ್ಷ್ಣವಾಗಿ ನಡೆದ ಮೇಲೆ ಆಚಾರ್ಯರ ಸಿದ್ಧಾಂತಕ್ಕೆ ಜಯಜಯಕಾರವು ದೊರೆ ಯಿತು. ಈ ಸಮಯದಲ್ಲಿ ಭಾರತೀದೇವಿಯು ಆ ಉಭಯರ ಕೊರಳ ಲ್ಲಿಯೂ ಪುಷ್ಪಹಾರವನ್ನು ಹಾಕಿದ್ದು ತನ್ನ ಪತಿಯ ಹಾರವು ಬಾಡಿ ದ್ದನ್ನು ನೋಡಿ ಪತಿಯ ಪರಾಜಯವನ್ನು ಒಪ್ಪಿಕೊಳ್ಳಬೇಕಾಯಿ ತೆಂದು ಪ್ರತೀತಿಯಿದೆ. ಅಂತೂ ಮಂಡನಮಿಶ್ರರ ಸೋಲಿನಿಂದ ಕರ್ಮ ಮಾರ್ಗದ ಮೂಲಸ್ತಂಭವು ಮುರಿದು ಬಿತ್ತು. ಬಹುಕಾಲ ಕರ್ಮ ವನ್ನು ಮಾಡಿ ಚಿತ್ತಶುದ್ಧಿಯನ್ನು ಪಡೆದಿದ್ದ ಮಂಡನಮಿಶ್ರರ ಮನಸ್ಸಿ ನಲ್ಲಿ ಆಚಾರ್ಯರರ ಉಪದೇಶದ ಪ್ರತಿಯೊಂದು ಅಕ್ಷರವೂ ಸ್ಪಷ್ಟವಾಗಿ ಒಡೆದು ಮೂಡಿತು. ಆಗ ಮಂಡನಮಿಶ್ರರು ತಮ್ಮ ಸರ್ವಸ್ವವನ್ನೂ ದಾನಮಾಡಿ ಸನ್ಯಾಸಿಯಾಗಿ ಆಚಾರ್ಯರ ಮುಖ್ಯ ಶಿಷ್ಯರಾಗುವದಕ್ಕೆ ಸನ್ನಾಹ ಮಾಡಿದರು.

## ಭಾರತೀದೇವಿಯ ಸೋಲು

ಈ ಸಮಯದಲ್ಲಿ ಭಾರತೀದೇವಿಯು ಶಾಪವಿಮುಕ್ತಳಾದ ಸರಸ್ವತೀದೇವಿಯಾಗಿ ಬ್ರಹ್ಮನ ಬಳಿಗೆ ಹೊರಟಳೆಂದು ಆಕೆಯು ತಮ್ಮಲ್ಲಿಯೇ ನೆಲಸಿರುವಂತೆ ಆಚಾರ್ಯರು ಕೇಳಿಕೊಂಡರೆಂದೂ ವಾರ್ತೆಯಿದೆ. ಆಮೇಲೆ ಪತಿಯ ಪರಾಜಯದಿಂದ ಪೀಡಿತಳಾದ ಭಾರತೀದೇವಿಯು ಅರ್ಧಾಂಗಿಯಾದ ತನ್ನನ್ನೂ ಜಯಿಸಿದರೆ ಮಾತ್ರ ಆ ಜಯವು ಪೂರ್ಣವಾಗುವದೆಂದು ಹೇಳಿ ಆಚಾರ್ಯರನ್ನು ವಾದಕ್ಕೆ ಕರೆದಳು. ಸ್ತ್ರೀಯರೊಡನೆ ವಾದಮಾಡಬಾರದೆಂದು ಆಚಾರ್ಯರು ಆಕ್ಷೇಪವನ್ನೊಡ್ಡಲು ಸರ್ವತೋಜ್ಞಾನವುಳ್ಳ ಭಾರತಿಯು ಅದನ್ನು ಮಾಡಬಹುದೆಂಬದಕ್ಕೆ ತಕ್ಕ ಆಧಾರವನ್ನು ತೋರಿಸಿದಳು. ಹದಿನೇಳುದಿನ ಏಕಪ್ರಕಾರವಾಗಿ ವಾದ ನಡೆಯಿತು. ಭಾರತೀದೇವಿಯು ಕ್ಷಣಕ್ಷಣಕ್ಕೆ ಒಂದು ಶಾಸ್ತ್ರದಿಂದ ಇನ್ನೊಂದು ಶಾಸ್ತ್ರಕ್ಕೆ ಹಾರುತ್ತ ಆಚಾರ್ಯರನ್ನು ದಿಕ್ಕುಗೆಡಿಸಬೇಕೆಂದು ಎಷ್ಟೋ ಪ್ರಯತ್ನಮಾಡಿದಳು. ಆಕೆಯ ವಿದ್ಯಾಪ್ರೌಢಿಮೆಯೆಂಬ ಝುಂಝಾಮಾರುತನು ಆಚಾರ್ಯರೆಂಬ ಹಡಗನ್ನು ಎತ್ತೆತ್ತ ತಿರುಗಿಸಿದರೂ ಅವರ ವಿವೇಕಪ್ರಜ್ಞೆಯು ಯಾವಾಗಲೂ ಉತ್ತರಮುಖಿಯಾಗಿದ್ದು ಅವರನ್ನು ತನ್ನ ದಾರಿಗೇ ತಂದುಬಿಡುತ್ತಿತ್ತು. ಆಚಾರ್ಯರಿಗೆ ಪರಿಚಯವಿರದ ವಿದ್ಯೆಯಲ್ಲಿ ಅವರನ್ನು ಬಾಯಿಕಟ್ಟಬೇಕೆಂದು ಭಾರತೀದೇವಿಯು ಕಾಮಶಾಸ್ತ್ರದ ವಿಚಾರವನ್ನು ತೆಗೆದಳು. ಆಚಾರ್ಯರು ಬ್ರಹ್ಮಚರ್ಯೆಯಿಂದಲೇ ಸನ್ಯಾಸ ಮಾಡಿದವರಾದ್ದರಿಂದ ಅವರಿಗೆ ಅದರ ಗಂಧವೇ ಇರಲಿಲ್ಲ. ಇಷ್ಟೇ ಅಲ್ಲ; ಮುಂದೆ ಅವರು ಅದನ್ನು ತಿಳಿಯುವ ಸಂಭವವೂ ಇರಲಿಲ್ಲ. ಇಂಥ ವಿಚಾರವನ್ನು ತೆಗೆದು ಇಕ್ಕಟ್ಟಿಗೆ ಸಿಕ್ಕಿಸಿಕೊಂಡದ್ದನ್ನು ನೋಡಿ ಆಚಾರ್ಯರು ಆ ವಿಚಾರವನ್ನು ತಿಳಿದುಕೊಂಡು ಬರುವದಕ್ಕಾಗಿ ಆಕೆಯಿಂದ ಒಂದುತಿಂಗಳ ಅವಧಿಯನ್ನು ತೆಗೆದುಕೊಂಡು ಹೊರಟು ನರ್ಮದಾನದಿಯ ತೀರದಲ್ಲಿ ಒಂದು ಮರದ ಪೊಟ್ಟರೆಯಲ್ಲಿ ತಮ್ಮ ದೇಹವನ್ನಿಟ್ಟು ಅದರ ಕಾವಲಿಗೆ ಶಿಷ್ಯರನ್ನು ನಿಯಮಿಸಿ ತಾವು ಯೋಗ ಶಕ್ತಿಯಿಂದ ಹೊರಟು ಅಲ್ಲಿಯ ತೀರಪತ್ತನದಲ್ಲಿ ಆಗ ತಾನೇ ಮೃತನಾಗಿದ್ದ ಅಮರುಕನೆಂಬ ರಾಜನ ದೇಹವನ್ನು ಪ್ರವೇಶಮಾಡಿದರು. ರಾಜನ ಮರಣಕ್ಕಾಗಿ ದುಃಖಿ

ಸುತ್ತಿದ್ದವರೆಲ್ಲರೂ ಆ ದೇಹವು ಚೇತನವನ್ನು ಪಡೆದದ್ದನ್ನು ನೋಡಿ ರಾಜನು ಬದುಕಿಕೊಂಡನೆಂದು ಅತ್ಯಾನಂದಪಟ್ಟರು. ಆಮೇಲೆ ಅಮರುಕನ ದೇಹದಲ್ಲಿ ಆಚಾರ್ಯರು ವ್ಯವಹರಿಸುವದಕ್ಕಾರಂಭಿಸಿದರು. ಆಗ ರೋಗಮುಕ್ತನಾದ ತಮ್ಮ ಪತಿಯ ವ್ಯವಹಾರದಲ್ಲಿ ಪೂರ್ವಾನುಭವವೊಂದನ್ನೂ ಕಾಣದೆ ಅರಸಿಯರೆಲ್ಲರೂ ಸಂಶಯಗೊಂಡು ಮಂತ್ರಿಯ ಮೂಲಕ ಶೋಧನಕಾರ್ಯವನ್ನು ನಡೆಸಿದರು. ಇತ್ತ ಆಚಾರ್ಯರು ಆ ಅರಸಿಯರೊಡನೆ ವಿವಿಧವಿಲಾಸದಲ್ಲಿ ಮಗ್ನರಾಗಿರಲು ಅತ್ತ ರಾಜದೂತರು ಮಂತ್ರಿಯಪ್ಪಣೆಯಂತೆ ಆಚಾರ್ಯರ ದೇಹವನ್ನು ಕಂಡು ಅದನ್ನು ದಹನಮಾಡುವದಕ್ಕುಪಕ್ರಮಿಸಿದರು. ಇಷ್ಟರಲ್ಲಿ ಆಚಾರ್ಯರ ಶಿಷ್ಯರು ಊರೊಳಗೆ ಬಂದು ಪ್ರಕಾರಾಂತರದಿಂದ ಆಚಾರ್ಯರಿಗೆ ಎಚ್ಚರಿಕೆಯನ್ನು ಕೊಟ್ಟರು. ಒಡನೆ ಆಚಾರ್ಯರು ಅಮರುಕನ ದೇಹವನ್ನು ಬಿಟ್ಟು ನರ್ಮದಾತೀರಕ್ಕೆ ಹೋಗಿ ಚಿತಿಯ ಮೇಲೆ ಯಜ್ಞೇಶ್ವರನ ಹಿಡಿತಕ್ಕೆ ಸಿಕ್ಕುಬಿದ್ದಿದ್ದ ದೇಹವನ್ನು ನೋಡಿ ಶ್ರೀಮಹಾವಿಷ್ಣುವನ್ನು ಪ್ರಾರ್ಥನೆಮಾಡಿದರು. ಒಡನೆ ಮಳೆ ಬಂದು ಚಿತೆಯು ಆರಿಹೋಗಲು ಆಚಾರ್ಯರು ತಮ್ಮ ದೇಹವನ್ನು ತಾವು ಹೊಕ್ಕು ಅಲ್ಲಿಂದ ಮುಂದೆ ಭಾರತೀದೇವಿಯನ್ನು ವಾದದಲ್ಲಿ ಗೆದ್ದು ತಮ್ಮ ಸಂಕಲ್ಪವನ್ನು ನೆರವೇರಿಸಿಕೊಂಡರು.

## ದಕ್ಷಿಣದೇಶ ಸಂಚಾರ

ಈ ರೀತಿಯಲ್ಲಿ ಮಂಡನಮಿಶ್ರರನ್ನೂ ಇನ್ನೂ ಅನೇಕರನ್ನೂ ತಮ್ಮ ಅನುಯಾಯಿಗಳನ್ನಾಗಿ ಮಾಡಿಕೊಂಡ ಆಚಾರ್ಯರು ಮಹಾರಾಷ್ಟ್ರಕ್ಕೆ ಬಂದು ತಮ್ಮ ಗ್ರಂಥಗಳನ್ನು ಪ್ರಸಾರಮಾಡಿ ದಕ್ಷಿಣಕ್ಕೆ ಹೊರಟು ಶ್ರೀಶೈಲ ಪ್ರಾಂತಕ್ಕೆ ಬಂದಾಗ ಒಂದು ಬಗೆಯ ಶಿವಾರಾಧಕರನ್ನು ಸಂಧಿಸಿದರು. ಅವರು “ ಶ್ವಭ್ಯಃಶ್ವಪತಿಭ್ಯಶ್ಚ ” ಎಂಬ ವಾಕ್ಯವನ್ನು ಹಿಡಿದುಕೊಂಡು ನಾಯಿಯ ಮೇಲೆ ‘ ಮಲ್ಲಾರಿ ’ ಎಂಬ ಶಿವನನ್ನು ಕೂಡಿಸಿ ಪೂಜೆ ಮಾಡುತ್ತಿದ್ದರು. ಆಚಾರ್ಯರು ಅಶುಚಿಯಾದ ನಾಯಿನ್ನು ಬಿಟ್ಟು ಶಿವೋಪಾಸನೆಯನ್ನು ಮಾಡತಕ್ಕದ್ದೆಂದು ಅವರನ್ನು ಸರಿಯಾದ ದಾರಿಗೆ ಹಚ್ಚಿದರು. ಅಲ್ಲಿಯೇ ಭೈರವನ

ಪೂಜೆಯನ್ನು ಮಾಡುವ ಕಾಪಾಲಿಕರೆಂಬವರ ಪ್ರಾಬಲ್ಯವಿತ್ತು. ಅವರು ಬ್ರಾಹ್ಮಣರ ತಲೆಯನ್ನು ಬಲೀಕೊಡುತ್ತಿದ್ದರು. ಆಚಾರ್ಯರು ಆ ಪ್ರಾಂತಕ್ಕೆ ಬಂದಾಗ ಒಬ್ಬ ಕಪಾಲಿಯು ಬಂದು "ಆಚಾರ್ಯರೇ ದೇಹವೇ ನೀವಲ್ಲವಷ್ಟೇ? ನಿಮ್ಮ ತಲೆಯನ್ನು ನಾವು ತೆಗೆದುಕೊಳ್ಳುವ ದಕ್ಕೆ ಒಪ್ಪುತ್ತೀರೋ?" ಎನಲು ಆಚಾರ್ಯರು ಆಗಬಹುದೆಂದರು. ಆ ಕಪಾಲಿಯು ಆಯುಧದೊಡನೆ ತನ್ನ ಕೈಯನ್ನೆತ್ತುವದರೊಳಗೇ ಪದ್ಮಪಾದರು ನೃಸಿಂಹಸ್ವಾಮಿಯ ಆವೇಶವುಂಟಾದವರಂತೆ ಬಂದು ಕಪಾಲಿಯ ಆಯುಧವನ್ನೇ ಕಿತ್ತುಕೊಂಡು ಕಪಾಲಿಯನ್ನೇ ಬಲೀ ಕೊಟ್ಟರು. ಆಮೇಲೆ ಆಚಾರ್ಯರು ಆ ಕಪಾಲಿಗಳಿಗೆಲ್ಲಾ ಬುದ್ಧಿವಾದ ವನ್ನು ಹೇಳಿ ಅವರು ತಾಮಸವೃತ್ತಿಯನ್ನು ಬಿಟ್ಟು ಸಾತ್ವಿಕವೃತ್ತಿ ಯನ್ನವಲಂಬಿಸುವಂತೆ ಮಾಡಿದರು.

## ಶೃಂಗೇರೀ ಮಠಸ್ಥಾಪನೆ

ಅಲ್ಲಿಂದ ಆಚಾರ್ಯರು ಶೃಂಗೇರಿಗೆ ಬಂದು ಅಲ್ಲಿ ಒಂದು ಮಠ ವನ್ನು ಸ್ಥಾಪನೆಮಾಡಿ ಅಲ್ಲಿಗೆ ಮಂಡನಮಿಶ್ರರನ್ನು ಸುರೇಶ್ವರಾಚಾರ್ಯ ರೆಂಬ ಹೆಸರಿನಿಂದ ಪಟ್ಟಗಟ್ಟಿದರು. ಮತ್ತು ಅಲ್ಲಿಯೇ ಒಂದು ದೇವಾ ಲಯವನ್ನು ಕಟ್ಟಿಸಿ ಶಾರದಾಪ್ರತಿಷ್ಠೆಯನ್ನು ಮಾಡಿ ಅಲ್ಲಿಯೂ ಅನೇಕ ಗ್ರಂಥಗಳನ್ನು ರಚಿಸಿ ಪಾಠಪ್ರವಚನಗಳನ್ನೂ ನಡೆಸಿದರು. ಇಲ್ಲಿದ್ದಾಗ ಆಚಾರ್ಯರು ತಮ್ಮ ಭಾಷ್ಯದ ಮೇಲೆ ವಾರ್ತಿಕವನ್ನು ಬರೆಯಬೇಕೆಂದು ಸುರೇಶ್ವರರಿಗೆ ಹೇಳಿದರು ಸುರೇಶ್ವರರು ಕರ್ಮ ಮಾರ್ಗದ ವಾಸನೆಯವರಾದ್ದರಿಂದ ಆ ಕೆಲಸವನ್ನು ಪದ್ಮಪಾದರಿಗೆ ಕೊಡುವದುತ್ತಮವೆಂದು ಶಿಷ್ಯರೆಲ್ಲರೂ ವಿಜ್ಞಾಪಿಸಿಕೊಂಡರು. ತಮ್ಮ ಭಾಷ್ಯದ ಮೇಲಿನ ವಾರ್ತಿಕವನ್ನು ಬರೆಯುವದಕ್ಕೆ ಕರ್ಮಮಾರ್ಗಪಲ್ಲಿ ನುರಿತ ಸುರೇಶ್ವರರೊಬ್ಬರೇ ತಕ್ಕವರೆಂದು ಆಚಾರ್ಯರು ಅವರ ಗುಣ ವನ್ನು ಪ್ರಶಂಸೆ ಮಾಡಿದ್ದಲ್ಲದೆ ಅವರ ಯೋಗ್ಯತಾವಿಶೇಷವನ್ನು ಇತರ ಶಿಷ್ಯರಿಗೆ ತಿಳಿಸಬೇಕೆಂದು ಸುರೇಶ್ವರರನ್ನು ಕರೆದು ಒಂದು ಸ್ವತಂತ್ರವಾದ ವೇದಾಂತ ಗ್ರಂಥವನ್ನು ಬರೆಯಹೇಳಿದರು. ಸುರೇಶ್ವರರು ಆಚಾ ರ್ಯರ ಆಜ್ಞೆಯನ್ನು ತಲೆಯಮೇಲೆ ಹೊತ್ತು "ನೈಷ್ಕರ್ಮ್ಯಸಿದ್ಧಿ" ಎಂಬ

ಗ್ರಂಥವನ್ನು ಬರೆದಿಡುತ್ತಲೇ ಅದನ್ನು ನೋಡಿ ಉಳಿದ ಶಿಷ್ಯರೆಲ್ಲಾ ಅವರ ಪ್ರತಿಭಾವಿಶೇಷಕ್ಕೆ ತಲೆದೂಗಿದರು. ಆಮೇಲೆ ಆಚಾರ್ಯರ ಅಪ್ಪಣೆಯಂತೆ ಸುರೇಶ್ವರಾಚಾರ್ಯರು ಬೃಹದಾರಣ್ಯಕೋಪನಿಷತ್ತಿನ ಮತ್ತು ತೈತ್ತಿರೇಯೋಪನಿಷತ್ತಿನ ಭಾಷ್ಯದ ಮೇಲೆ ವಾರ್ತಿಕಗಳನ್ನು ಬರೆದರು. ಅವು ಆಚಾರ್ಯರ ಭಾಷ್ಯವೆಂಬ ಸುವರ್ಣಪುಷ್ಪಕ್ಕೆ ಪರಿಮಳವನ್ನಿಟ್ಟಂತೆ ಈಗಲೂ ಜಿಜ್ಞಾಸುಗಳಿಗೆ ಅದ್ವೈತಾರ್ಥವನ್ನು ಬಹು ರುಚಿಕರವಾಗಿ ಮಾಡುವ ಸಾಧನಗಳಾಗಿರುವವು.

## ತಾಯಿಯ ಉತ್ತರಕ್ರಿಯೆ

ಇಷ್ಟರಲ್ಲಿ ತಾಯಿಯ ಕಡೆಯ ಸುದ್ದಿ ತಿಳಿದೋ ಹೇಗೋ ಆಚಾರ್ಯರು ಶಿಷ್ಯರನ್ನೆಲ್ಲಾ ಶೃಂಗೇರಿಯಲ್ಲಿ ಬಿಟ್ಟು ಕಾಲಟಿಗೆ ಹೋದರು. ಆಗ ಅವರ ತಾಯಿಯಾಗಲೇ ಮರಣೋನ್ಮುಖಳಾಗಿದ್ದಳು. ಆಚಾರ್ಯರು ಬಂದು ದರ್ಶನವನ್ನು ಕೊಡುತ್ತಲೇ ಆಕೆಗೆ ಕಳೆದುಕೊಂಡ ನಿಧಿಯನ್ನು ಪಡೆದುಕೊಂಡಂತೆ ಸಂತೋಷವಾಗಿ ತನ್ನ ಸದ್ಗತಿಯ ಮಾರ್ಗವನ್ನು ಕೇಳಿಕೊಂಡಳು. ಆಚಾರ್ಯರು ಆಕೆಗೆ ತಿಳಿಯುವಂತೆ ತಿಳಿಮಾತಿನಲ್ಲಿ ಜ್ಞಾನೋಪದೇಶವನ್ನು ಮಾಡಿ ಮಹಾವಿಷ್ಣುವನ್ನು ಪ್ರಾರ್ಥನೆ ಮಾಡಿಕೊಂಡು ಆಕೆಯ ಆತ್ಮಕ್ಕೆ ಶಾಂತಿಯನ್ನು ತಂದುಕೊಟ್ಟರು. ಆಚಾರ್ಯರ ಅನುಗ್ರಹದಿಂದ ಆಕೆ ಮಾನುಷದೇಹವನ್ನು ಬಿಟ್ಟು ಸದ್ಗತಿಯನ್ನು ಪಡೆದಳು. ಇತ್ತ ಸನ್ಯಾಸಿಯಾದ ಆಚಾರ್ಯರು ಉತ್ತರಕ್ರಿಯೆಯಲ್ಲಿ ಕೈಹಾಕಲಿಕ್ಕೆ ಬಂದರೆಂದು ಬಂಧುವರ್ಗದವರೆಲ್ಲರೂ ಆಚಾರ್ಯರನ್ನು ದೂಷಿಸಿ ತಾವು ತಾವು ಬೇರೆಯಾದರು. ಮಾತೃಭಕ್ತಿಪರಾಯಣರಾದ ಆಚಾರ್ಯರು ಆ ಜನರನ್ನು ಲಕ್ಷ್ಯಕ್ಕೆ ತಂದುಕೊಳ್ಳದೆ ಹಿತ್ತಲಲ್ಲಿಯೇ ಒಂದು ಮೂಲೆಯಲ್ಲಿ ಚಿತೆಯನ್ನು ಮಾಡಿ ಆಕೆಯನ್ನು ದಹನಮಾಡಿಬಿಟ್ಟರು. ಬಾಳೆಯ ಕಂಬಗಳಿಂದ ಚಿತೆಯನ್ನು ಮಾಡಿ ಅದಕ್ಕೆ ಮಂತ್ರೋದಕದಿಂದ ಅಗ್ನಿಪ್ರತಿಷ್ಠೆಯನ್ನು ಮಾಡಿದರೆಂದೂ ಹೇಳುವರು. ಈಚೆಗೆ ಆಚಾರ್ಯರ ಮಹಿಮೆಯನ್ನು ತಿಳಿದದ್ದರಿಂದಲೋ ಅಥವಾ ಆಚಾರ್ಯರ ಪಾಂಡಿತ್ಯ ಪ್ರಭೆಯಿಂದ ವಶೀಕೃತನಾದ ರಾಜನ ಶಾಸನದಿಂದಲೋ ಈಗಲೂ ಆ ಗುಂಪಿನವರೆಲ್ಲಾ ತಮ್ಮ ತಮ್ಮ ಮನೆಯ ಹಿತ್ತಲಲ್ಲಿಯೇ ಒಂದು ಕಡೆ ಸ್ಮಶಾನವನ್ನು ಮಾಡಿರುವರು.

## ಪೂರ್ವತೀರ ಸಂಚಾರ

ಆಚಾರ್ಯರು ಅಲ್ಲಿಂದ ಶೃಂಗೇರಿಗೆ ಬಂದು ಹಿಂದುಸ್ತಾನದ ಪೂರ್ವತೀರವನ್ನು ಹಿಡಿದು ಪ್ರಯಾಣಮಾಡಿದರು. ಅವರು ದಾರಿಯಲ್ಲಿರುವ ತೀರ್ಥಕ್ಷೇತ್ರಗಳನ್ನೆಲ್ಲಾ ಹೊಕ್ಕು ರಾಜರನ್ನೂ ಪ್ರಜೆಗಳನ್ನೂ ಶಿಷ್ಯರನ್ನಾಗಿ ಮಾಡಿಕೊಂಡು ಪುರಿ ಎಂಬ ಸ್ಥಲದಲ್ಲಿ ಗೋವರ್ಧನ ಎಂಬ ಹೆಸರಿನ ಮಠವನ್ನು ಸ್ಥಾಪಿಸಿದರು. ಆಮೇಲೆ ಆವರು ಕಂಚೀ ಕಾಮಾಕ್ಷಿಯ ಮತ್ತು ಮಧುರೆಯ ಮೀನಾಕ್ಷಿಯ ದೇವಸ್ಥಾನಗಳಲ್ಲಿದ್ದ ಕೆಲವು ನಿಷಿದ್ಧಾಚಾರಗಳನ್ನು ನಿಲ್ಲಿಸಿ ಶುದ್ಧಸಂಪ್ರದಾಯವನ್ನು ನೆಲೆಗೊಳಿಸಿದರು. ಈ ಸಂಚಾರದಲ್ಲಿ ಚೋಳರಾಜನೂ ಪಾಂಡ್ಯರಾಜನೂ ಆಚಾರ್ಯರ ಶಿಷ್ಯರಾಗಿ ಆಚಾರ್ಯರ ಉದ್ದೇಶವನ್ನು ಕೈಕಟ್ಟಿಕೊಂಡು ಸಾಗಿಸಿದರು. ಈ ಪ್ರಾಂತದಲ್ಲಿದ್ದ ಗಾಣಪತ್ಯರ ಮತ್ತು ಕಾಪಾಲಿಕರ ದುರಭಿಪ್ರಾಯಗಳೂ ದೂರವಾದವು.

## ಉತ್ತರದೇಶ ಸಂಚಾರ

ಆಚಾರ್ಯರು ಮತ್ತೊಮ್ಮೆ ಉತ್ತರದೇಶದ ಸಂಚಾರವನ್ನು ಕೈಗೊಂಡು ಉಜ್ಜಯಿನಿಗೆ ಬಂದರು. ಅಲ್ಲಿ ಭೈರವಾರಾಧಕರು ಪ್ರಬಲರಾಗಿದ್ದರು. ಪ್ರಾಣಿವಧೆಯಿಂದ ಶಿವನು ತೃಪ್ತನಾಗುವನೆಂದು ನಂಬಿ ನಡೆಸುತ್ತಿದ್ದ ಇವರಿಗೆಲ್ಲಾ ಕ್ರಕಚನೆಂಬವನು ಮುಖಂಡನಾಗಿದ್ದನು. ಶಾಂತರೀತಿಯಿಂದ ಹೇಳುವ ಸದುಪದೇಶಕ್ಕೆ ಕಿವಿಗೊಡದವರನ್ನು ರಾಜಾಶ್ರಯದಿಂದ ನಿಗ್ರಹಿಸುತ್ತಿದ್ದ ಆಚಾರ್ಯರು ಇಲ್ಲಿ ಕ್ರಕಚನ ಆಟವನ್ನೂ ನಿಲ್ಲಿಸಿ ದ್ವಾರಕಿಯಲ್ಲಿ ತಮ್ಮದೊಂದು ಮಠವನ್ನು ಸ್ಥಾಪಿಸಿ ಆಮೇಲೆ ಕಾಶ್ಮೀರಕ್ಕೆ ಹೋಗಿ ಅಲ್ಲಿ ತಮ್ಮ ಮತವನ್ನು ವಿದ್ಯುದ್ವೇಗದಿಂದ ಹಬ್ಬಿಸಿದರು. ಕೊನೆಗೆ ಆಚಾರ್ಯರು ಆಸಾಮು ಎಂದಿರುವ ಕಾಮರೂಪ ದೇಶಕ್ಕೆ ಹೋಗಿ ಗೌಹತಿಯಲ್ಲಿ ಶಾಕ್ತಭಾಷ್ಯಕಾರನಾದ ಅಭಿನವಗುಪ್ತನೆಂಬವನನ್ನು ಚೆನ್ನಾಗಿ ತಿದ್ದಿದರು. ಈ ರೀತಿಯಾಗಿ ಅವರು ಇದುವರಿಗೆ ಶೈವ, ವೈಷ್ಣವ, ಶಾಕ್ತೇಯ, ಸೌರ, ಗಾಣಪತ್ಯ ಮತ್ತು ಕಾಪಾಲಿ ಎಂಬ ಆರು ಗುಂಪುಗಳಲ್ಲಿಯೂ ದೋಷಾಂಶವನ್ನು ತೆಗೆದುಹಾಕಿ ಗುಣಾಂಶವನ್ನು ಗ್ರಹಣಮಾಡಿ ಅವುಗಳಿಗೆ ಸುಸ್ಥಿತಿಯನ್ನು ಕೊಟ್ಟದ್ದರಿಂದ ಅವರಿಗೆ ಷಣ್ಮತಸ್ಥಾಪನಾಚಾರ್ಯರೆಂದು

ಎಲ್ಲೆಲ್ಲಿಯೂ ಖ್ಯಾತಿಯುಂಟಾಯಿತು. ಆಚಾರ್ಯರು ಸ್ಥಾಪಿಸಿದ ಮಠಗಳ ಮೂಲಕ ಧರ್ಮಪ್ರಸಾರಕರು ಎಲ್ಲಾ ಕಡೆಯಲ್ಲಿಯೂ ತಿರುಗಿ ಆ ಖ್ಯಾತಿಯನ್ನು ಮುಂದುವರಿಸಿದರು.

## ಮಹಾಸಮಾಧಿ

ಆಚಾರ್ಯರೆದುರಿಗೆ ಉಸಿರೆತ್ತಲಾರದೆ ಒಳಗೇ ಅಭಿನವಗುಪ್ತನು ಆಚಾರ್ಯರನ್ನೇ ಗುಪ್ತರನ್ನಾಗಿ ಮಾಡಬೇಕೆಂದು ಅವರ ಮೇಲೆ ತನ್ನ ದುರ್ವಿದ್ಯೆಯನ್ನು ಪ್ರಯೋಗಮಾಡಿ ಅವರಿಗೆ ಭಗಂದರ ರೋಗವು ಕಾಣಿಸಿಕೊಳ್ಳುವಂತೆ ಮಾಡಿದನು. ಇದರ ಮೇಲೆ ಯಾವ ಚಿಕಿತ್ಸೆಯೂ ನಾಟಲಿಲ್ಲ. ಎಷ್ಟೋ ದಿನದ ಮೇಲೆ ಪದ್ಮಪಾದರು ಇದರ ರಹಸ್ಯವನ್ನು ತಿಳಿದು ಪ್ರತಿಕ್ರಿಯೆಯನ್ನು ಮಾಡಿದರು. ಅದರಿಂದ ಆ ರೋಗವು ಪರಿಹಾರವಾಯಿತು. ಆಮೇಲೆ ಆಚಾರ್ಯರು ಬದರಿಗೆ ಹೋಗಿ ಅಲ್ಲಿ ಶ್ರೀಮನ್ನಾರಾಯಣನನ್ನು ಪ್ರತಿಷ್ಠೆ ಮಾಡಿ ಅದರ ಸೇವೆಗಾಗಿ ಒಂದು ಮಠವನ್ನು ಸ್ಥಾಪಿಸಿ ತ್ರೋಟಕಾಚಾರ್ಯರನ್ನು ಅಲ್ಲಿಟ್ಟು ಅಲ್ಲಿಂದ ಕೇದಾರನಾಥಕ್ಕೆ ಹೋಗಿ ಅಲ್ಲಿ ಮಹಾಸಮಾಧಿಯಲ್ಲಿ ಮಗ್ನರಾದರು. ಧರ್ಮಪಂಥಗಳು ಈ ಲೋಕದಲ್ಲಿ ಲೆಕ್ಕವಿಲ್ಲದಷ್ಟಿದ್ದರೂ ಈಗ ಶಂಕರಾಚಾರ್ಯರ ಪಂಥಕ್ಕೆ ಇರುವಷ್ಟು ಅನುಯಾಯಿಗಳು ಬೇರೆ ಯಾವ ಪಂಥಕ್ಕೂ ಇಲ್ಲ. ಅವರ ಸ್ಥೂಲಶರೀರವು ಹುಟ್ಟಿದ್ದು ಎಲ್ಲಿಯೋ ಒಂದು ಮೂಲೆಯಲ್ಲಿರುವ ಹಳ್ಳಿಯಾದರೂ ಅವರ ಕೀರ್ತಿಶರೀರವು ಅಖಂಡ ಭೂಮಂಡಲದಲ್ಲೆಲ್ಲಾ ವ್ಯಾಪಿಸಿಕೊಂಡಿರುವದರಿಂದ ಶ್ರೀಶಂಕರಾಚಾರ್ಯರ ಗುರುತ್ವವನ್ನು ಗೌರವಿಸುವ ನಾಗರಿಕರು ಇಲ್ಲದ ದೇಶವೇ ಈ ಪೃಥ್ವಿಯಲ್ಲಿಲ್ಲವೆಂದರೂ ಅತ್ಯುಕ್ತಿಯಾಗಲಾರದು. ಶ್ರೀ ಶಂಕರಾಚಾರ್ಯರು ತಮ್ಮ ಸ್ಥೂಲದೇಹದಿಂದ ಅಂತರ್ಧಾನರಾದರೂ ತಮ್ಮ ಗ್ರಂಥದಲ್ಲಿ ತಮ್ಮ ಜೀವಕಲೆಯನ್ನೆಲ್ಲಾ ಪ್ರತಿಷ್ಠೆಮಾಡಿ ಹೋಗಿರುವರು. ಅವುಗಳಲ್ಲಿರುವ ಯುಕ್ತಿಕೌಶಲ್ಯಗಳು ಈಗಲೂ ಕ್ಷಣಕ್ಷಣಕ್ಕೂ ಅಪರಿಚಿತರಾದ ಜನಾಂಗದವರನ್ನೂ ಕೂಡ ತಲೆದೂಗುವಂತೆ ಮಾಡುತ್ತಿರುವವು. ಬೇರೆ ಬೇರೆ ದೇಶಗಳಿಗೆ ಬೇರೆ ಬೇರೆ ಮಹಾಪುರುಷರು ತಮ್ಮ ತಮ್ಮ ಪ್ರತಿಭೆಯಿಂದ ತಂದುಕೊಟ್ಟಿರುವ ಪ್ರಾಶಸ್ತ್ಯವು ಕೆಲ ಕೆಲವು ಕಾಲ ಮಾತ್ರ ಇರುವಂಥದ್ದಾಗಿದ್ದರೂ ನಮ್ಮ ಆಚಾರ್ಯರು

ಸಮಸ್ತ ಧರ್ಮಕ್ಕೂ ವೇದಾಂತದ ಆಧಾರವನ್ನು ಕೊಟ್ಟು ತಮ್ಮೊಳಗೆ ಹಾಕಿಕೊಂಡ ಪ್ರತಿಭೆಯಿಂದ ತಮ್ಮ ಜನ್ಮಭೂಮಿಯಾದ ಹಿಂದುಸಾನಕ್ಕೆ ತಂದುಕೊಟ್ಟಿದುವ ಪ್ರಾಶಸ್ತ್ಯವು ಆಚಂದ್ರಾರ್ಕವಾಗಿ ಅಚ್ಚಳಿಯದೆ ಇದುವಂಥದ್ದಾಗಿರುವದು ಆದ್ದರಿಂದ ಭರತಖಂಡವನ್ನು ಮಾತ್ರ ಬೆಳಗುವ ಅನೇಕ ಜೀವಜ್ಯೋತಿಗಳ ನಡುವೆ ನಮ್ಮ ಆಚಾರ್ಯರು ಅಖಂಡ ಭೂಮಂಡಲವನ್ನೇ ಬೆಳಗುವ ದೇದಿಪ್ಯಮಾನವಾದ ನಂದಾದೀಪದಂತೆ ವಿರಾಜಿಸುತ್ತಿರುವರು.



# (ಎರಡನೇ) ಪುಲಿಕೇಶಿ

## ಪೀಠಿಕೆ

ಈಗ ದಿಕ್ಕಿಗೊಂದೊಂದಾಗಿ ಸಿಡಿದು ಬಿದ್ದು ಚೂರುಚೂರಾಗಿರುವ ಕರ್ನಾಟಕವು ಒಮ್ಮೆ ಹಿಂದುಸ್ತಾನವನ್ನೆಲ್ಲಾ ತನ್ನ ಪ್ರತಿಭೆಯಿಂದ ಪ್ರಕಾಶಗೊಳಿಸಿತ್ತೆಂದು ಹೇಳಿದರೆ ನಿಜವಾಗಿ ಮೂಗಿನ ಮೇಲೆ ಬೆರಳಿಟ್ಟು ಕೊಳ್ಳುವ ಹಾಗಿರುವದು. ಏಳನೇ ಶತಮಾನದಲ್ಲಿ ಕರ್ನಾಟಕವನ್ನು ಅದರ ಪರಮಾವಧಿಯ ಉನ್ನತ ಸ್ಥಿತಿಗೇರಿಸಿದ ಶ್ಲಾಘನೆಯು ಚಾಲುಕ್ಯರ ಎರಡನೇ ಪುಲಿಕೇಶಿಗೆ ಮೀಸಲಾಗಿರುವದು. ಭರತಖಂಡದಲ್ಲಿ ಇದುವ ರೆಗೆ ಬೇರೆ ಯಾವ ಜನಪದವೂ ದೊರಕಿಸಿಕೊಳ್ಳಲಾರದಂಥ ಪ್ರತಿಷ್ಠೆ ಯನ್ನು ನಮ್ಮ ಕರ್ನಾಟಕ ಜನಪದದ ಮುಡಿಲಿಗೆ ಹಾಕಿದಂಥ ಆ ಮಹ ನೀಯನಾದ ಎರಡನೇ ಪುಲಿಕೇಶಿಯು ಸಾದ್ಯಂತವಾದ ಇತಿಹಾಸವು ನಮ್ಮ ದುರ್ದೈವದಿಂದ ಎಲ್ಲಿಯೂ ದೊರೆತಿಲ್ಲವಾದರೂ ಪ್ರಸಿದ್ಧ ಜೈನ ಕವಿಯಾದ ರವಿಕೀರ್ತಿಯು ಐಹೊಳೆಯಲ್ಲಿ ಬರೆದಿಟ್ಟಿರುವ ಶಿಲಾಲೇಖ ಮೊದಲಾದವುಗಳಿಂದ ಕೆಲವು ಮಟ್ಟಿಗೆ ಲಭ್ಯವಾಗಿರುವದನ್ನು ಇಲ್ಲಿ ಸಂಗ್ರಹಿಸಿ ಹೇಳಲಾಗುವದು.

## ವಂಶಪ್ರಶಸ್ತಿ

ಇವರ ಮನೆತನಕ್ಕೆ ಚಲುಕ್ಯ ಅಥವಾ ಚಾಲುಕ್ಯ ಎಂದು ಹೆಸರು. ಇವರ ಮೂಲಸ್ಥಾನವು ಅಯೋಧ್ಯೆ. ಇವರು ಚಂದ್ರವಂಶದವರೆಂದೂ ಮಾನವ್ಯಗೋತ್ರದವರೆಂದೂ ಹಾರೀತಪುತ್ರರೆಂಬ ಬಿರುದುಳ್ಳವರೆಂದೂ ಶಿಲಾಲಿಪಿಗಳು ಹೇಳುತ್ತಿವೆ. ಭರತಖಂಡದಲ್ಲಿ ಧರ್ಮಾಭಿಮಾನವೂ ದೇಶಾಭಿಮಾನವೂ ಕೂಡಿರುವ ಒಂದುಸಂತತಿಯಾಗಬೇಕೆಂದು ಬಯಸಿ ಇಂದ್ರನು ಬಂದು ಬೇಡಿಕೊಂಡಾಗ ಅರ್ಘ್ಯವನ್ನು ಕೊಡುತ್ತಿದ್ದ ಬ್ರಹ್ಮನ ಬೊಗಸೆಯಿಂದ ಹುಟ್ಟಿದ ಒಬ್ಬ ವೀರನು ಈ ಮನೆತನದ ಮೂಲಪುರುಷ ನೆಂದು ಬಿಲ್ಹಣ ಕವಿಯು ತನ್ನ ವಿಕ್ರಮಾಂಕದೇವ ಚರಿತ್ರೆಯಲ್ಲಿ

ಉಲ್ಲೇಖಿಸಿದ್ದಾನೆ. ಈ ಚಾಲುಕ್ಯರು ವಿಶೇಷವಾಗಿ ವಿಷ್ಣುಭಕ್ತರು. ಈ ಮನೆತನದವರಲ್ಲಿ ಮೊದಲು ನರ್ಮದಾ ನದಿಯನ್ನು ದಾಟಿ ದಕ್ಷಿಣಕ್ಕೆ ಬಂದವನ ಹೆಸರು ಜಯಸಿಂಹ. ಆದ್ದರಿಂದ ಕರ್ನಾಟಕದ ಚಾಲುಕ್ಯರು ಜಯಸಿಂಹನನ್ನು ತಮ್ಮ ಮೂಲಪುರುಷನೆಂದು ಭಾವಿಸುತ್ತಾರೆ. ಜಯಸಿಂಹನ ಮರಿಮಗನೇ ಈ ನಮ್ಮ ಕಥಾನಾಯಕನಾದ ಎರಡನೇ ಪುಲಿಕೇಶಿಯು.

## ಸಿಂಹಾಸನಾರೋಹಣ

ಈ ಪುಲಿಕೇಶಿಯ ತಂದೆಯ ಹೆಸರು ಕೀರ್ತಿವರ್ಮ. ಈ ಪುಲಿಕೇಶಿಯೂ ಇವನ ತಮ್ಮಂದಿರಾದ ಕುಬ್ಜವಿಷ್ಣುವರ್ಧನ ಜಯಸಿಂಹರೂ ಚಿಕ್ಕವರಾಗಿರುವಾಗಲೇ ಮಕ್ಕಳ ಭಾವಿಕಲ್ಯಾಣವನ್ನು ನೋಡುವ ಸುಯೋಗವಿಲ್ಲದ ಕೀರ್ತಿವರ್ಮನು ದಿವಂಗತನಾದನು. ಆಗ ಕೀರ್ತಿವರ್ಮನ ತಮ್ಮನಾದ ಮಂಗಲೇಶನೆಂಬುವನು ರಾಜ್ಯಸೂತ್ರವನ್ನು ತಾನು ನಡೆಸುತ್ತ ಮೆಲ್ಲಗೆ ಅದನ್ನು ತನ್ನ ಮಕ್ಕಳ ಕೈಗೆ ದಾಟಿಸುವ ಎತ್ತುಗಡೆಯನ್ನು ಮಾಡುತ್ತಿದ್ದನು. ಇದನ್ನು ಕಂಡು ಎರಡನೇ ಪುಲಿಕೇಶಿಯು ಪ್ರಾಯಪ್ರಬುದ್ಧನಾಗುತ್ತಲೇ ತನ್ನ ಕಕ್ಕನನ್ನು ಗೌರವದಿಂದ ಹಿಂದಕ್ಕೆ ಕೂಡಿಸಿ ಕ್ರಿ. ೬೧೦ ರಲ್ಲಿ ತಾನು ಸಿಂಹಾಸನಾರೋಹಣ ಮಾಡಿದನು. ಆಗ ಚಾಲುಕ್ಯರ ರಾಜಧಾನಿಯು ಬದಾಮಿಯಾಗಿತ್ತು. ಈಗ ಅದು ವಿಜಾಪುರ ಜಿಲ್ಹೆಯಲ್ಲಿದೆ. ಈ ಬದಾಮಿಯು ಈ ಪುಲಿಕೇಶಿಯ ತಾತನಾದ ಒಂದನೇ ಪುಲಿಕೇಶಿಯ ಕಾಲಕ್ಕೆ ಅವನ ರಾಜಧಾನಿಯಾಯಿತು. ಆ ಒಂದನೇ ಪುಲಿಕೇಶಿಯು ಅದನ್ನು ತನ್ನ ವೀರಶ್ರೀಯ ವಿಹಾರಭೂಮಿಯನ್ನಾಗಿ ಮಾಡಿ ಅದರ ಜೊತೆಗೆ ಅಶ್ವಮೇಧ ಯಾಗವನ್ನು ಕೂಡ ಪೂರೈಸಿ ತನ್ನ ಕಾಲದ ರಾಜಮಂಡಲಿಯಲ್ಲೆಲ್ಲಾ ಅಗ್ರತಾಂಬೂಲವನ್ನು ಪಡೆದು 'ಸತ್ಯಾಶ್ರಯ ಪುಲಿಕೇಶಿವಲ್ಲಭ ಮಹಾರಾಜ'ನೆಂದು ಹೊಗಳಿಸಿಕೊಂಡನು. ಆ ಭದ್ರಪೀಠದ ಮೇಲೆ ಈಗ ಎರಡನೇ ಪುಲಿಕೇಶಿಯು ವಿರಾಜಿತನಾದನು.

## ವಿಜಯಯಾತ್ರೆ

ಈ ಪುಲಿಕೇಶಿಯು ಪಟ್ಟವನ್ನು ಕಟ್ಟಿಕೊಳ್ಳುತ್ತಲೇ ಆಗ ಅಧೀನ ರಾಜರಾಗಿದ್ದವರೆಲ್ಲಾ ಈ ಸಂಧಿಕಾಲದಲ್ಲಿ ಅಧೀನತ್ವದ ಸಂಕೋಲೆ

ಯನ್ನು ಮುರಿದು ತಮ್ಮ ಸ್ವಾತಂತ್ರ್ಯವನ್ನು ಸಾಧಿಸಿಕೊಂಡು ಬಿಡ ಬೇಕೆಂದು ಅಲ್ಲಲ್ಲಿ ಗದ್ದಲವನ್ನೆಬ್ಬಿಸಿದರು. ಅವೆಲ್ಲಾ ಪುಲಿಕೇಶಿಯ ಮುಂದೆ ಸೂರ್ಯನ ಮುಂದಿನ ಮಿಣುಕು ಹುಳುಗಳಂತೆ ಆಗಿಹೋದವು. ಪುಲಿಕೇಶಿಯ ಬಾಹುಗಳಲ್ಲಿ ಪ್ರತಾಪವು ಉಕ್ಕೇರುತ್ತಿದ್ದದರಿಂದ ಅವನು ಆ ತನ್ನ ಪಿತ್ರಾರ್ಜಿತ ರಾಜ್ಯವೇ ಸಾಕೆಂದು ಕೈಗಳನ್ನು ಜೋಲು ಬಿಟ್ಟುಕೊಂಡು ಕೂತುಕೊಳ್ಳದೆ ಕರ್ನಾಟಕಪುತ್ರರ ಸತ್ವಸಾರ ವನ್ನೊಮ್ಮೆ ಭರತಭೂಮಾತೆಯ ಮುಂದೆ ಪ್ರದರ್ಶನ ಮಾಡಿ ತೋರಿಸ ಬೇಕೆಂದು ಮೈಯ್ಯುಬ್ಬಿದವನಾಗಿ ತನ್ನ ವರಾಹ ಧ್ವಜವನ್ನು ಮುಂದೆ ಹಿಡಿಸಿ ಸಿಂಹನಾದವನ್ನು ಮಾಡಿ ಸೇನೆಯನ್ನು ನಡೆಸುತ್ತಲೇ ಅವನ ಪೌರುಷದ ತಿರುಳನ್ನು ನೋಡಿ ಆಗಿನ ಸುಪ್ರಸಿದ್ಧ ಯೋಧರಾದ ಅಪ್ಪಾ ನಾಯಿಕನೂ ಗೋವಿಂದನೂ ಮೊದಲು ಶರಣು ಬಂದರು. ಅಲ್ಲಿಂದ ಮುಂದೆ ಸಾಗಿದ ಇವನ ಪೌರುಷದ ಉರುಬೆಗೆ ಬನವಾಸಿಯ ಕದಂಬರು ಕೈಸೋತರು; ಚೇನದೇಶದ ಗಂಗರು ಅಂಗಲಾಚಬೇಕಾ ಯಿತು; ಮಲಬಾರಿನ ಅಲುಪರು ಯುದ್ಧವನ್ನು ಕೂಡ ಮಾಡದೆ ಕೆಲಕ್ಕೆ ಸರಿದರು. ಕೊಂಕಣದ ಮೇಲೆ ನುಗ್ಗಿದಾಗ ಇವನ ಕಡೆಯ ನೂರಾರು ಹಡಗುಪಡೆಯನ್ನು ನೋಡಿ ಅಲ್ಲಿಯ ಮೌರ್ಯರು ಹತ ವೀರ್ಯರಾದರು. ಆಮೇಲೆ ಪುಲಿಕೇಶಿಯು ಉತ್ತರದ ಮೇಲೆ ಕಾಲು ಚಾಚಿ ಲಾಟರ ಆಟವನ್ನು ನಿಲ್ಲಿಸಿ ಮಾಳವರ ಬೇಳುವೆಯನ್ನು ಮುರಿದು ಗುರ್ಜರರನ್ನು ಜರ್ಝರ ಮಾಡಿದನು. ಹೀಗೆ ಪುಲಿಕೇಶಿಯು ಮುಂದುವರಿಯುತ್ತಿರುವದನ್ನು ಕೇಳಿ ಉತ್ತರ ಹಿಂದುಸ್ತಾನದ ಸಮ್ರಾಟನಾಗಿ ಮಹಾಪ್ರತಾಪಶಾಲಿಯಾಗಿದ್ದ ಕನೂಜಿನ ಹರ್ಷ ವರ್ಧನನು ಪುಲಿಕೇಶಿಯ ಉಬ್ಬಟೆಯನ್ನು ತಗ್ಗಿಸಬೇಕೆಂದು ಅವನ ಮೇಲೆ ತನ್ನ ಸೇನೆಯನ್ನು ಹೊರಡಿಸಿದನು. ಆಗ ಹೊರಟ ಅವನ ಸೇನೆಯಲ್ಲಿ ಬರೀ ಆನೆಗಳೇ ಅರವತ್ತು ಸಾವಿರ ಇದ್ದವು. ಹರ್ಷವರ್ಧ ನನ ಸೇನೆಯು ಬರುತ್ತಲೇ ಮೂರ್ತಿಮಂತಕ್ಷಾತ್ರತೇಜವಾಗಿದ್ದ ನಮ್ಮ ಪುಲಿಕೇಶಿಯು ಆ ಅಪಾರವಾದ ಸೇನೆಯನ್ನು ನೋಡಿ ಎದೆಗೆಡದೆ ತನ್ನ ಭುಜವಿಕ್ರಮದ ಭರವಸದಿಂದ ಅವನ ಮೇಲೆ ಹಾದು ಅವನ ಗರ್ಭನಿರ್ಭೇದವಾಗುವಂತೆ ಮಾಡಿ ಅವನನ್ನು ಹಿಮ್ಮೆಟ್ಟಿಸಿದನು.

ಇದಾದ ಮೇಲೆ ಕ್ರಮವಾಗಿ ಕೋಸಲ, ಕಲಿಂಗ, ಪಲ್ಲವ, ಪಾಂಡ್ಯ, ಚೋಳ, ಕೇರಳ- ಈ ದೇಶಗಳೆಲ್ಲಾ ಅವನಿಗೆ ಲೀಲಾಮಾತ್ರದಿಂದ ಒಂದೊಂದು ಗುಕ್ಕಾದವು. ಇಂಥ ಪ್ರತಾಪವಿಶೇಷದಿಂದ-ಅದರಲ್ಲಿಯೂ ದೇವಭಾಷೆಯಾದ ಸಂಸ್ಕೃತದಲ್ಲಿ ಮಹಾಕವಿಯೆನಿಸಿಕೊಂಡ ಬಾಣನು ಯಾರನ್ನು ಅಟ್ಟಕ್ಕೇರಿಸಿ ವರ್ಣನೆ ಮಾಡಿದ್ದನೋ ಯಾರ ಛತ್ರಚ್ಛಾಯೆಯಲ್ಲಿ ಉತ್ತರ ಹಿಂದುಸ್ತಾನವೆಲ್ಲಾ ಒಟ್ಟುಗೂಡಿತ್ತೋ ಅಂಥ ಹರ್ಷವರ್ಧನನನ್ನು ಮೂಗುಹಿಡಿಸಿ ಹಿಮ್ಮೆಟ್ಟಿಸಿದಂಥ ತನ್ನ ಅಸದೃಶವಾದ ಸಾಮರ್ಥ್ಯದಿಂದ-ಈ ನಮ್ಮ ಎರಡನೇ ಪುಲಿಕೇಶಿಯು ತನ್ನ ಭಾವೀ ಸಂತತಿಗೆ "ಕಾಂಚೀಶ ಕೇರಳನರಾಧಿಪಪಾಂಡ್ಯಚೋಳ ಶ್ರೀಹರ್ಷವಜ್ರಟವಿಭೇದವಿಧಾನದಕ್ಷಂ ಕರ್ನಾಟಕಬಲಂ" ಎಂಬ ಬಿರುದನ್ನು ಅನ್ಯಾದೃಶವಾದ ಆಸ್ತಿಯಾಗಿ ಸಂಪಾದಿಸಿ ಕೊಟ್ಟು ತಾನು ಸತ್ಯಾಶ್ರಯ ಪರಮೇಶ್ವರನೆಂಬ ಬಿರುದಿನಿಂದ ಹೊಗಳಿಸಿಕೊಂಡನು.

## ರಾಜ್ಯದ ಆಡಳಿತ

ಇವನು ಮುಂಬಯಿಯ ಹತ್ತಿರದ ಪುರಿ ಎಂಬ ಸ್ಥಲವನ್ನು ಸ್ವಾಧೀನಮಾಡಿಕೊಳ್ಳುವಾಗ ಪಶ್ಚಿಮ ಸಮುದ್ರದ ಮೇಲೆ ನೂರಾರು ಹಡಗಿನ ಸೇನೆಯನ್ನು ನಡೆಸಿದ್ದನೆಂಬುದರಿಂದ ಇವನ ಕಾಲದ ನಾಗರಿಕತೆಯು ಉಚ್ಚಸ್ಥಿತಿಗೇರಿದ್ದದ್ದು ವ್ಯಕ್ತವಾಗುತ್ತದೆ. ಇವನು ಹರ್ಷವರ್ಧನನಿಗೆ ದಿಗ್ಬಂಧನವನ್ನು ಮಾಡಿ ನರ್ಮದಾ ನದಿಯ ಎರಡೂ ದಂಡೆಯ ಮೇಲೆಯೂ ದಂಡನ್ನಿಟ್ಟು ತನ್ನ ಜಯಧ್ವಜ ಧ್ವನಿಯು ನರ್ಮದೆಯಿಂದ ಸಿಂಹಲದ್ವೀಪದವರೆಗೂ ಇರುವ ಪೂರ್ವ-ಪಶ್ಚಿಮ ದಕ್ಷಿಣ ಸಮುದ್ರಗಳ ನಡುವಣ ಭೂಮಿಯಲ್ಲೆಲ್ಲಾ ಪಟಪಟಿಸುತ್ತಿರುವಂತೆ ಮಾಡಿದ್ದು ಕರ್ನಾಟಕದ ಚರಿತ್ರೆಯಲ್ಲಿ ಸುವರ್ಣಾಕ್ಷರಗಳಾಗಿವೆ. ಈ ರೀತಿಯಲ್ಲಿ ರಾಜ್ಯವಿಸ್ತಾರವನ್ನು ಮಾಡಿದ ಪುಲಿಕೇಶಿಯು ಅದರ ವ್ಯವಸ್ಥೆಗೂ ತಕ್ಕಷ್ಟು ಲಕ್ಷ್ಯವನ್ನು ಕೊಟ್ಟು ತನ್ನ ಒಬ್ಬ ತಮ್ಮನಾದ ಕುಬ್ಜವಿಷ್ಣುವರ್ಧನನನ್ನು ಗೋದಾವರೀ ಕೃಷ್ಣಾನದಿಗಳ ನಡುವಣ ವೆಂಗಿದೇಶವೆಂದಿದ್ದ ಸತಾರಾ, ಪಂಢರಪುರ- ಮೊದಲಾದ ಪ್ರಾಂತಕ್ಕೂ ಇನ್ನೊಬ್ಬ ತಮ್ಮನಾದ ಜಯಸಿಂಹನನ್ನು ನಾಸಿಕ ಪ್ರಾಂತಕ್ಕೂ ಹಿರೀ ಮಗನಾದ ಚಂದ್ರಾದಿತ್ಯನನ್ನು ಸಾವಂತವಾಡಿ ಪ್ರಾಂತಕ್ಕೂ ಮೂರನೇ

ಮಗನಾದ ಆದಿತ್ಯವರ್ಮನನ್ನು ಕೃಷ್ಣಾ-ತುಂಗಭದ್ರಾನದಿಗಳ ಸಂಗಮ ಪ್ರಾಂತಕ್ಕೂ ನಿಯಮಿಸಿದ್ದನು. ಜಯಸಿಂಹನು ತನ್ನ ನಡವಳಿಕೆಗಳಿಂದ ಜಯಾಶ್ರಯನೆಂದೂ ಧರ್ಮಾಶ್ರಯನೆಂದೂ ಹೆಸರು ಪಡೆದನು. ಹಿರಿಯ ಮಗನಾದ ಚಂದ್ರಾದಿತ್ಯನ ಹೆಂಡತಿಯಾದ ವಿಜಯ ಭಟ್ಟಾರಿಕಾದೇವಿಯು ದೇವಭಕ್ತಿಯುಕ್ತಳಾಗಿ ಅನೇಕ ದಾನಧರ್ಮಗಳನ್ನು ಮಾಡಿ ಹೆಸರುವಾಸಿಯನ್ನು ಪಡೆದಿರುವಳು. ಇವನ ಕಾಲದಲ್ಲಿ ಈ ನಮ್ಮ ಕರ್ನಾಟಕ ರಾಜ್ಯಕ್ಕೆ ಇರಾಣದ ರಾಜನಾದ ಎರಡನೇ ಖುಸರೋ ಎಂಬುವನು ಕಾಣಿಕೆಯೊಡನೆ ತನ್ನ ಕಡೆಯ ರಾಯಭಾರಿಯನ್ನು ಕಳುಹಿಸಿದ್ದನೆಂದು ಅಜಂಟಾ ಗುಹೆಯಲ್ಲಿರುವ ಚಿತ್ರದಲ್ಲಿ ಕಾಣಬರುವದು. ಇದರಲ್ಲಿ ಪುಲಿಕೇಶಿಯ ಚಿತ್ರವೂ ಇದೆ. ಆ ಚಿತ್ರವನ್ನು ಇದರಲ್ಲಿ ಕೊಟ್ಟಿರುವದಿಲ್ಲ. ಆದರೆ ನಮ್ಮ ದುರ್ದೈವದಿಂದ ಯಾರೋ ಆ ಮುಖಭಾವವನ್ನು ಭಿನ್ನಮಾಡಿರುವದು ಅತ್ಯಂತ ಶೋಚನೀಯವಾಗಿದೆ. ಹೀಗೆ ರಾಜಕೀಯ ಪರಿಸ್ಥಿತಿಯಲ್ಲಿ ಮುಗಿಲು ಮುಟ್ಟಿದ ಈ ನಮ್ಮ ಪುಲಿಕೇಶಿಯು ತನ್ನ ಸಾರ್ವಭೌಮತ್ವಸೂಚಕವಾಗಿ ಧರ್ಮಾಚರಣೆಯ ಪರಮಾವಧಿಯಾದ ಅಶ್ವಮೇಧ ಯಜ್ಞವನ್ನು ಕೂಡ ಮಾಡಿದನೆಂದು ಹೇಳುತ್ತಾರೆ.

## ಹ್ಯೂವೆನತ್ಸಾಂಗನ ಅನುಭವ

ಕ್ರಿ. ೬೪೧ ರಲ್ಲಿ ಚೀನದೇಶದ ಪ್ರಸಿದ್ಧ ಪ್ರವಾಸಿಯಾದ ಹ್ಯೂವೆನತ್ಸಾಂಗನು ಪುಲಿಕೇಶಿಯ ರಾಜ್ಯದಲ್ಲಿ ಅಡ್ಡಾಡಿ ತನ್ನ ಅನುಭವವನ್ನು ಪ್ರಕಟಮಾಡಿದ್ದಾನೆ. ಈಗಿನ ಕನ್ನಡಿಗರು ತಮ್ಮ ಈಗಿನ ಸ್ಥಿತಿಯನ್ನು ಆಗಿನ ಸ್ಥಿತಿಯೊಡನೆ ಹೋಲಿಸಿ ನೋಡಿಕೊಳ್ಳಲೆಂದು ದಿಕ್ಪ್ರದರ್ಶನಾರ್ಥವಾಗಿ ಕೆಲವು ಸಂಗತಿಗಳನ್ನು ಇಲ್ಲಿ ಸಂಗ್ರಹಿಸಿ ಕೊಡುತ್ತೇವೆ.

* "ಜನರು ನಿಷ್ಕಪಟಿಗಳೂ, ಸಜ್ಜನರೂ, ಸತ್ಯವಂತರೂ ಆಗಿರುತ್ತಾರೆ. ಇವರಿಗೆ ನಡತೆಯಲ್ಲಿ ಛಲವೂ ಅಭಿಮಾನವೂ ಹೆಚ್ಚು; ಮಾಡಿದ ಉಪಕಾರವನ್ನೆಂದಿಗೂ ಮರೆಯರು, ಅಪಕಾರ ಮಾಡಿದವ

* ಈ ವಾಕ್ಯಗಳು ಶ್ರೀಯುತ ವೆಂ. ಭೀ. ಆಲೂರವರ ಕರ್ನಾಟಕ ಗತವೈಭವದಿಂದ ಕೃತಜ್ಞತಾಪೂರ್ವಕವಾಗಿ ಆರಿಸಿಕೊಂಡವು.

ರನ್ನು ಮಾತ್ರ ಮೆಟ್ಟದೆ ಬಿಡರು. ಅಪಮಾನವನ್ನು ಪರಿಹರಿಸುವಕ್ಕಾಗಿ ತಮ್ಮ ಜೀವವನ್ನು ಲೆಕ್ಕಿಸರು; ಸಂಕಟ ಕಾಲದಲ್ಲಿ ಮರೆಹೊಕ್ಕವರನ್ನು ಸಂರಕ್ಷಿಸುವದಕ್ಕಾಗಿ ಯತ್ನಿಸುವಾಗ ಇವರು ತಮ್ಮನ್ನು ಕೂಡ ಮರೆತು ಬಿಡುವರು. ಹಗೆ ತೀರಿಸುವದಿದ್ದಾಗ ಇವರು ಮೊದಲು ಅವರಿಗೆ ಸೂಚನೆಯನ್ನು ಕೊಡಲಿಕ್ಕೆ ಎಂದೂ ಮರೆಯುವದಿಲ್ಲ. ರಣಭೂಮಿ ಯಿಂದ ಓಡಿ ಹೋಗುವವರನ್ನು ಇವರು ಬೆನ್ನಟ್ಟುವರು; ಆದರೆ ಮರೆ ಹೊಕ್ಕವರನ್ನು ಕಡಿಯುವದಿಲ್ಲ. ಈ ಸಂಸ್ಥಾನದಲ್ಲಿ ಎದೆಗುಂದದ ವೀರಾಳುಗಳು ಸಾವಿರಾರು ಮಂದಿಯುಂಟು ಜನರು ವಿದ್ಯಾವಂತರು ....................”

## ಪರಿಸಮಾಪ್ತಿ

ಧರ್ಮನಿಷ್ಠರೂ ಶೌರ್ಯನಿಷ್ಠರೂ ಆದವರ ಮನೆತನದಲ್ಲಿ ಜನ್ಮವೆತ್ತಿದ ಪುಲಿಕೇಶಿಯು ಕರ್ನಾಟಕ ಭೂಮಾತೆಯ ಸತ್ಪುತ್ರನಾಗಿ ಈ ರೀತಿಯಲ್ಲಿ ಕರ್ನಾಟಕದ ಯಶಶ್ಚಂದ್ರಿಕೆಯಿಂದ ಅಖಂಡ ಭರತಖಂಡ ವನ್ನೇ ಬೆಳಗಿ ಕಾಲಚಕ್ರಪ್ರಭಾವದಿಂದ ಕ್ರಿ. ೬೪೦ ರಲ್ಲಿ ಸ್ವರ್ಗಸ್ಥ ನಾದನು. ಪುಲಿಕೇಶಿಯ ವಿಯೋಗವಾದಮೇಲೆ ಕಳೆಗುಂದುವದಕ್ಕಾ ರಂಭಿಸಿದ ನಮ್ಮ ಕರ್ಣಾಟಕಮಾತೆಯು ತನ್ನ ಪೂರ್ವದ ಠೀವಿಯನ್ನು ಕನವರಿಸಿಕೊಳ್ಳುತ್ತ ಅದನ್ನು ಪಡೆದುಕೊಳ್ಳುವಂಥ ಪುಲಿಕೇಶಿಯ ಸಮಾ ನಧರ್ಮವುಳ್ಳ ಇನ್ನೊಬ್ಬ ಸತ್ಪುತ್ರನ ಉದಯಕ್ಕಾಗಿ ಬಹು ಕುತೂಹಲ ದಿಂದ ನಿರೀಕ್ಷಿಸುತ್ತ ಇನ್ನೂ ಅಂಥ ದಿನವನ್ನು ಕಾಣದೆ ತಲೆಯ ಮೇಲೆ ಕೈಹೊತ್ತುಕೊಂಡು ಕುಳಿತಿರುವಳು.



# ಶ್ರೀರಾಮಾನುಜಾಚಾರ್ಯರು

## ಹಿಂದಿನ ಕಾಲದ ಪರಿಸ್ಥಿತಿ

ಲೋಕದಲ್ಲಿ ಸ್ಥಿತ್ಯಂತರವೆಂಬ ಗೋಜಿಗೆ ಸಿಲುಕದಿರುವ ವಸ್ತುವೇ ಇಲ್ಲ. ಈ ನಿಯಮಕ್ಕೆ ಧರ್ಮವೂ ಕೂಡ ಹೊರತಲ್ಲ. ಒಂದಾನೊಂದು ಕಾಲದಲ್ಲಿ ಶ್ರೀಶಂಕರಾಚಾರ್ಯರು ಅವತಾರ ಮಾಡಿ ಈ ಜಗತ್ತು ಬರೀ ತೋರಿಕೆಯದೆಂದೂ ಜೀವನಚೇತನಸ್ವರೂಪವು ಸೃಷ್ಟಿಕರ್ತನಾದ ಬ್ರಹ್ಮನ ಹೊರತು ಬೇರೆಯಲ್ಲವೆಂದೂ ಶ್ರುತಿಯಿಂದಲೂ ಯುಕ್ತಿಯಿಂದಲೂ ಅನುಭವದಿಂದಲೂ ಮನಗಾಣಿಸಿ ಹೋದ ಮೇಲೆ ಆ ಅಭಿಪ್ರಾಯವು ಜನಮಂಡಲಿಯಲ್ಲಿ ಕಾಲಚಕ್ರದ ತಿರುಗುವಿಕೆಯ ತಿಕ್ಕಾಟದಿಂದ ಸವೆಯುತ್ತ ಬಂತು. ಜೀವಚೇತನವು ಬ್ರಹ್ಮಸ್ವರೂಪವೆಂಬರ್ಥವನ್ನು ಅನುಭವವೆಂಬ ಒರೆಗಲ್ಲಿಗೆ ಹಚ್ಚಿಕೊಂಡು ನೋಡುವ ಆಯಾಸವನ್ನು ತೆಗೆದುಕೊಳ್ಳದೆ ಜನರು ಆ ಒಣಮಾತನ್ನು ಮಾತ್ರ ಹಿಡಿದುಕೊಂಡು ದಿನದಿನಕ್ಕೆ ಸಾಧನಭ್ರಷ್ಟರಾಗುತ್ತ ಬಂದರು. ಪ್ರಪಂಚವೇ ಮುಳುಗಿಹೋದರೂ ಪರಮಾತ್ಮನಿಗೆ ದುಃಖವೆನಿಸಲಾರದು. ಆದರೆ ಧರ್ಮಕ್ಕೆ ಧಕ್ಕೆ ತಗಲಿದರೆ ಮಾತ್ರ ಅವನು ಸಹಿಸಲಾರನೆಂದು ತೋರುತ್ತದೆ. ಆದ್ದರಿಂದ ಹತ್ತನೇ ಶತಮಾನದ ಆದಿಯಲ್ಲಿ ಧರ್ಮದ ಪರಿವರ್ತನಕಾರ್ಯವು ಬಹು ಭರದಿಂದ ಬೆಳೆಯಿತು. ಯಥಾರ್ಥವನ್ನು ಅನುಭವಕ್ಕೆ ತಂದುಕೊಳ್ಳದೆ ಪರಮಾತ್ಮನು ನಿರ್ಗುಣನೆಂಬ ಅದ್ವೈತಿಗಳ ಒಣ ಸಿದ್ಧಾಂತವನ್ನು ಬದಿಗೊತ್ತಿ ಅವನು ಸರ್ವಸದ್ಗುಣಸಂಪನ್ನನೆಂಬ ಪ್ರತೀತಿಯು ಮುಂದೆ ಮುಂದೆ ಹೆಜ್ಜೆಯನ್ನಿಟ್ಟಿತು. ಈ ಹೊಸ ವೈಷ್ಣವಪಂಥವು ದಕ್ಷಿಣದೇಶದಲ್ಲಿ ಪುಷ್ಟಿಗೊಳ್ಳುತ್ತ ಬಂದು ಯಮುನಾಚಾರ್ಯರೆಂಬೊಬ್ಬ ಮಹನೀಯರಿಂದ ಕಂಚಿ, ಶ್ರೀರಂಗ, ತಿರುಪತಿ–ಮೊದಲಾದ ಕಡೆಗಳಲ್ಲಿ ಹರಡಿಕೊಂಡಿತು. ಆ ಯಮುನಾಚಾರ್ಯರು ತಮ್ಮ ಪಂಥದ ಪ್ರಭಾವವನ್ನು ಪ್ರಬಲಮಾಡಿ

ಪ್ರಸರಿಸಬಲ್ಲ ಪ್ರತಿಭಾಸಂಪನ್ನನಾದ ಒಬ್ಬ ಶಿಷ್ಯನನ್ನು ಬಯಸುತ್ತಿದ್ದ ಸಮಯದಲ್ಲಿ ಸುಮಾರು ಕ್ರಿ. ಶ. ೧೦೧೭ ರಲ್ಲಿ ಶ್ರೀರಾಮಾನುಜಾಚಾರ್ಯರ ಜನ್ಮವಾಯಿತು.

## ಹುಟ್ಟು

ಆಚಾರ್ಯರ ಜನ್ಮಭೂಮಿಯು ಶ್ರೀಪೆರಂಬದೂರು ಆಚಾರ್ಯರ ತಂದೆಯ ಹೆಸರು ಕೇಶವಸೋಮಯಾಜಿಗಳು; ತಾಯಿಯ ಹೆಸರು ಕಾಂತಿಮತಿ. ಅವರಿಬ್ಬರೂ ಒಳ್ಳೇ ಧರ್ಮಿಷ್ಠರೆಂದು ಹೇಳಬೇಕಾದ್ದೇ ಇಲ್ಲ. ಏಕೆಂದರೆ ದಕ್ಷಿಣ ದೇಶವು ವಿಶೇಷವಾಗಿ ಕರ್ಮಭೂಮಿ. ಆಗಿನ ಕಾಲದಲ್ಲಿ ಧರ್ಮದ ಉಜ್ಜ್ವಲತೆಯು ಈಗಿನ ಕಾಲಕ್ಕಿಂತ ಚೆನ್ನಾಗಿತ್ತು. ಇದಲ್ಲದೆ ನಮ್ಮ ಆಚಾರ್ಯರಿಗೆ ಧರ್ಮಾಮೃತದ ಮತ್ತೊಂದು ಉಗಮಸ್ಥಾನದ ಸಂಬಂಧವೂ ಇತ್ತು. ಅದೇನೆಂದರೆ ಕಾಂತಿಮತೀದೇವಿಯರ ಸಹೋದರರಾದ ಶ್ರೀಶೈಲಪೂರ್ಣರು ಯಮುನಾಚಾರ್ಯರ ಸಾಕ್ಷಾದನುಗ್ರಹಕ್ಕೆ ಪಾತ್ರರಾದವರಾಗಿ ಅವರ ಅನುಜ್ಞೆಯಂತೆ ತಿರುಪತಿಯ ದೇವಸ್ಥಾನದಲ್ಲಿದ್ದುಕೊಂಡು ಮಹಾಸ್ವಾಮಿಯ ಕೈಂಕರ್ಯದಲ್ಲಿ ನಿರತರಾಗಿದ್ದರು. ಶ್ರೀಪೆರಂಬದೂರಲ್ಲಿ ಆಚಾರ್ಯರ ಜನ್ಮವಾದಾಗ ಸೋದರಮಾವಂದಿರಾದ ಶ್ರೀಶೈಲಪೂರ್ಣರು ಶಿಶುವಿನ ಮುಖವನ್ನು ನೋಡಿ ಅತ್ಯಂತ ಸಂತುಷ್ಟರಾದರು.

## ವಿದ್ಯಾಭ್ಯಾಸ

ಆಚಾರ್ಯರ ಬಾಲಲೀಲೆಗಳ ವಿಚಾರವಾಗಿ ಹೆಚ್ಚಿನ ಸಂಗತಿ ಏನೂ ತಿಳಿದಿಲ್ಲ. ಕಾಲಕರ್ಮವಶದಿಂದ ಆಚಾರ್ಯರು ಶ್ರೀಶೈಲಪೂರ್ಣರ ಪೋಷಣೆಯಲ್ಲಿದ್ದು ಅವರಿಂದಲೇ ಸಕಾಲದಲ್ಲಿ ಉಪನೀತರಾದರು. ಪದ್ಧತಿಯ ಪ್ರಕಾರ ಕಾವ್ಯ, ನಾಟಕ ಮೊದಲಾದವುಗಳ ಅಭ್ಯಾಸವಾಯಿತು. ಆಚಾರ್ಯರಿಗೆ ಸ್ವಭಾವವಾಗಿಯೇ ಧರ್ಮವಿಚಾರದ ವಾಸನೆಯು ಪ್ರಬಲವಾಗಿದ್ದದರಿಂದ ಅವರ ಮನಸ್ಸು ಆತ್ಮವಿಚಾರದ ಕಡೆಗೆ ಹರಿಯಿತು. ಶ್ರೀಶೈಲಪೂರ್ಣರು ವೈಷ್ಣವ ಪಂಥದ ಅನುಯಾಯಿಗಳಾಗಿದ್ದರೂ ಕೂಡ ಆಚಾರ್ಯರು ಅದ್ವೈತ ಪಂಥದಲ್ಲಿ

ಜನ್ಮವನ್ನೆತ್ತಿದ್ದದರಿಂದ ಆಚಾರ್ಯರಿಗೆ ಯಾದವಪ್ರಕಾಶರೆಂಬ ವಿದ್ವಾಂಸರಲ್ಲಿ ಅದ್ವೈತಶಾಸ್ತ್ರಾಭ್ಯಾಸ ನಡೆಯಿತು. ಆ ಯಾದವ ಪ್ರಕಾಶರು ವೇದಮತಕ್ಕೆ ತಮ್ಮ ಸಂಪ್ರದಾಯಸಿದ್ಧವಾಗಿ ಅರ್ಥವನ್ನು ಮಾಡಿ ಹೇಳುವವರಾಗಿದ್ದರು. ಆಚಾರ್ಯರಿಗೆ ಎಷ್ಟೋ ಕಡೆಯಲ್ಲಿ ಆ ಅರ್ಥವು ಸಮಂಜಸವೆನ್ನಿಸುತ್ತಿರಲಿಲ್ಲ; ಅಷ್ಟೇ ಅಲ್ಲ; ಬೇರೆ ಅರ್ಥವು ತನಗೆ ತಾನೇ ಹೊಳೆದು ಸಮಂಜಸವೆನ್ನಿಸುತ್ತಿತ್ತು. ಇದನ್ನು ಆಚಾರ್ಯರು ಆಡಿತೋರಿಸುವದನ್ನು ಬಿಡಲಿಕ್ಕಾಗುತ್ತಿರಲಿಲ್ಲ. ಈ ಸಂದರ್ಭದಿಂದ ಗುರುಶಿಷ್ಯರ ಮನೋವೃತ್ತಿಗಳು ಒಂದಕ್ಕೊಂದು ಕೂಡಿಹೋಗದೆ ಅಗಲಿಕೊಳ್ಳುತ್ತಲೇ ಇದ್ದ ಸ್ಥಿತಿಯಲ್ಲಿಯೇ ಕೆಲವು ದಿವಸ ಪಾಠಪ್ರವಚನಗಳಾದವು.

## ಆಚಾರ್ಯರಿಗೆ ಕಾದಿದ್ದ ವಿಪತ್ತಿನ ಪರಿಹಾರ

ಆಚಾರ್ಯರು ಅದ್ವೈತಸಿದ್ಧಾಂತದ ಅಡಿಗಲ್ಲನ್ನು ಸಡಲಿಸುವ ಸಡಗರವನ್ನು ನೋಡಿ ಯಾದವಪ್ರಕಾಶರ ಇತರ ಶಿಷ್ಯರಿಗೆ ಸಹಿಸುವದಾಗಲಿಲ್ಲ. ಈ ಸ್ಥಿತಿಯಲ್ಲಿ ಅವರೆಲ್ಲರೂ ಸೇರಿ ತಮ್ಮ ಹಗೆಯನ್ನು ತೀರಿಸಿಕೊಳ್ಳುವ ಒಳಸಂಚನ್ನು ಮಾಡಿಕೊಂಡು ಕಾಶೀಯಾತ್ರೆಗೆ ಪ್ರಯಾಣವನ್ನು ಹೂಡಿದರು. ಆಚಾರ್ಯರೂ ಅವರ ಹಿಂದೆ ಹೊರಟರು. ತಮ್ಮ ಸಹಪಾಠಿಗಳಲ್ಲಿ ಯಾವ ವಕ್ರಬುದ್ಧಿಯೂ ಇವರಿಗೆ ಗೋಚರವಾಗಲಿಲ್ಲ. ಸುದೈವದಿಂದ ಇವರ ಜೊತೆಯಲ್ಲಿ ಇವರ ಚಿಕ್ಕಪ್ಪನ ಮಗ ಗೋವಿಂದಭಟ್ಟನೆಂಬವನೂ ಸೇರಿದ್ದನು. ಅವನಿಗೆ ಈ ಶಿಷ್ಯವರ್ಗದ ಕುಟಿಲಯುಕ್ತಿಯ ವಾಸನೆ ಹತ್ತಿತು. ಅದನ್ನು ತಾನು ಉಪೇಕ್ಷೆ ಮಾಡಿದರೆ ಈ ಶಿಷ್ಯವರ್ಗವು ಆಚಾರ್ಯರನ್ನು ನಡುಗಾಡಿನಲ್ಲಿ ಸಮಾಪ್ತಿ ಮಾಡಿಬಿಡುವದೆಂದು ನೆನೆಸಿ ಮೆಲ್ಲನೆ ಸಮಯವನ್ನು ಕಾದು ಈ ಅರ್ಥವನ್ನು ಆಚಾರ್ಯರಿಗೆ ಅರುಹಿದನು. ಅವರು ಅದನ್ನು ಮನಸ್ಸಿಗೆ ತಂದುಕೊಂಡು ದಾರಿಯಲ್ಲಿ ಹೋಗುತ್ತ ಹೋಗುತ್ತ ಯಾರಿಗೂ ತಿಳಿಸದೆ ಕಾಡಿನಲ್ಲಿ ಮರೆಯಾಗಿ ಬಿಟ್ಟರು. ಬಹುದೂರ ಹೋದ ಮೇಲೆ ಆಚಾರ್ಯರು ತಮ್ಮ ಗುಂಪಿನಿಂದ ಕಳಚಿಕೊಂಡರೆಂದು ತಿಳಿದು ಶಿಷ್ಯಮಂಡಲಿಯು ತಮ್ಮ ಇಷ್ಟಸಿದ್ಧಿಯಾಗಲಿಲ್ಲವೆಂದು ಒಳಗೇ ಬೆಂದುಕೊಂಡಿತು. ಇತ್ತ ಆಚಾರ್ಯರು ಕಗ್ಗಾಡಿನಲ್ಲಿ ದಿಕ್ಕುಗಾಣದೆ

ತೊಳಲುತ್ತಿರುವಾಗ ಅಲ್ಲಿ ಹಣ್ಣುಹಣ್ಣು ಮುದುಕರಾದ ಗಂಡ-ಹೆಂಡರಿಬ್ಬರು ಕಾಣಬಂದರು. ಅವರು ತಾವು ವ್ಯಾಧರೆಂದೂ ಕಂಚಿಗೆ ಹೋಗುವೆವೆಂದೂ ಹೇಳಿ ಆಚಾರ್ಯರನ್ನು ತಮ್ಮ ಜೊತೆಯಲ್ಲಿ ಕರೆದುಕೊಂಡು ರಾತ್ರಿಯೆಲ್ಲಾ ದಾರಿಯನ್ನು ನಡೆದರು. ಬೆಳಕು ಹರಿಯುತ್ತ ಬರುತ್ತಿರುವಾಗ ಆ ವೃದ್ಧವ್ಯಾಧನು ಬಾಯಾರಿಕೆಯನ್ನು ತೋರಿಸಿ ಆಚಾರ್ಯರನ್ನು ಕರೆದು ನೀರು ತರಹೇಳಲು ಕೋಮಲಾಂತಃಕರಣದ ಆಚಾರ್ಯರು ವೃದ್ಧದಂಪತಿಗಳ ಸೇವೆಯಿಂದ ತಾವು ಕೃತಾರ್ಥರಾಗುವೆವೆಂದು ನೀರು ತರಹೋದರು; ನೀರನ್ನೂ ತಂದರು. ಆಗ ಆ ವೃದ್ಧದಂಪತಿಗಳೇ ಕಾಣಲಿಲ್ಲ. ಇದರಿಂದ ಆಚಾರ್ಯರು ಚಕಿತರಾಗಿ ಸುತ್ತಲೂ ನಾಲ್ಕು ದಿಕ್ಕನ್ನೂ ನೋಡುವಾಗ ಕಂಚಿಯ ದೇವಸ್ಥಾನವೇ ಸಮೀಪಿಸಿತ್ತು. ಇದು ಭಗವಂತನ ಮಹಿಮೆಯೇ ಸರಿಯೆಂದು ಆಚಾರ್ಯರು ಮತ್ತಷ್ಟು ಭಕ್ತಿಭಾವವನ್ನು ಪಡೆದವರಾಗಿ ಅಲ್ಲಿಂದ ತಮ್ಮೂರಿಗೆ ಬಂದರು.

## ಯಾದವಪ್ರಕಾಶರಿಗೆ ಶರಣು ಹೊಡೆದದ್ದು

ಅತ್ತ ಮುಂದೆ ಹೋದ ಶಿಷ್ಯಮಂಡಲಿಯು ಕಾಶೀಯಾತ್ರೆಯನ್ನು ಮುಗಿಸಿಕೊಂಡು ಊರಿಗೆ ತಿರುಗಿ ಬಂತು. ಆಚಾರ್ಯರು ಎಂದಿನಂತೆ ಪಾಠಪ್ರವಚನಕ್ಕೆ ಹೋದರು. ಶಿಷ್ಯರೆಲ್ಲರೂ ಮುಖವನ್ನು ತಗ್ಗಿಸಿಕೊಂಡು ಹೆಚ್ಚು ಮಾತಾಡದೆ ಯಥೋಚಿತವಾಗಿ ನಡೆದುಕೊಳ್ಳಹತ್ತಿದರು. ಮನಸ್ಸಿನ ಕಲಂಕವು ಮಾತ್ರ ದಿನದಿನಕ್ಕೆ ಬೆಳೆಯುತ್ತಿತ್ತು. ಹೀಗಿರುವಾಗ ಅಲ್ಲಿಯ ಅರಸನ ಮಗಳಿಗೆ ದೆವ್ವ ಹಿಡಿದಿತ್ತು. ಅದನ್ನು ಉಚ್ಚಾಟನೆ ಮಾಡಲು ಯಾದವಪ್ರಕಾಶರಿಗೆ ಆಮಂತ್ರಣ ಬಂತು. ಅವರು ಹೋಗಿ ತಮ್ಮ ಆರ್ಭಟವನ್ನು ತೋರಿಸಿದರು. ಆದರೆ ಅಲ್ಲಿ ಇವರ ಬೆಳಕು ಬೀಳಲಿಲ್ಲ. ಆ ದೆವ್ವವು ಆಚಾರ್ಯರನ್ನು ನೋಡಿದಾಗ ತಲೆಯನ್ನು ತಗ್ಗಿಸಿತು. ಇದನ್ನು ಕಂಡು ಜನರು ಬೆರಗಾಗಿ ಆಚಾರ್ಯರ ವಿಚಾರವನ್ನು ಮಾಡುತ್ತಿರಲು ಆ ಆಚಾರ್ಯರ ಸಾಮರ್ಥ್ಯವು ಅನ್ಯಾದೃಶವಾದದ್ದೆಂದು ಹೇಳಿ ಆ ದೆವ್ವವು ಅಪ್ಪಣೆಯನ್ನು ತೆಗೆದುಕೊಂಡಿತು. ಅಂದಿನಿಂದ ಜನರಿಗೆ ಆಚಾರ್ಯರಲ್ಲಿ ವಿಶ್ವಾಸವು ಬೆಳೆಯುವದಕ್ಕಾರಂಭವಾಯಿತು. ಆಚಾರ್ಯರ ಮುಂದೆ ಯಾದವ

ಪ್ರಕಾಶರ ಮುಖವು ರಾಹು ತುಡುಕಿದ ಸೂರ್ಯ-ಚಂದ್ರರಂತಾಯಿತು. ಆ ಅಪಮಾನದಿಂದ ಯಾದವಪ್ರಕಾಶರು ಖಿನ್ನರಾಗಿ ಹೋದರು. ಇಷ್ಟಾದಮೇಲೆ ಇನ್ನು ಅವರಲ್ಲಿರುವದು ಸರಿಯಲ್ಲವೆಂದು ಆಚಾರ್ಯರು ಗುರುಕುಲ ವಾಸವು ಸಾಕೆಂದು ಕಂಚಿಗೆ ತೆರಳಿದರು.

## ಕಂಚಿಯ ವಾಸ

ಕಂಚಿಯಲ್ಲಿ ಕಂಚೀಪೂರ್ಣನೆಂಬ ಒಬ್ಬ ಭಕ್ತಶಿಖಾಮಣಿಯಿದ್ದನು. ಅವನು ಯಮುನಾಚಾರ್ಯರ ಶಿಷ್ಯನು. ಅವನಿಗೆ ದೇವಿಯು ಪ್ರತ್ಯಕ್ಷಳಾಗಿರುವಳೆಂತಲೂ ದೇವಿಯೊಡನೆ ಅವನು ಮಾತುಕಥೆಗಳನ್ನಾಡುವನೆಂತಲೂ ಪ್ರತೀತಿಯಿತ್ತು. ಇದನ್ನು ಕೇಳಿ ಆಚಾರ್ಯರು ಶಾಸ್ತ್ರಾಭ್ಯಾಸಕ್ಕಿಂತಲೂ ಸಾಧುಸಹವಾಸವು ಹೆಚ್ಚೆಂಬ ಅಭಿಪ್ರಾಯಕ್ಕೆ ಲಕ್ಷ್ಯವನ್ನು ಕೊಟ್ಟು ಆತನ ಬಳಿಗೆ ಹೋದರು. ಆತನು ಅಬ್ರಾಹ್ಮಣನಾಗಿದ್ದನು. ಬ್ರಾಹ್ಮಣನು ಅಬ್ರಾಹ್ಮಣನನ್ನು ಗೌರವಿಸುವದು ಆಗಿನ ಕಾಲಕ್ಕಂತು ಬಹುನಿಂದ್ಯವಾಗಿತ್ತು. ಜಾತಿಬ್ರಾಹ್ಮಣತ್ವಕ್ಕಿಂತಲೂ ಭಗವದನುಗ್ರಹಕ್ಕೆ ಪಾತ್ರನಾಗುವದೇ ನಿಜವಾದ ಬ್ರಾಹ್ಮಣ್ಯವೆಂದು ತಿಳಿದ ಆಚಾರ್ಯರು ಜನಮಂಡಲಿಯ ಕೂಗನ್ನು ಕಿವಿಯ ಮೇಲೆ ಹಾಕಿಕೊಳ್ಳದೆ ಭಗವತ್ಪ್ರಾಪ್ತಿಯೇ ತಮಗೆ ಮುಖ್ಯವೆಂದು ಆವರ ಸಹವಾಸದಲ್ಲಿ ನಿಂತೇ ಬಿಟ್ಟರು. ಆಚಾರ್ಯರ ಮನೋವೃತ್ತಿಯು ಈ ರೀತಿಯಲ್ಲಿ ಭಕ್ತಿಪ್ರಧಾನವಾಗಿ ಪ್ರವಹಿಸುತ್ತಿದ್ದದ್ದು ಯಮುನಾಚಾರ್ಯರಿಗೆ ತಿಳಿಯದೇ ಇರಲಿಲ್ಲ. ತಮ್ಮ ದಿವ್ಯಜ್ಞಾನದಿಂದಲೇ ಆಚಾರ್ಯರ ಪ್ರಭಾವವನ್ನು ಕಂಡುಹಿಡಿದು ಅವರಿಂದಲೇ ತಮ್ಮ ವೈಷ್ಣವ ಪಂಥದ ಪ್ರತಿಷ್ಠೆಯಾಗುವದೆಂದು ಅವರು ಗೊತ್ತುಮಾಡಿಕೊಂಡೇ ಇದ್ದರು. ಆದರೆ ಆಚಾರ್ಯರು ತಾವಾಗಿಯೇ ತಮ್ಮ ಬಳಿಗೆಬರಲೆಂದು ಅವರು ನಿರೀಕ್ಷಣೆ ಮಾಡುತ್ತಿದ್ದರು. ಎಷ್ಟು ದಿನವಾದರೂ ಆ ಸುಯೋಗವು ಒದಗಲಿಲ್ಲ. ಆಗ ಯಮುನಾಚಾರ್ಯರಿಗೆ ಇನ್ನು ತಡೆಯುವದಾಗಲಿಲ್ಲ. ಒಡನೆ ಅವರು ಆಚಾರ್ಯರನ್ನು ಕರೆತರುವದಕ್ಕಾಗಿ ತಮ್ಮ ಪ್ರಿಯಶಿಷ್ಯರಾದ ಮಹಾಪೂರ್ಣರನ್ನು ತಾವೇ ಕಳುಹಿಸಿದರು. ಮಹಾಪೂರ್ಣರು ಕಂಚಿಗೆ ಬಂದರು. ಯಮುನಾಚಾರ್ಯರ ವಿಷಯವನ್ನು ಆಚಾರ್ಯರು ಮೊದಲೇ ಮನ

ಗಂಡಿದ್ದರು. ಆದ್ದರಿಂದ ತಾನಾಗಿ ಬಂದ ಆಮಂತ್ರಣವನ್ನು ತಲೆಯಲ್ಲಿ ಹೊತ್ತು ಇದು ಕಂಚೀಪೂರ್ಣರ ಸೇವಾಫಲವೆಂದು ಮಹಾಪೂರ್ಣರ ಹಿಂದೆ ಹೊರಟು ಶ್ರೀರಂಗದ ದಾರಿಯನ್ನು ಹಿಡಿದರು.

## ಆಶಾಭಂಗ

ಪವಿತ್ರವಾದ ಕಾವೇರಿಯ ಉತ್ತರತೀರದ ಶ್ರೀ ರಂಗಕ್ಷೇತ್ರದಲ್ಲಿ ಕಾಲಿಡುವ ಹೊತ್ತಿನಲ್ಲಿ ಒಂದು ದೊಡ್ಡ ವೈಷ್ಣವಮಂಡಲಿಯು ದುಃಖಾಶ್ರುಗಳನ್ನು ಸುರಿಸುತ್ತ ಯಮುನಾಚಾರ್ಯರ ಶವವನ್ನು ಹೊತ್ತು ಕೊಂಡು ಬರುತ್ತಿತ್ತು. ಆ ಮಹಾತ್ಮರ ಸಮಾಗಮವನ್ನು ಪಡೆಯುವ ಸುಯೋಗವಿಲ್ಲದೆ ಹೋದದ್ದಕ್ಕಾಗಿ ಆಚಾರ್ಯರು ಬಹಳ ವಿಷಾದಬಟ್ಟರು. ಆದರೂ ಒಮ್ಮೆ ಅವರ ದಿವ್ಯದೇಹವನ್ನು ಮನಮುಟ್ಟಿ ನೋಡಬೇಕೆಂದು ಮನಸ್ಸಾಯಿತು. ಈ ಅಭಿಪ್ರಾಯವನ್ನು ಬಿಚ್ಚಿಹೇಳುತ್ತಲೇ ಶಿಷ್ಯವರ್ಗದವರು ಆಚಾರ್ಯರಿಗೆ ಆ ಶವವನ್ನು ತೋರಿಸಿದರು. ಆಚಾರ್ಯರಿಗೆ ಈ ಉತ್ಸುಕತೆ ಹುಟ್ಟಿದ್ದು ವ್ಯರ್ಥವಾಗಿರಲಿಲ್ಲ. ಯಮುನಾಚಾರ್ಯರ ಬಲಗೈಯ್ಯಲ್ಲಿ ಮೂರು ಬೆರಳುಗಳು ಬಲವಾಗಿ ಮಡಿಚಿಕೊಂಡಿದ್ದವು. ಆಚಾರ್ಯರಿಗೆ ಇದರ ಕಾರಣವು ಹೊಳೆಯಲ್ಲಿಲ್ಲ. ಅದರ ಅರ್ಥವೇನೆಂದು ಅವರು ಅಲ್ಲಿಯವರ ಮುಂದೆ ತಮ್ಮ ಪ್ರಶ್ನೆಯನ್ನಿಟ್ಟರು. ಪ್ರಾಣಪ್ರಯಾಣ ಸಮಯದಲ್ಲಿ ಯಮುನಾಚಾರ್ಯರು ವ್ಯಾಸಸೂತ್ರಕ್ಕೆ ವಿಶಿಷ್ಟಾದ್ವೈತಪರವಾಗಿ ಭಾಷ್ಯವನ್ನು ಮಾಡಿಸಬೇಕೆಂದಿದ್ದದ್ದು ಒಂದೆಂದೂ ಯೋಗ್ಯರಾದವರಲ್ಲಿ ಒಬ್ಬನಿಗೆ ಪರಾಶರನೆಂದೂ, ಇನ್ನೊಬ್ಬನಿಗೆ ಶಠಗೋಪನೆಂದೂ ಹೆಸರಿಡಬೇಕೆಂದಿದ್ದದ್ದು ಉಳಿದ ಎರಡೆಂದೂ ಅಲ್ಲಿಯವರು ಆ ಒಗಟನ್ನು ಒಡೆದು ಹೇಳಿದರು. ಪೂಜ್ಯರಾದ ಯಮುನಾಚಾರ್ಯರ ಈ ಇಚ್ಛಾವಿಶೇಷಗಳನ್ನು ಕೇಳುತ್ತಲೇ ಅವರಲ್ಲಿ ಪೂರ್ಣಭಕ್ತಿಯನ್ನಿಟ್ಟಿದ್ದ ಆಚಾರ್ಯರು ಆ ಕಾರ್ಯಗಳನ್ನು ನಾನು ಮಾಡಿ ಮುಗಿಸುತ್ತೇನೆಂದು ಅಲ್ಲಿಯೇ ತಮ್ಮ ಸಂಕಲ್ಪವನ್ನು ಪ್ರಕಾಶಗೊಳಿಸಿದರು. ಈ ಭಾರವನ್ನು ಆಚಾರ್ಯರು ವಹಿಸುತ್ತಲೇ ಆ ಬೆರಳುಗಳು ತಮ್ಮಷ್ಟಕ್ಕೆ ತಾವೇ ಮಡಿಕೆಯನ್ನು ಬಿಟ್ಟು ನೆಟ್ಟಗಾದವಂತೆ. ಅದನ್ನು ಕಣ್ಣಾರೆ ನೋಡಿ ಆಚಾರ್ಯರು ಅಲ್ಲಿಂದ ಹೊರಟು ಕಂಚಿಗೆ ಬಂದು ಮತ್ತೆ ಮೊದಲಿನಂತೆ ಕಂಚೀಪೂರ್ಣರೊಡನೆ ಭಗವತ್ಕೈಂಕರ್ಯದಲ್ಲಿ ನಿರತರಾದರು.

## ಮತ್ತೊಂದು ಆಶಾಭಂಗ

ಎಡೆಬಿಡದೆ ಕಂಚೀಪೂರ್ಣರೊಡನೆ ವಾಸಮಾಡಿದ ಮೇಲೆ ಆಚಾರ್ಯರಿಗೆ ದಿನದಿನಕ್ಕೆ ಅವರ ಮೇಲೆ ಪ್ರೀತಿ ಹೆಚ್ಚಾಗುತ್ತ ಬಂತು. ಒಂದು ದಿನ ಕಂಚೀಪೂರ್ಣರನ್ನು ಮನೆಗೆ ಊಟಕ್ಕೆ ಕರೆದು ಅವರ ಪ್ರಸಾದವನ್ನು ತೆಗೆದುಕೊಂಡು ಕೃತಕೃತ್ಯರಾಗಬೇಕೆಂಬ ಉದ್ದೇಶದಿಂದ ಆಚಾರ್ಯರು ಕಂಚೀಪೂರ್ಣರಿಗೆ ಆಮಂತ್ರಣವನ್ನಿತ್ತರು. ಆ ಸಮಯದಲ್ಲಿ ಆಚಾರ್ಯರು ಮದುವೆಯಾಗಿ ಅಲ್ಲಿಯೇ ಹೆಂಡತಿಯೊಡನೆ ಸಂಸಾರವನ್ನು ಮಾಡಿಕೊಂಡಿದ್ದರು. ಕಂಚೀಪೂರ್ಣರು ಆಮಂತ್ರಣವನ್ನು ಸ್ವೀಕರಿಸುತ್ತಲೇ ಆಚಾರ್ಯರು ಅತ್ಯಂತ ಸಂತೋಷದಿಂದ ಮನೆಗೆ ಬಂದು ಬೇಕಾದ ಅಡಿಗೆಯನ್ನು ಮಾಡುವಂತೆ ಹೆಂಡತಿಗೆ ಹೇಳಿದರು. ಆಕೆಯು ಕರ್ಮಠರ ಮನೆಯ ಹೆಣ್ಣುಮಗಳಾಗಿದ್ದು ಕರ್ಮದ ಕಡೆಗೆ ಹೆಚ್ಚು ಲಕ್ಷವುಳ್ಳವಳಾಗಿದ್ದಳು. ತನ್ನ ಪತಿಯು ಭಕ್ತರಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡುತ್ತಿದ್ದದ್ದು ಆಕೆಗೆ ಸರಿಬೀಳುತ್ತಿರಲಿಲ್ಲ. ಶೂದ್ರನನ್ನು ಸಾಧುವೆಂದು ಸತ್ಕರಿಸುವದು ಆಕೆಯ ಮನಸ್ಸಿಗೆ ಬರಲಿಲ್ಲ. ಆದರೆ ಗಂಡನ ಆಜ್ಞೆಯನ್ನು ನಡೆಸಿದ ಹೊರತು ಗತ್ಯಂತರ ವಿರಲಿಲ್ಲ. ಆದ್ದರಿಂದ ಆಕೆಯು ಅಡಿಗೆಯನ್ನು ಮಾಡಿದಳು. ಕಂಚೀಪೂರ್ಣರು ಬಂದರು. ಆಚಾರ್ಯರು ಅವರನ್ನು ಸತ್ಕರಿಸಿ ಬರಮಾಡಿಕೊಂಡು ಎಡೆಯನ್ನು ನೀಡಿದರು. ಕಂಚೀಪೂರ್ಣರು ಊಟಕ್ಕೆ ಕುಳಿತರು. ಅಷ್ಟರಲ್ಲಿಯೇ ಆಚಾರ್ಯರು ಏನೋ ಕಾರ್ಯಾಂತರದಿಂದ ಸ್ವಲ್ಪ ಹೊತ್ತಿನ ಕೆಲಸಕ್ಕೆ ಹೊರಕ್ಕೆ ಹೋದರು. ಸಾಧುಗಳ ಊಟವಾಗುವದರೊಳಗೇ ಬರುವೆವೆಂದು ಆಚಾರ್ಯರು ಎಷ್ಟೋ ನಂಬಿಕೆಯನ್ನಿಟ್ಟುಕೊಂಡಿದ್ದರು. ಅದು ಕಾರ್ಯಕಾರಿಯಾಗಲಿಲ್ಲ. ಕಂಚೀಪೂರ್ಣರು ಅವಸರದಿಂದ ಊಟವನ್ನು ಮುಗಿಸಿಕೊಂಡು, ಆಚಾರ್ಯರು ಬರುವದಕ್ಕೆ ಮುಂಚೆಯೇ ತಮಗೆ ಬೇರೊಂದು ಅವಸರದ ಉದ್ಯೋಗವಿರುವದೆಂದು ಹೇಳಿ, ಅಲ್ಲಿಂದ ಹೊರಟುಹೋಗಿಬಿಟ್ಟರು. ಆಚಾರ್ಯರು ಮನೆಗೆ ಬರುವ ಹೊತ್ತಿಗೆ ಅವರ ಹೆಂಡತಿಯು ಆ ಸಾಧುಗಳ ಎಂಜಲೆಲೆಯನ್ನು ಎತ್ತಿ ತಿಪ್ಪೆಗೆ ಬಿಸಾಟಿ ಆ ಸ್ಥಳವನ್ನು ಗೋಮಯದಿಂದ ಶುದ್ಧಿ ಮಾಡಿ ಅವುಗಳನ್ನೆಲ್ಲಾ ಮುಟ್ಟಿದ ಮೈಲಿಗೆಯನ್ನು ಕಳೆದು

ಕೊಳ್ಳುವದಕ್ಕೆ ಸ್ನಾನಮಾಡುತ್ತಿದ್ದಳು. ಇದನ್ನು ಕಂಡು ಆಚಾರ್ಯರು ತಮಗೆ ಆ ಸಾಧುವಿನ ಪ್ರಸಾದವು ಸಿಕ್ಕುವ ಯೋಗವು ಕಳೆದು ಹೋದದ್ದಕ್ಕೆ ನಿಟ್ಟುಸಿರಿಟ್ಟು ಅತ್ಯಂತಸಂತಪ್ತರಾಗಿ ತಮ್ಮ ಕೋಪವನ್ನು ತಾವೇ ನುಂಗಿಕೊಂಡರು.

## ಹೆಂಡತಿಯನ್ನು ತೊರೆದದ್ದು

ಯಮುನಾಚಾರ್ಯರು ವೈಕುಂಠವಾಸಿಗಳಾದ ಮೇಲೆ ಅವರ ಪಂಥವನ್ನು ಪೂರ್ಣಮಾಡುವದಕ್ಕೆ ಆಚಾರ್ಯರೇ ತಕ್ಕವರೆಂದು ಅಲ್ಲಿಯ ಶಿಷ್ಯಮಂಡಲಿಯವರೆಲ್ಲಾ ಗೊತ್ತುಮಾಡಿ ಆಚಾರ್ಯರನ್ನು ಅಲ್ಲಿಗೆ ಕರೆತರಹೇಳಿ ಮಹಾಪೂರ್ಣರನ್ನು ಮತ್ತೆ ಕಳುಹಿಸಿದರು. ಅದೇ ಕಾಲದಲ್ಲಿಯೇ ಮನೆಯಲ್ಲಿ ಬೇಸತ್ತಿದ್ದ ಆಚಾರ್ಯರು ಮಹಾಪೂರ್ಣರನ್ನು ಹುಡುಕಿಕೊಂಡು ಮನೆಯನ್ನು ಬಿಟ್ಟು ಹೊರಟಿದ್ದರು. ಮಧ್ಯ ಮಾರ್ಗದಲ್ಲಿ ಇಬ್ಬರೂ ಕಲೆತರು. ಆಚಾರ್ಯರು ಮಹಾಪೂರ್ಣರನ್ನು ಬಹಳವಾಗಿ ಕೇಳಿಕೊಂಡು ಅವರಿಂದ ಅಲ್ಲಿಯೇ ಮಂತ್ರೋಪದೇಶವನ್ನು ಪಡೆದರು. ಆಮೇಲೆ ಮಹಾಪೂರ್ಣರು ಆಚಾರ್ಯರ ಅಪೇಕ್ಷೆಯಂತೆ ತಮ್ಮ ಹೆಂಡತಿಯೊಡನೆ ಕಂಚಿಗೆ ಬಂದು ಆಚಾರ್ಯರ ಮನೆಯಲ್ಲಿಯೇ ವಸತಿಯನ್ನು ಮಾಡಿದರು. ಕರ್ಮಠಸ್ತ್ರೀಯಾದ ಆಚಾರ್ಯಪತ್ನಿಯ ಆಚರಣೆಗೂ ಭಕ್ತಿ ಪಂಥದ ದಂಪತಿಗಳ ಆಚರಣೆಗೂ ಹೊಂದಲಿಲ್ಲ. ಈ ಸ್ಥಿತಿಯಲ್ಲಿ ಬಹಳ ದಿನಗಳಿದ್ದರೆ ಆಚಾರ್ಯರ ಮನಸ್ಸಿಗೆ ನೋವಾಗುವ ಸಂಭವವುಂಟಾದೀತೆಂದು ಮಹಾಪೂರ್ಣರು ಸ್ವಲ್ಪ ದಿವಸಗಳಲ್ಲಿಯೇ ಶ್ರೀರಂಗಕ್ಕೆ ಬಂದುಬಿಟ್ಟರು. ಆಚಾರ್ಯರು ತಮ್ಮ ಹೆಂಡತಿಯ ಕ್ಷುದ್ರಬುದ್ಧಿಗೆ ಬೇಸತ್ತು ತನ್ನ ಇಂಗಿತವನ್ನರಿಯದ ಆಕೆಯು ತನಗೆ ತಕ್ಕವಳಲ್ಲವೆಂದು ಒಡನೆ ಆಕೆಯನ್ನು ತೌರುಮನೆಗೆ ಸಾಗಹಾಕಿದರು; ಮತ್ತೆ ಕರತರಲೇ ಇಲ್ಲ. ಈ ರೀತಿಯಲ್ಲಿ ಹೆಂಡತಿಯ ತೊಡಕನ್ನು ತಪ್ಪಿಸಿಕೊಂಡು ಕಂಚಿಯಲ್ಲಿಯೇ ದೇವಸ್ಥಾನಕ್ಕೆ ಹೋಗಿ ಶಾಸ್ತ್ರಪದ್ಧತಿಯಂತೆ ಸನ್ಯಾಸಾಶ್ರಮವನ್ನು ಕೈಕೊಂಡರು.

## ಶಿಷ್ಯಸಂಪತ್ತು

ಉತ್ತಮ ವಿರಕ್ತರಾಗಿ ಆಚಾರ್ಯರು ಭಕ್ತಿಪಂಥವನ್ನು ಪ್ರತಿಪಾದನೆ ಮಾಡುವದಕ್ಕೆ ಹೊರಡುತ್ತಲೇ ಕೂರೇಶನೆಂಬಾತನು ಮೊದಲೇ

ಶಿಷ್ಯನಾಗಿ ಬಂದನು. ಅವನು "ಕೂರಂ" ಎಂಬ ಊರಿನಲ್ಲಿ ಒಳ್ಳೇ ಶ್ರೀಮಂತನೂ ಪಂಡಿತನೂ ಆದ ಬ್ರಾಹ್ಮಣನಾಗಿದ್ದನು. ಆ ಮೇಲೆ ತನ್ನ ಸೋದರಿಯ ಮಗನಾದ ದಾಶರಥಿ ಎಂಬಾತನು ಬಂದು ಸೇರಿದನು. ಇನ್ನೂ ಎಷ್ಟೋ ಜನರು ಬಂದರು. ಅವರ ಹೆಸರನ್ನೆಲ್ಲಾ ಹೇಳು ವದೇನು! ಆಚಾರ್ಯರ ವಿದ್ಯಾಗುರುವಾಗಿದ್ದ ಯಾದವಪ್ರಕಾಶನೇ ಆಚಾರ್ಯರ ಪ್ರತಿಭಾವಿಶೇಷಕ್ಕೆ ಬೆರಗಾಗಿ ಗುಣಗ್ರಹಣಮಾಡಿ ತಾನೂ ಯತಿಯಾಗಿ ಗೋವಿಂದನೆಂಬ ಹೆಸರಿನಿಂದ ಶಿಷ್ಯವರ್ಗದಲ್ಲಿ ಸೇರಿದನು. ಹೀಗೆ ಆಚಾರ್ಯರ ಕೀರ್ತಿಪರಿಮಳವು ದಶದಿಕ್ಕುಗಳಿಂದಲೂ ಶಿಷ್ಯವರ್ಗ ವನ್ನು ಆಕರ್ಷಿಸುವ ಸಮಯದಲ್ಲಿ ಶ್ರೀರಂಗದ ಶಿಷ್ಯವರ್ಗವು ಆಚಾ ರ್ಯರಿಗೆ ಮತ್ತೊಮ್ಮೆ ಆಮಂತ್ರಣವನ್ನು ಕಳುಹಿಸಿತು. ಈ ಸಲ ಅವರು ಅಲ್ಲಿಗೆ ಹೋಗದೆ ಇರಲಿಕ್ಕಾಗಲಿಲ್ಲ. ತಮ್ಮ ಶಿಷ್ಯರೊಡನೆ ಇವರು ಅಲ್ಲಿಗೆ ಬರುವ ಸುದ್ದಿಯನ್ನು ಕೇಳಿ ಅಲ್ಲಿಯವರೆಲ್ಲರೂ ಇದಿರು ಬಂದು ಮಹೋತ್ಸವದಿಂದ ಇವರನ್ನು ಕರೆದುಕೊಂಡು ಹೋಗಿ ಯಮು ನಾಚಾರ್ಯರ ಪೀಠದ ಮೇಲೆ ಕೂಡಿಸಿ ಇವರಿಗೆ ತಮ್ಮ ಗುರುಭಕ್ತಿ ಯನ್ನು ತೋರಿಸಿದರು. ಕೂರೇಶನು ತನ್ನ ಊರಿನ ಐಶ್ವರ್ಯ ವನ್ನೆಲ್ಲಾ ಬಿಟ್ಟು ವಿರಕ್ತನಾಗಿ ಹೆಂಡತಿಯೊಡನೆ ಶ್ರೀರಂಗದಲ್ಲಿ ಭಿಕ್ಷಾ ವೃತ್ತಿಯಿಂದ ದೇಹಯಾತ್ರೆಯನ್ನು ನಡೆಸಿಕೊಂಡು ಆಚಾರ್ಯರ ಶುಶ್ರೂಷೆಯನ್ನು ಮಾಡುತ್ತಿದ್ದನು. ಕಾಳಹಸ್ತಿಯಲ್ಲಿ ಮಹಾಶಿವಭಕ್ತ ನಾಗಿದ್ದ ಗೋವಿಂದಭಟ್ಟನು ಬಂದು ವಿಷ್ಣುಭಕ್ತಮಾಲಿಕೆಯ ಮಧ್ಯ ಮಣಿಯಾದನು. ಯಜ್ಞಮೂರ್ತಿಯೆಂಬ ಪಂಡಿತನು ಆಚಾರ್ಯರ ಆಕರ್ಷಣಕ್ಕೆ ಸಿಕ್ಕಿ ದೇವರಾಜ ಮುನಿಯೆಂಬ ಸನ್ಯಾಸಿಯಾದನು.

## ಉದಾರ ಬುದ್ಧಿ

ಆಚಾರ್ಯರು ಶ್ರೀರಂಗದಲ್ಲಿದ್ದಾಗಲೇ ಇತರ ಶಿಷ್ಯರು ಎಷ್ಟೆಷ್ಟೋ ಸಂಪ್ರದಾಯಗಳನ್ನು ಆಚಾರ್ಯರ ಕಿವಿಯಲ್ಲಿ ಊದುತ್ತಿದ್ದರು. ಗೋಷ್ಠಿ ಪೂರ್ಣನೆಂಬೊಬ್ಬನು ಆಚಾರ್ಯರನ್ನು ಶ್ರೀರಂಗದಿಂದ ಮಧುರೆಗೆ ಕರೆದುಕೊಂಡುಹೋಗಿ ಅಲ್ಲಿ ಅವರಿಗೆ ರಹಸ್ಯವಾದ ಮಂತ್ರವನ್ನು ಹೇಳ ಬೇಕೆಂದು ಹದಿನೆಂಟು ಸಲ ಮನಸ್ಸು ಮಾಡಿ ಹಿಂದೆಗೆದಿದ್ದನು. ಕೊನೆಗೆ ಆಚಾರ್ಯರ ಪ್ರೇಮವಿಶೇಷಕ್ಕೆ ಒಂದು ದಿನ ಕಟ್ಟುಬೀಳಬೇಕಾಗಿ ಬಂತು.

ಆಗ ಅವನು ಆ ಉಪದೇಶವನ್ನು ರಹಸ್ಯವಾಗಿಟ್ಟು ಕೊಳ್ಳುತ್ತೇನೆಂದು ಆಚಾರ್ಯರಿಂದ ವಾಗ್ದಾನವನ್ನು ತೆಗೆದುಕೊಂಡು ಕೊನೆಗೆ ಅವರ ಮುಂದೆ ಅದನ್ನು ಬಾಯಿಬಿಟ್ಟನು. ಆಚಾರ್ಯರು ಅದನ್ನು ಗ್ರಹಣ ಮಾಡುತ್ತಲೇ ಇಂಥ ಪರಮಪವಿತ್ರವಾದ ವಿಷಯವನ್ನು ಜನರಿಗೆಲ್ಲಾ ಮರೆಮಾಚಿ ಇಟ್ಟುಕೊಳ್ಳುವದು ಯೋಗ್ಯವಲ್ಲವೆಂದು ಅವರ ಮನಸಿನಲ್ಲಿ ತಳಮಳ ಉಂಟಾಯಿತು. ಒಡನೆ ಅವರು ಸುತ್ತಮುತ್ತಣವರನ್ನೆಲ್ಲಾ ಗುಂಪುಗೂಡಿಸಿ ನಡುವೆ ನಿಂತು ಆ ಮಂತ್ರವನ್ನು ಎಲ್ಲರಿಗೂ ಕೇಳಿಸು ವಂತೆ ಗಟ್ಟಿಯಾಗಿ ಹೇಳಿಬಿಟ್ಟರು. ಇದನ್ನು ನೋಡಿ ಗೋಷ್ಠಿಪೂರ್ಣರ ಕಣ್ಣು ಕೆಂಪಾಗಿ ತುಟಿಗಳು ನಡುಗುವದಕ್ಕೆ ಮೊದಲಾದವು. ಈ ದ್ರೋಹ ಬುದ್ಧಿಗೆ ಕಾರಣವೇನೆಂದು ಗೋಷ್ಠಿಪೂರ್ಣರು ಆಚಾರ್ಯರ ನ್ನು ಕೇಳಿದರು. ಜನರ ಮೇಲಿನ ಕನಿಕರವಲ್ಲದೆ ಮತ್ತೇನೂ ಇಲ್ಲ ವೆಂದೂ ಸಮಸ್ತರಿಗೂ ಉತ್ತಮ ಗತಿಯನ್ನು ಕೊಡುವಂಥ ಆ ಮಂತ್ರ ವನ್ನು ತಾನೊಬ್ಬನೇ ಇರಿಸಿಕೊಳ್ಳುವದು ತನ್ನ ಮನಸ್ಸಿಗೆ ಬರಲಿಲ್ಲ ವೆಂದೂ ತನ್ನ ಆಚರಣೆಯು ದ್ರೋಹವಾದರೆ ಇದರ ಫಲವಾಗಿ ನರಕ ವಾದರೂ ತನಗೆ ಸಂತೋಷವೆಂದೂ ಆಚಾರ್ಯರು ತಮ್ಮ ಹೃದಯ ವನ್ನು ಬಿಚ್ಚಿ ತೋರಿಸಿದರು. ಗೋಷ್ಠಿಪೂರ್ಣರು ನಿರುತ್ತರರಾದರು.

## ಗ್ರಂಥ ರಚನೆ

ಆಚಾರ್ಯರು ಕೆಲವು ದಿವಸ ತಿರುಪತಿಯಲ್ಲಿದ್ದು ಅಲ್ಲಿ ತಮ್ಮ ಸೋದರಮಾವಂದಿರಾದ ಶ್ರೀಶೈಲಪೂರ್ಣರಿಂದ ರಾಮಾಯಣ ತತ್ವ ಗಳನ್ನು ತಿಳಿದರು ಆಮೇಲೆ ಉಪನಿಷತ್ತುಗಳಿಗೆ ಅದ್ವೈತಾರ್ಥವು ಹೊಂದುವದಿಲ್ಲವೆಂದು ತಮ್ಮರ್ಥವನ್ನು ಕೊಟ್ಟು ವೇದಾರ್ಥಸಂಗ್ರಹ ವೆಂಬ ಗ್ರಂಥವನ್ನು ಬರೆದರು ಮತ್ತು ಪರಬ್ರಹ್ಮನಿಗೆ ಶಿವ ಶಬ್ದಕ್ಕಿಂತಲೂ ನಾರಾಯಣಶಬ್ದವು ಹೆಚ್ಚು ಶೋಭಿಸುವದೆಂದೂ ನಿರ್ಣಯಮಾಡಿದರು. ವ್ಯಾಸಸೂತ್ರಗಳ ಸಮಸ್ಯೆಯನ್ನು ಬಿಡಿಸುವದೊಂದು ಮಹತ್ಕಾರ್ಯ ವಿತ್ತು. ಶ್ರೀಶಂಕರಾಚಾರ್ಯರಿಗಿಂತ ಹಿಂದಿನ ಕಾಲದಲ್ಲಿದ್ದ ಬೋಧಾ ಯನವೃತ್ತಿಯ ಆಧಾರದ ಮೇಲೆ ತಮ್ಮ ಭಾಷ್ಯವನ್ನು ರಚಿಸುವ ನಿಶ್ಚ ಯವನ್ನು ಮಾಡಿದರು. ಆ ಗ್ರಂಥವು ಕಾಶ್ಮೀರದಲ್ಲಿರುವದಾಗಿ ತಿಳಿ ಯಿತು. ಅದಕ್ಕಾಗಿ ಅವರು ಕೂರೇಶನೊಡನೆ ಅಲ್ಲಿಗೆ ಹೋದರು.

ಅಲ್ಲಿಯವರು ಅದನ್ನು ಬರೆದುಕೊಳ್ಳುವದಕ್ಕೆ ಕೂಡ ಕೊಡದೆ ಓದಿಕೊಂಡು ಮಾತ್ರ ಹೋಗಬಹುದೆಂದು ಹೇಳಿದರು. ಆ ಸಮಯದಲ್ಲಿ ಕೂರೇಶನು ತನ್ನ ಪ್ರಬಲವಾದ ಸ್ಮೃತಿಶಕ್ತಿಯ ಪ್ರಭಾವದಿಂದ ಒಂದು ಸಲ ನೋಡುವದರಿಂದಲೇ ಅದರ ಮುಖ್ಯ ಮುಖ್ಯ ಭಾಗಗಳನ್ನು ಕಂಠಪಾಠಮಾಡಿಕೊಂಡುಬಿಟ್ಟನು. ಆ ಮೇಲೆ ಆಚಾರ್ಯರು ಬ್ರಹ್ಮಸೂತ್ರಗಳ ಮೇಲೆ ಭಾಷ್ಯವನ್ನು ಹೇಳುವದಕ್ಕೆ ಮೊದಲು ಮಾಡಿದರು. ಕೂರೇಶನು ಅದನ್ನು ಬರೆಯುವ ಉದ್ಯೋಗವನ್ನು ಕೈಕೊಂಡನು. ಆಚಾರ್ಯರು ಹೇಳುವಾಗ ಒಂದೊಂದುವೇಳೆ ಯಾವ ಅಭಿಪ್ರಾಯವಾದರೂ ತನಗೆ ಕಂಠಸ್ಥವಾಗಿದ್ದ ಬೋಧಾಯನ ವೃತ್ತಿಗೆ ಬಿಡುತ್ತಿದ್ದರೆ ಕೂರೇಶನು ಲೇಖನಿಯನ್ನು ನಿಲ್ಲಿಸಿಬಿಡುತ್ತಿದ್ದನು. ಆಗ ಆಚಾರ್ಯರು ಅದನ್ನು ಮತ್ತೆ ವಿಚಾರಮಾಡಿ ಸರಿಪಡಿಸುತ್ತಿದ್ದರು. ಹೀಗೆ ಸೂತ್ರಭಾಷ್ಯವನ್ನು ಮುಗಿಸಿ ಯಮುನಾಚಾರ್ಯರಿಗೆ ಕೊಟ್ಟಿದ್ದ ಒಂದು ವಾಗ್ದಾನವನ್ನು ಪೂರ್ಣಮಾಡಿದ ಮೇಲೆ ಈ ಅರ್ಥಕ್ಕೆ ಗೀತಾವಾಕ್ಯವನ್ನು ಸಮನ್ವಯಮಾಡಿ ಭಾಷ್ಯವನ್ನು ರಚಿಸಿದರು. ಇವಲ್ಲದೆ ಇನ್ನೂ ಎಷ್ಟೋ ಸಣ್ಣ ಪುಟ್ಟ ಗ್ರಂಥಗಳಾದವು. ಆಮೇಲೆ ಆಚಾರ್ಯರು ತಮ್ಮ ಸೋದರಮಾವಂದಿರಾದ ಶ್ರೀಶೈಲಪೂರ್ಣರ ಮಗನಾದ ಕುರುಕೇಶನಿಗೆ ಶಠಗೋಪನೆಂದೂ ತಮ್ಮೊಬ್ಬ ಗೆಳೆಯನ ಮಗನಾದ ಕೂರೇಶನಿಗೆ ಪರಾಶರನೆಂದೂ ಹೆಸರಿಟ್ಟು ಗುರ್ವಾಜ್ಞೆಯನ್ನು ಪೂರ್ಣವಾಗಿ ಪರಿಪಾಲಿಸಿದರು. ಕುರುಕೇಶನು ಮೂಲಶಠಗೋಪರ ಗ್ರಂಥದ ಮೇಲೆ ದೊಡ್ಡ ವಿವರಣವನ್ನು ಬರೆದು ತನ್ನ ಶಠಗೋಪಸಂಜ್ಞೆಯನ್ನು ಸಾರ್ಥಕ ಮಾಡಿಕೊಂಡನು.

## ದಿಗ್ವಿಜಯ

ಆಚಾರ್ಯರು ತಾವು ಸಿದ್ಧಾಂತಮಾಡಿದ ಅರ್ಥವನ್ನು ದಶದಿಕ್ಕುಗಳಿಗೂ ಪ್ರಸರಿಸಬೇಕೆಂಬ ಕುತೂಹಲದಿಂದ ಶ್ರೀರಂಗವನ್ನು ಬಿಟ್ಟು ರಾಮೇಶ್ವರದವರಿಗೆ ಹೋಗಿ ಅಲ್ಲಿಂದ ಬದರೀನಾಥದವರೆಗೆ ಪ್ರಯಾಣ ಮಾಡುತ್ತ ಸಮಸ್ತ ವಿಷ್ಣು ಕ್ಷೇತ್ರಗಳನ್ನೂ ಹೊಕ್ಕು ಜನಮಂಡಲಿಗೆ ತಮ್ಮ ಧರ್ಮಾಮೃತವನ್ನು ಪಾನಮಾಡಿಸುತ್ತ ಎಲ್ಲರನ್ನೂ ತಲೆದೂಗಿಸುತ್ತಿದ್ದರು. ಬದರೀನಾಥದಿಂದ ಹೊರಟ ಮೇಲೆ ಕಾಶ್ಮೀರಕ್ಕೆ ಬಂದು

ಅಲ್ಲಿ ಸಾಕ್ಷಾತ್ಸರಸ್ವತಿಯೊಡನೆ ವಾದಮಾಡಿ ಆಕೆಗೆ ತಮ್ಮ ಭಾಷ್ಯಾರ್ಥದ ಸತ್ಯತ್ವವನ್ನು ಮನಗಾಣಿಸಿದರೆಂದು ವಾರ್ತೆ ಇದೆ. ಈ ರೀತಿಯಲ್ಲಿ ಬೆಳೆದ ಆಚಾರ್ಯರ ಪ್ರತಿಷ್ಠೆಯ ಪ್ರತಿಭೆಯಿಂದ ಕಣ್ಣು ಕುಕ್ಕಿದಂತಾದ ಕೆಲವರು ಇವರನ್ನು ಕುಯುಕ್ತಿಯಿಂದ ಹಣ್ಣುಮಾಡಬೇಕೆಂದು ಯೋಚಿಸಿರಲು ಇವರು ಆ ಸ್ಥಲವನ್ನೇ ಬಿಟ್ಟು ಹೊರಟರು. ಅಲ್ಲಿಂದ ಬಂದವರು ಜಗನ್ನಾಥದಲ್ಲೊಂದು ಮಠವನ್ನು ಸ್ಥಾಪಿಸಿದರು. ಆದರೆ ಅಲ್ಲಿಯ ದೇವಸ್ಥಾನದಲ್ಲಿ ತಮ್ಮ ಸಂಪ್ರದಾಯದಂತೆ ಪೂಜಾವಿಧಾನಗಳು ನಡೆಯದೇ ಹೋದ್ದರಿಂದ ಮನಸ್ಸಿಗೆ ಒಗ್ಗದಿರುವ ಸ್ಥಲದಲ್ಲಿ ಇರಬಾರದೆಂದು ಅಲ್ಲಿಂದ ತಿರುಪತಿಯ ಮಾರ್ಗವಾಗಿ ಹೊರಟ್ಟುಬಂದರು.

## ಮೈಸೂರದೇಶ ಸಂಚಾರ

ಇಷ್ಟಾಗುವದರಲ್ಲಿ ಆ ಪ್ರಾಂತಕ್ಕೆ ಬಂದನೇ ಕುಲೋತ್ತುಂಗ ಚೋಳನ ಆಳಿಕೆ ಬಂದಿತ್ತು. ಶೈವರಿಂದ ಪ್ರೇರಿತನಾದ ಆ ರಾಜನು ವೈಷ್ಣವರನ್ನು ಬಹಳವಾಗಿ ಹಿಂಸೆಮಾಡತೊಡಗಿದನು. ಈ ಸಂದರ್ಭದಲ್ಲಿಯೇ ಒಮ್ಮೆ ಕೂರೇಶನು ಆಚಾರ್ಯರನ್ನು ಉಳಿಸುವದಕ್ಕಾಗಿ ಆಚಾರ್ಯರ ವೇಷದಿಂದ ಆ ರಾಜನನ್ನು ಕಾಣಿಸಿಕೊಂಡು ಆ ದುರಾಗ್ರಹಿಯ ಕೈಯಿಂದ ಕಣ್ಣನ್ನು ಕೀಳಿಸಿಕೊಳ್ಳಬೇಕಾಗಿತ್ತು. ಮತ್ತು ಮಹಾಪೂರ್ಣರೂ ತಮ್ಮ ಜೀವಿತವನ್ನು ಸಾಕುಮಾಡಬೇಕಾಯಿತು. ಈ ಗಡಿಬಿಡಿಯ ಕಾಲದಲ್ಲಿ ಇಲ್ಲಿರಬಾರದೆಂದು ಆಚಾರ್ಯರು ಮಿತ್ರ ಪರಿವಾರದೊಡನೆ ನೀಲಗಿರಿಯ ಮಾರ್ಗವಾಗಿ ಮೈಸೂರಿಗೆ ನಲವತ್ತು ಮೈಲುಗಳ ದೂರದಲ್ಲಿ ಕಾವೇರೀ ನದಿಯ ಮೇಲಿರುವ ವಹ್ನಿಪುಷ್ಕರಿಣೀ ಕ್ಷೇತ್ರಕ್ಕೆ ಬಂದರು. ಅಲ್ಲಿ ಬಿಟ್ಟದೇವನೆಂಬ ಹೊಯಸಳನು ರಾಜನಾಗಿದ್ದನು. ಅವನ ಮಗಳಿಗೆ ದೆವ್ವ ಹಿಡಿದಿತ್ತು. ಅದರ ಉಚ್ಚಾಟನೆಯು ಎಲ್ಲರಿಗೂ ಅಶಕ್ಯವಾಗಿತ್ತು. ಆ ರಾಜನ ಇಚ್ಛೆಯಂತೆ ಆಚಾರ್ಯರೂ ಅವನ ಮನೆಗೆ ಹೋಗಿ ತಮ್ಮ ಪ್ರಭಾವದಿಂದ ಆ ದೆವ್ವವನ್ನು ಹೊರಡಿಸಿದರು. ಇದನ್ನು ನೋಡಿ ಸಂತುಷ್ಟನಾದ ರಾಜನು ತನ್ನ ಜೈನಮತವನ್ನು ಬಿಟ್ಟು ಆಚಾರ್ಯರ ಮತಕ್ಕೆ ಸೇರಿ ವಿಷ್ಣುವರ್ಧನನೆಂಬ ಹೆಸರನ್ನು ಪಡೆದನು.

## ಜೈನಮತವನ್ನು ಗೆದ್ದದ್ದು

ರಾಜನು ಜೈನಮತವನ್ನು ಬಿಟ್ಟು ವೈಷ್ಣವನಾಗುತ್ತಲೇ ಅಲ್ಲಿಯ ಜೈನರ ಹೊಟ್ಟೆಯೊಳಗೆಲ್ಲಾ ಬೆಂಕಿಬಿತ್ತು. ಅವರೆಲ್ಲರೂ ಸೇರಿ ಆ ಆಚಾರ್ಯರನ್ನು ವಾದಕ್ಕೆ ಕರೆದರು. ರಾಜನು ಆ ವಾದದಲ್ಲಿ ಸೋತವರಿಗೆ ಶಿಕ್ಷೆ ಮಾಡುವೆನೆಂದು ಮೊದಲೇ ಹೇಳಿದ್ದನು. ಸಭೆಸೇರಿತು. ಜೈನರು ತಲೆಗೊಂದೊಂದರಂತೆ ಪ್ರಶ್ನೆಗಳ ಬಿರುಮಳೆಯನ್ನು ಸುರಿಸಲಾರಂಭಿಸಿದರು. ಆ ಸಮಯದಲ್ಲಿ ಆಚಾರ್ಯರು ಪರದೆಯೊಳಗಿದ್ದು ಆದಿಶೇಷನಾಗಿ ತಮ್ಮ ಜ್ಞಾನಬಲವನ್ನು ತಂದುಕೊಂಡು ಉತ್ತರವನ್ನು ಕೊಟ್ಟರೆಂದು ಹೇಳುತ್ತಾರೆ. ಆಗ ಜೈನರ ಬಾಯಿ ಕಟ್ಟಿಹೋಯಿತು. ಇದರಿಂದ ಕ್ರುದ್ಧನಾದ ರಾಜನು ಎಷ್ಟೋ ಮಂದಿ ಜೈನರಿಗೆ ಚಿತ್ರಹಿಂಸೆಯನ್ನು ಮಾಡಿದ್ದಲ್ಲದೆ ಎಷ್ಟೋ ಜನರನ್ನು ತನ್ನ ದೇಶದಿಂದ ಹೊರಗೆ ಹಾಕಿದನು. ಜೈನರ ದೇವಾಲಯಗಳು ನೆಲಸಮನಾದವು. ಆ ರಾಜನು ಆ ದೇವಾಲಯಗಳಿಂದಲೇ ಒಂದು ಸರೋವರವನ್ನು ಕಟ್ಟಿಸಿ ಅದನ್ನು ಮೋತೀತಲಾವ ಎಂದು (ಮುತ್ತಿನ ಕೆರೆಯೆಂದು) ಕರೆದು ತನ್ನ ಆಚಾರ್ಯ ಭಕ್ತಿಯನ್ನು ಮುಗಿಲುಮುಟ್ಟಿಸಿದನು.

## ಪಂಚಮರ ಉದ್ಧಾರ

ಆಚಾರ್ಯರು ಮೈಸೂರ ದೇಶದಲ್ಲಿ ಇಪ್ಪತ್ತು ವರ್ಷಗಳಿದ್ದು ಒಂದು ದಿನ ಕನಸಿನಲ್ಲಿ ಭಗವಂತನ ಆಜ್ಞೆಯಾಗಿರುವದೆಂದು ಮೇಲುಕೋಟೆಯೆಂಬ ಊರಿಗೆ ಹೋಗಿ ಅಲ್ಲಿಯೇ ಸಿಕ್ಕಿದ ಒಂದು ವಿಷ್ಣುವಿಗ್ರಹವನ್ನು ಸ್ಥಾಪಿಸಿದರು. ಅದರ ಪತ್ನಿಯ ವಿಗ್ರಹವು ದಿಲ್ಲಿಯಲ್ಲಿ ಮಹಮ್ಮದೀಯರಾಣಿಯಲ್ಲಿರುವದೆಂದು ಕೇಳಿ ಅಲ್ಲಿಂದ ತಂದು ಅದನ್ನು ಅಲ್ಲಿ ಪ್ರತಿಷ್ಠೆಮಾಡಿದರು. ಈ ಸಮಯದಲ್ಲಿ ಆ ಪ್ರದೇಶದ ಪಂಚಮರು ಅವರಿಗೆ ಬಹಳ ನೆರವಾದ್ದರಿಂದ ಅವರಿಗೆ ಭಗವತ್ಕೈಂಕರ್ಯದ ಸೌಕರ್ಯವನ್ನು ಕಲ್ಪಿಸಿಕೊಟ್ಟು ಅವರನ್ನು ಉದ್ಧಾರಮಾಡಬೇಕೆಂದು ಕೆಲವು ಗೊತ್ತಾದ ದಿನಗಳಲ್ಲಿ ಆ ಪಂಚಮರಿಗೆ ಆ ದೇವಾಲಯದಲ್ಲಿ ಪ್ರವೇಶಕ್ಕೆ ಅವಕಾಶವಿರುವಂತೆ ಗೊತ್ತುಮಾಡಿದರು.

## ಅಂತ್ಯಕಾಲ

ಆಚಾರ್ಯರು ಬೇಲೂರು ಮೊದಲಾದ ಅನೇಕ ಕಡೆಗಳಲ್ಲಿ ವಿಷ್ಣುದೇವತಾಪ್ರತಿಷ್ಠೆಯನ್ನು ಮಾಡಿ ವೈಷ್ಣವಮತವನ್ನುಜ್ಜೀವನ ಗೊಳಿಸಿದರು ಮತ್ತು ಶ್ರವಣಬೆಳಗೊಳದಲ್ಲಿದ್ದ ಬುದ್ಧರನ್ನು ಗೆದ್ದರು. ಇಷ್ಟು ಹೊತ್ತಿಗೆ ಶ್ರೀರಂಗದಲ್ಲಿ ಕುಲೋತ್ತುಂಗನ ಆಯುಷ್ಯವು ಮುಗಿಯಿತೆಂದು ಕೇಳಿ ಆಚಾರ್ಯರು ಅಲ್ಲಿ ಹೋಗಿ ಕೂರೇಶರಿಗೆ ಒದಗಿದ್ದ ದುಸ್ಥಿತಿಗಾಗಿ ದುಃಖಪಟ್ಟು ಅವರನ್ನು ಸಮಾಧಾನ ಮಾಡಿದರು. ಚಿದಂಬರಕ್ಷೇತ್ರದಿಂಪ ಗೋವಿಂದ ರಾಜನನ್ನು ತಂದು ತಿರುಪತಿಯಲ್ಲಿ ಬಚ್ಚಿಟ್ಟಿರುವರೆಂದು ಸುದ್ದಿಯನ್ನು ಕೇಳಿ ಆಚಾರ್ಯರು ತಿರುಪತಿಗೆ ಹೋಗಿ ಆ ಪರ್ವತದ ಸಾನುಪ್ರದೇಶದಲ್ಲಿಯೇ ಅದರ ಸ್ಥಾಪನೆಯನ್ನು ಮಾಡಿದರು. ಇವರ ಶಿಷ್ಯರಾದ ರಾಮಾನಂದರೆಂಬವರು ಇವರ ಪಂಥವನ್ನು ಬಂಗಾಲದಲ್ಲಿ ಕೂಡ ಪ್ರಸಾರ ಮಾಡಿದರು. ಈ ಪ್ರಕಾರವಾಗಿ ದೇಶದಲ್ಲೆಲ್ಲಾ ಭಗವಂತನ ಅರ್ಚನಾ ವಿಧಿರೂಪದಲ್ಲಿ ಪ್ರಬಲವಾದ ಪ್ರವೃತ್ತಿಯನ್ನುಂಟುಮಾಡಿ ಭಕ್ತಿಪಂಥವನ್ನು ಬೆಳೆಸುವದರಲ್ಲಿ ತಮ್ಮ ನೂರಿಪ್ಪತ್ತು ವರ್ಷದ ಆಯುಷ್ಯವನ್ನು ವಿನಿಯೋಗಿಸಿ ಆಚಾರ್ಯರು ಕ್ರಿ. ಶ. ೧೧೩೭ ರಲ್ಲಿ ಪರಂಧಾಮವನ್ನೈದಿದರು.



# ಬಸವೇಶ್ವರ

## ಹುಟ್ಟು

ಪರಮಾತ್ಮನಿಗೆ ತನ್ನ ಬಳಿಗೆ ಶರಣು ಬರುವ ಯಾವ ಹಾದಿಯು ಲೋಪವಾಗುವದೂ ಸೇರುವದಿಲ್ಲವೆಂದು ತೋರುತ್ತದೆ. ಬಗೆಬಗೆಯ ದೇವರುಗಳಿಗೆ ಬಗೆಬಗೆಯ ರೀತಿಯಿಂದ ಶರಣು ಹೋಗುವ ಬಗೆಬಗೆಯ ಮತಾಂತರಗಳ ಗಡಿಬಿಡಿಯಲ್ಲಿ ಏಕನಿಷ್ಠಾಪ್ರಧಾನವಾದ ವೀರಶೈವ ಮತವು ಸೊರಗುತ್ತಿದ್ದ ಸುಮಾರು ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ಅದಕ್ಕೆ ಚೈತನ್ಯವನ್ನು ತುಂಬಿ ಪರಿಪುಷ್ಟಿಗೊಳಿಸಿ ಎಬ್ಬಿಸಿ ನಿಲ್ಲಿಸಿದಂಥ ವಿಭೂತಿಯ ವಿಚಾರವು ಇಲ್ಲಿ ಮಾಡಲಾಗುವದು. ವಿಜಾಪುರ ಜಿಲ್ಹೆಗೆ ಸೇರಿದ ಬಾಗೇವಾಡಿ ಎಂಬ ಊರಲ್ಲಿ ಮಂಡಿಗೆಯ ಮಾದರಸನೆಂಬ ಶೈವಬ್ರಾಹ್ಮಣನಿದ್ದನು. ಈ ಬ್ರಾಹ್ಮಣರನ್ನು ಆರಾಧ್ಯ ಬ್ರಾಹ್ಮಣರೆಂದೂ ಕರೆಯುವದುಂಟು. ಆತನಿಗೆ ಸರ್ವಲಕ್ಷಣ ಲಕ್ಷಿತೆಯಾದ ಮಾದಲಾಂಬೆ ಎಂಬ ಧರ್ಮಪತ್ನಿಯಿದ್ದಳು. ಈ ದಂಪತಿಗಳು ಶಿವಭಕ್ತಿಪರಾಯಣರಾಗಿ ಶಿವಾರ್ಚನೆಯಲ್ಲಿಯೂ ಶಿವಕಥಾಕಾಲಕ್ಷೇಪದಲ್ಲಿಯೂ ಅತ್ಯಾದರವುಳ್ಳವರಾಗಿದ್ದರು. ಇವರಿಗೆ ಮಕ್ಕಳಿಲ್ಲದ್ದೊಂದು ಚಿಂತೆಯು ಪ್ರಬಲವಾಗಿತ್ತು. ಅದರ ಪರಿಹಾರಕ್ಕಾಗಿ ಆ ಭಕ್ತದಂಪತಿಗಳು ಅಲ್ಲಿದ್ದ ಸಂಗಮೇಶ್ವರನ ದೇವಸ್ಥಾನಕ್ಕೆ ಬಂದು ಷೋಡಶೋಪಚಾರಗಳಿಂದ ಪೂಜೆಯನ್ನು ಮಾಡಿ ಸಂತಾನಾರ್ಥವಾಗಿ ನಂದೀಶ್ವರನಿಗೆ ಹರಿಕೆಯನ್ನು ಹೊತ್ತು ಒಂಭತ್ತು ದಿನ ನಿಯಮದಿಂದ ಶಿವಪೂಜಾವೃತವನ್ನು ಸಾಂಗವಾಗಿ ಮಾಡಿದರು. ಕೊನೆಯ ದಿನ ವಿವಿಧ ಪುಷ್ಪಾಕ್ಷತಾದಿಗಳಿಂದ ಪೂಜೆಯನ್ನು ಮುಗಿಸಿ ಅತ್ಯಂತ ಕುತೂಹಲದಿಂದ ಪ್ರಸಾದವನ್ನು ಬಯಸಿ ಕೈಜೋಡಿಸಿಕೊಂಡು ನಿಂತಿರುವಾಗ ಬಲಗೊಂಬಿನ ಮೇಲಿದ್ದ ಸುಪುಷ್ಪವು ಕೆಳಕ್ಕೆ ಬಿತ್ತು. ನಂದೀಶ್ವರನು ಪ್ರಸನ್ನನಾಗಿ ಪ್ರಸಾದವನ್ನಿತ್ತನೆಂದು ಮಾದರಸನು ಅದನ್ನು ತೆಗೆದುಕೊಂಡು ಮಾದಲಾಂಬೆಗೆ ಕೊಟ್ಟನು. ಮಾದಲಾಂಬೆಯು ಅದನ್ನು

ಭಕ್ತಿಪೂರ್ವಕವಾಗಿ ತಲೆಯಲ್ಲಿ ಧರಿಸಿಕೊಂಡಳು. ಇಬ್ಬರೂ ಆನಂದದಿಂದ ಮನೆಗೆ ಬಂದರು. ಮಾದಲಾಂಬೆಯು ಗರ್ಭಿಣಿಯಾಗಿ ಶಿವಪೂಜೆ, ಶಿವಭಕ್ತಸೇವೆ, ಶಿವಕಥಾಲಾಪ– ಈ ರೂಪವಾದ ಬಯಕೆಗಳನ್ನು ಬಯಸಿದಳು. ನಂದೀಶ್ವರನ ಅನುಗ್ರಹದಿಂದಾದ ಗರ್ಭಕ್ಕೆ ಈ ಬಯಕೆಗಳು ಯೋಗ್ಯವೆಂದು ಮಾದರಸನು ಅವುಗಳನ್ನೆಲ್ಲ ತನ್ನಿಂದಾದಷ್ಟು ಪೂರ್ಣಮಾಡಿದನು. ಗರ್ಭಕಾಲವು ಮುಗಿದ ಮೇಲೆ ಒಂದು ದಿನ ಮಾದಲಾಂಬೆಯು ಶಿವಪೂಜಾವಿಧಿಯನ್ನು ಮುಗಿಸಿ ಶಿವಧ್ಯಾನಪರಾಯಣಳಾಗಿ ಮಲಗಿರಲು ತಾನು ಹಡೆದಿರುವಂತೆಯೂ ಶಿವರೂಪಿಯಾದೊಬ್ಬ ಜಂಗಮನು ಬಂದು ಆ ಶಿಶುವಿಗೆ ಭಸ್ಮಲೇಪನ, ರುದ್ರಾಕ್ಷಧಾರಣ, ಲಿಂಗಬಂಧನ- ಮೊದಲಾದ ಶಿವದೀಕ್ಷಾಕ್ರಿಯೆಗಳನ್ನು ಮಾಡಿದಂತೆಯೂ ಒಂದು ಕನಸಾಯಿತು. ಎಚ್ಚತ್ತು ನೋಡಿದಾಗ ಮಗ್ಗಲಲ್ಲಿ ಮುದ್ದುಮುಖದ ಮಗುವಿತ್ತು. ಪ್ರಸವವೇದನೆಯ ತೊಡಕಿಲ್ಲದೆ ಸುಖಪ್ರಸವವಾದ ಸಮಾಚಾರವನ್ನು ಕೇಳಿ ಮಾದರಸನು ಸಂತೋಷಸೂಚಕವಾಗಿ ಶಿವಪೂಜೆಗಳನ್ನು ಬಲು ವೈಭವದಿಂದ ಮಾಡಿ ವೃಷಭೇಶ್ವರನನುಗ್ರಹದಿಂದಾದ ಆ ಶಿಶುವಿಗೆ ಭಕ್ತಮಂಡಲಿಯ ಸಮ್ಮತಿಯಿಂದ ಬಸವನೆಂದು ನಾಮಕರಣ ಮಾಡಿದನು. ಈ ಬಸವನೇ ಮುಂದೆ ತಾನು ತನ್ನ ಪ್ರತಿಭೆಯಿಂದ ಪಡೆದ ಯಶಸ್ಸಿನಿಂದ ಬಸವೇಶ್ವರನೆಂಬ ಪೂಜ್ಯನಾಮಧೇಯವನ್ನು ಪಡೆದವನು.

## ಉಪನಯನದ ತಿರಸ್ಕಾರ

ಶಿಶುವಿನ ಶೈಶವೋಚಿತವಾದ ಆಟಪಾಟಗಳನ್ನು ನೋಡಿ ಆ ತಾಯಿ-ತಂದೆಗಳು ತಮ್ಮ ಆನಂದವು ಶಿವಸಾಕ್ಷಾತ್ಕಾರದ ಆನಂದಕ್ಕಿಂತ ಒಂದು ಕೈ ಮೇಲಾದದ್ದೆಂದು ಭಾವಿಸುವವರಾದರು. ದಿನದಿನಕ್ಕೆ ನಿರಾತಂಕವಾಗಿ ಬೆಳೆದ ಶಿಶುವು ಚೆನ್ನಾಗಿ ಬಲಿತ ಮೇಲೆ ಮಾದರಸನು ಕುಲಕ್ರಮಾಗತವಾದ ಪದ್ಧತಿಯಂತೆ ಮಗನ ಉಪನಯನವನ್ನು ಮಾಡುವ ಯತ್ನವನ್ನು ನಡೆಸಿದನು. ಬಸವೇಶ್ವರನು ಅದಕ್ಕೆ ಸಮ್ಮತಿಸಲಿಲ್ಲ. ಚಿಕ್ಕಂದಿನಿಂದ ಅವನ ಸ್ವಭಾವವು ಏಕನಿಷ್ಠೆಯದಾಗಿತ್ತು. ಮಾದಲಾಂಬೆಗೆ ಕನಸಾದಂತೆ ಬಸವೇಶ್ವರನು ಶಿವೈಕಪಕ್ಷಪಾತಿಯಾಗಿದ್ದು ನಡೆ-ನುಡಿಗಳಲ್ಲಿಯೂ ಆಟಪಾಟಗಳಲ್ಲಿಯೂ ಅದನ್ನು

ಸ್ಪಷ್ಟವಾಗಿ ತೋರಿಸುತ್ತಿದ್ದನು. ಶಿವೈಕನಿಷ್ಠೆಯನ್ನು ಬೆಳೆಸಿಕೊಳ್ಳುವದರಲ್ಲಿಯೇ ಅವನ ಸಂಪೂರ್ಣ ತಾತ್ಪರ್ಯವಿತ್ತು. ಬ್ರಾಹ್ಮಣರ ಉಪನಯನವು ವಿವಿಧ ದೇವತೋಪಾಸನೆಯನ್ನು ತೊಡಕಿಸಿ ವೇದೋಕ್ತ ಕರ್ಮಮಾರ್ಗದ ಗೊಂದಲದಲ್ಲಿ ಹಾಕುವದೆಂದು ಅವನು ಅದರ ವಿಷಯದಲ್ಲಿ ತಿರಸ್ಕಾರವನ್ನು ತೋರಿಸಿದನು. ಸಂಪ್ರದಾಯವು ವಿಚ್ಛಿತ್ತಿಯಾಗುವದೆಂದು ತಂದೆ-ತಾಯಿಗಳು ಎಷ್ಟೋ ಹೇಳಿದರೂ ತಾನು ಏಕನಿಷ್ಠೆಯ ಉನ್ನತಾವಸ್ಥೆಯಿಂದ ಚ್ಯುತನಾಗಿ ಅಡ್ಡದಾರಿಯನ್ನು ಹಿಡಿಯಲಾರೆನೆಂದು ಹಠವನ್ನು ತೊಟ್ಟು ಆ ಅರ್ಥವನ್ನು ತಂದೆ-ತಾಯಿಗಳಿಗೂ ಮನಗಾಣಿಸಿದನೇ ಹೊರತು ತನ್ನ ಸ್ಥಿರಬುದ್ಧಿಯೆಂಬ ಪರ್ವತಶಿಖರದಿಂದ ಒಂದು ಕೂದಲೆಳೆಯಷ್ಟಾದರೂ ಕದಲಲಿಲ್ಲ. ಏಕನಿಷ್ಠೆಯು ಸರ್ವಶ್ರೇಷ್ಠವೆಂಬ ವಿಷಯವು ಆ ತಂದೆ-ತಾಯಿಗಳಿಗೂ ಸಮ್ಮತವೇ ಆಯಿತು. ಆದ್ದರಿಂದ ಅವರು ಉಪನಯನದ ಗೋಜನ್ನೇ ಬಿಟ್ಟುಬಿಟ್ಟರು. ಬಸವೇಶ್ವರನು ಈ ರೀತಿಯಲ್ಲಿ ತಂದೆ-ತಾಯಿಗಳನ್ನು ಒಪ್ಪಿಸಿ ಕ್ರಿ. ಶ. ೧೧೫೬ ರಲ್ಲಿ ಆ ಊರ ಹೊರಗಿದ್ದ ಸಂಗಮೇಶ್ವರನ ದೇವಾಲಯಕ್ಕೆ ಬಂದು ಅನನ್ಯ ಭಕ್ತಿಯಿಂದ ದೇವರಿಗೆ ಶರಣುಹೋದನು ಆ ಸಮಯದಲ್ಲಿ ಅವನ ಮನಸ್ಸು ತನ್ಮಯವಾಗಿ ತನ್ನೆದುರಿಗೆ ಸಾಕ್ಷಾತ್ಸಂಗಮೇಶ್ವರನು ಪ್ರಸನ್ನನಾಗಿ ನಿಂತು ತಲೆಯ ಮೇಲೆ ಕೈ ಇಟ್ಟು ಶೈವನಿಷ್ಠೆಯನ್ನು ಪ್ರಸಾರ ಮಾಡೆಂದು ಮೃದುಮಧುರೋಕ್ತಿಯಿಂದ ಹೇಳಿದ ಹಾಗೆ ಅನುಭವವನ್ನೂ ಪಡೆಯಿತು. ಆ ಪರಮಾತ್ಮಭಕ್ತಿಯ ಆವೇಶವು ಇಳಿಯುತ್ತಲೇ ಬಸವೇಶ್ವರನು ಕೃತಾರ್ಥನಾದೆನೆಂದು ತಿಳಿದು ಶಿವದೀಕ್ಷಾತತ್ಪರನಾಗಿ ಆದಷ್ಟು ಮಟ್ಟಿಗೆ ಆ ಧರ್ಮವನ್ನು ಪ್ರಸಾರ ಮಾಡುತ್ತ ಹೆಸರು ಪಡೆದನು.

## ವಿವಾಹ

ಈ ಸಮಯದಲ್ಲಿ ಮಾದಲಾಂಬೆಯ ಅಣ್ಣನಾದ ಬಲದೇವನೆಂಬವನು ಹೈದರಾಬಾದ ಸಂಸ್ಥಾನದಲ್ಲಿರುವ ಕಲ್ಯಾಣವೆಂಬ ಪಟ್ಟಣದಲ್ಲಿ ಆಳುತ್ತಿದ್ದ ಬಿಜ್ಜಳನೆಂಬ ಅರಸನ ಮಂತ್ರಿಯಾಗಿದ್ದನು. ಅವನಿಗೆ ಗಂಗಾಂಬಿಕೆ ಎಂಬೊಬ್ಬ ಮಗಳಿದ್ದಳು. ಆಕೆಗೆ ಅನುರೂಪನಾದ ವರನನ್ನು ಹುಡುಕುವ ಸಡಗರದಲ್ಲಿ ಬಸವೇಶ್ವರನ ಖ್ಯಾತಿಯು ಅವನ

ಮನಸ್ಸನ್ನು ಆಕರ್ಷಣೆ ಮಾಡಿತು. ಒಡನೆ ಅವನು ಬಸವೇಶ್ವರನ ಬಳಿಗೆ ಬಂದು ವಿಭೂತಿವೀಳೆಯಗಳನ್ನಿತ್ತು ಅವನನ್ನು ತನ್ನೂರಿಗೆ ಕರೆದುಕೊಂಡು ಬಂದನು. ಬಸವೇಶ್ವರನು ಗಂಗಾಂಬಿಕೆಗೆ ಮೊದಲು ಶಿವದೀಕ್ಷೆಯನ್ನು ಕೊಟ್ಟು ಆಮೇಲೆ ಆಕೆಯನ್ನು ತನ್ನ ಧರ್ಮಪತ್ನಿಯಾಗಿ ಸ್ವೀಕರಿಸಿ ಹಿಂದಿರುಗಿದನು.

## ಮಂತ್ರಿತ್ವ

ಕೆಲವು ದಿವಸಗಳ ಮೇಲೆ ಮಹಾಚತುರಮಂತ್ರಿಯಾಗಿದ್ದ ಆ ಬಲದೇವನು ಕೈಲಾಸ ವಾಸಿಯಾಗಲು ಬಿಜ್ಜಳನಿಗೆ ಒಬ್ಬ ಪ್ರಬಲನಾದ ಮಂತ್ರಿಯ ಅಗತ್ಯವುಂಟಾಯಿತು. ಅಷ್ಟು ಹೊತ್ತಿಗೆ ಬಸವೇಶ್ವರನ ಕೀರ್ತಿಯು ಎಲ್ಲೆಲ್ಲಿಯೂ ಹರಡಿಕೊಳ್ಳುತ್ತಿರಲು ಆತನನ್ನು ನೋಡಿ ತನ್ನ ಮಂತ್ರಿಯಾಗಿ ಮಾಡಿಕೊಳ್ಳಬೇಕೆಂಬ ಕುತೂಹಲವು ಬಿಜ್ಜಳನಿಗೆ ಬಲವಾಯಿತು. ಆಗ ಬಿಜ್ಜಳನು ಬಸವೇಶ್ವರನ ಆಗಮನಕ್ಕಾಗಿ ಆನೆಯನ್ನು ಕೊಟ್ಟು ಸಕಲೋಪಚಾರದೊಡನೆ ಕಳುಹಿಸಿದನು. ಅದರಂತೆ ಬಸವೇಶ್ವರನು ಬಂದನು. ಒಂದು ದಿನ ರಾಜಸಭೆಯಾಯಿತು. ಆಗ ರಾಜನು ತನ್ನ ಕೈಗೆ ಸಿಕ್ಕಿದ್ದ ಒಂದಾನೊಂದು ಪತ್ರವನ್ನು ಓದ ಹೇಳಲು ಆ ಲಿಪಿಯು ಯಾರಿಗೂ ತಿಳಿಯಲೇಇಲ್ಲ. ಆಗ ಬಸವೇಶ್ವರನು ಅದನ್ನು ತಾನು ಓದಿ ಹೇಳುತ್ತೇನೆಂದು ತೆಗೆದುಕೊಂಡು ಒಡನೆ ಓದಿ ಹೇಳಿದನು. ಅದರಲ್ಲಿ ಬಿಜ್ಜಳನ ಸಿಂಹಾಸನದ ಕೆಳಗೆ ನಿಕ್ಷೇಪವಿರುವದೆಂಬ ಅರ್ಥವಿತ್ತು. ಇದನ್ನು ಕೇಳಿದ ಬಿಜ್ಜಳನು ಸಂತುಷ್ಟನಾಗಿ ಆ ಸ್ಥಲವನ್ನು ಅಗಿಸಿ ನೋಡಿದನು. ನಿಕ್ಷೇಪವು ಸಿಕ್ಕಿಯೇ ಸಿಕ್ಕಿತು. ಇದರಿಂದ ಬಸವೇಶ್ವರನ ಯೋಗ್ಯತಾವಿಷಯಕ್ಕೆ ತಲೆದೂಗಿ ಬಿಜ್ಜಳನು ಆತನನ್ನು ತನ್ನ ಮುಖ್ಯಮಂತ್ರಿಯನ್ನಾಗಿ ಮಾಡಿಕೊಂಡನು. ಬಸವೇಶ್ವರನು ಬೆರಳನ್ನು ತೋರಿಸಿದರೆ ಹಸ್ತವನ್ನೇ ನುಂಗುವಂಥ ಒಳ್ಳೇ ಬುದ್ಧಿಶಾಲಿಯೂ ಉತ್ತಮ ರಾಜಕಾರ್ಯಪಟುವೂ ಆಗಿದ್ದದರಿಂದ ತನ್ನ ಪ್ರತಿಭಾವಿಶೇಷದಿಂದ ಪ್ರಜೆಗಳನ್ನೆಲ್ಲ ತನ್ನಂತೆ ಮಾಡಿಕೊಂಡು ಬಿಜ್ಜಳನಿಗಿಂತಲೂ ಹೆಚ್ಚು ಆದರಕ್ಕೆ ಪಾತ್ರನಾದನು. ಈ ರಾಜಕೀಯಾಧಿಕಾರವು ದೊರೆತದ್ದು ಅವನ ಧರ್ಮೋದ್ಧಾರದ ಕೆಲಸಕ್ಕಂತು ಬಹು

ಸಹಾಯವಾಯಿತು. ತನ್ನ ಮಾತಿಗೆ ಬಂದ ಅನ್ಯಾದೃಶವಾದ ಈ ಬೆಲೆಯನ್ನು ಶಿವದೀಕ್ಷಾ ಪ್ರಸರಣಕಾರ್ಯಕ್ಕೆ ಸದುಪಯೋಗಮಾಡಿ ಕೊಂಡನು.

## ಸಿದ್ಧಿಲಾಭ

ಬಸವೇಶ್ವರನು ಈ ರೀತಿಯಲ್ಲಿ ತನ್ನ ಉದ್ಯೋಗವನ್ನು ನಡೆಸಿರುವಾಗ ಅದಕ್ಕೊಂದು ಹೆಚ್ಚಿನ ಬೆಂಬಲವನ್ನು ಕೊಡಬೇಕೆಂದು ಅಲ್ಲಮ ಪ್ರಭುದೇವನೆಂಬ ಒಬ್ಬ ಯೋಗಿಯು ಅಲ್ಲಿಗೆ ಬಂದನು. ಬಸವೇಶ್ವರನು ಅವನನ್ನು ತನ್ನ ಸರ್ವಪ್ರಯತ್ನದಿಂದಲೂ ಸಂತೋಷ ಪಡಿಸಿದನು. ಬಸವೇಶ್ವರನ ಶಿವಭಕ್ತಿಯಿಂದ ಸುಪ್ರೀತನಾದ ಆ ಯೋಗಿಯಿಂದ ಬಸವೇಶ್ವರನಿಗೆ ಬೇಕಾದಷ್ಟು ಸಿದ್ಧಿಗಳು ದೊರೆತವು.

## ಮಹಿಮೆ

ಬಸವೇಶ್ವರನು ತನ್ನ ಮಂತ್ರಿತ್ವದಲ್ಲಿ ರಾಜ್ಯದ ಇತರ ವಿಚಾರಕ್ಕಿಂತಲೂ ಶಿವಭಕ್ತಿಪ್ರಸಾರಕ್ಕೆ ಹೆಚ್ಚು ಪಾಶಸ್ತ್ಯವನ್ನು ಕೊಡುತ್ತಿದ್ದನು. ಇದರಿಂದ ಬಹು ಜನರು ಶಿವದೀಕ್ಷೆಯನ್ನು ತೆಗೆದುಕೊಂಡರು. ಶಿವಭಕ್ತರು ಬಂದರೆಂದರೆ ಅವರ ಯಾವ ಇಷ್ಟಾರ್ಥವನ್ನು ನಡೆಸುವದಕ್ಕೂ ಬಸವೇಶ್ವರನು ಹಿಂದು ಮುಂದು ನೋಡುತ್ತಿರಲಿಲ್ಲ. ಆದ್ದರಿಂದ ಅನೇಕರು ಶಿವಲಾಂಛನಗಳನ್ನು ಧರಿಸಿ ಬಸವೇಶ್ವರನ ಬಳಿಗೆ ಬಂದು ಬೇಕಾದಷ್ಟು ಹಣಗಳನ್ನು ತೆಗೆದುಕೊಂಡು ಹೋಗುತ್ತಿದ್ದರು. ಇದರಿಂದ ತನ್ನ ಭಾಂಡಾರವು ಬರಿದಾಗುವದೆಂದು ಸಂತಪ್ತನಾದ ಬಿಜ್ಜಳನು ಬಸವೇಶ್ವರನ ಮೇಲೆ ಕಣ್ಣು ಕೆಂಪಗೆ ಮಾಡಿಕೊಂಡು ಬಂದು ನೋಡಿದಾಗ ಬಸವೇಶ್ವರನ ಸಿದ್ಧಿಯ ಪ್ರಭಾವದಿಂದ ಭಾಂಡಾರವೆಲ್ಲ ಹಣದಿಂದ ತುಂಬಿಯೇ ಇತ್ತು. ಇದನ್ನು ಕಂಡು ಬಿಜ್ಜಳನು ಬಸವೇಶ್ವರನ ಮಹಿಮೆಗೆ ಬೆರಗಾದನು. ಇಂಥ ಮಹಿಮೆಗಳು ಬಸವೇಶ್ವರನಿಂದ ಲೆಕ್ಕವಿಲ್ಲದಷ್ಟು ನಡೆದಿರುವವು. ಇವುಗಳ ಮೂಲಕ ಬಸವೇಶ್ವರನು ಜನರಿಗೆ ಧರ್ಮಶ್ರದ್ಧೆಯನ್ನು ಹುಟ್ಟಿಸಿ ಶಿವಾಚಾರವನ್ನು ಅಭಿವೃದ್ಧಿ ಮಾಡಿದನು.

## ಮತಪ್ರಾಶಸ್ತ್ಯ

ನಾನಾದೇವರಿಗೆ ಶರಣು ಹೋಗುವದರಿಂದ ಅನನ್ಯಭಕ್ತಿಯು ಸಿದ್ಧಿಸುವದಿಲ್ಲವಾದ್ದರಿಂದ ಶಿವನೊಬ್ಬನನ್ನೇ ತನ್ನ ಸರ್ವಸ್ವವೆಂದು ತಿಳಿದು ಶಿವೋಪಾಸನೆಯನ್ನು ಮಾಡುವ ಶಿವದೀಕ್ಷೆಯನ್ನು ವಹಿಸುವದು ಇದರ ಮುಖ್ಯತತ್ವ. ಬಸವೇಶ್ವರನ ಅಭಿಪ್ರಾಯದ ಲಿಂಗಧಾರಣೆಯಾಯಿತೆಂದರೆ ಆವನ ಪಾಪಗಳೆಲ್ಲ ಧ್ವಂಸವಾಗಿ ಅವನಲ್ಲಿ ಶಿವತೇಜಸ್ಸೇ ಆವಿರ್ಭೂತವಾಗುವದರಿಂದ ವ್ಯವಹಾರದಲ್ಲಿ ಅವನ ಜಾತಿಮತಗಳ ಪ್ರತಿಬಂಧಕವೆಲ್ಲ ಕಳೆದುಹೋಗುವವು. (ಈ ಲಿಂಗವಂತರ ಸಿದ್ಧಾಂತವು ಸಾಮಾನ್ಯವಾಗಿ ಅದ್ವೈತಕ್ಕೆ ಬಹುಘಟ್ಟಿಗೆ ಹೋಲುವದಾದರೂ ಶಿವರೂಪವಾದ ಸಗುಣಬ್ರಹ್ಮ ಒಂದೇ ಇವರ ಉಪಾಸ್ಯದೇವತೆ.) ಈ ಮತಕ್ಕೆ ವೀರಶೈವಮತವೆಂಬ ಹೆಸರು. ಬಸವೇಶ್ವರನು ಹೊಸದಾಗಿ ಈ ಮತವನ್ನೇನೂ ಕಂಡುಹಿಡಿಯಲಿಲ್ಲ. ಅನಾದಿಯಾಗಿದ್ದು ಖಿಲವಾಗುತ್ತಿದ್ದದ್ದನ್ನು ತನ್ನ ಪ್ರಯತ್ನದಿಂದ ಊರ್ಜಿತಸ್ಥಿತಿಗೆ ತಂದನು. ಬಸವೇಶ್ವರನ ಕಾಲದಲ್ಲಿ ಬ್ರಾಹ್ಮಣ, ಜೈನ ಬೌದ್ಧ–ಈ ಮತಗಳಿಗೆಲ್ಲ ತಲೆನೋವಾಗಿ ಅನೇಕರು ಬಂದು ಈ ಪಂಥವನ್ನು ಹಿಡಿದರು. ತನ್ನ ಪಂಥದಲ್ಲಿ ಜನರಿಗೆ ಏಕನಿಷ್ಠೆಯುಂಟಾಗುವದಕ್ಕಾಗಿ ಬಸವೇಶ್ವರನು ಉಳಿದ ಎಲ್ಲಾ ಪಂಥಗಳನ್ನೂ ಅತ್ಯಂತತುಚ್ಛವಾಗಿ ಕಂಡಿರುವನು.

## ಮಂತ್ರಿತ್ವವನ್ನು ಬಿಟ್ಟದ್ದು

ಬಿಜ್ಜಳನು ಜೈನಮತದವನಾಗಿದ್ದನು. ಬಸವೇಶ್ವರನು ಅನೇಕ ಜನರಿಗೆ ಲಿಂಗಧಾರಣೆಮಾಡಿ ಶಿವದೀಕ್ಷೆಗೊಟ್ಟು ತನ್ನ ಪಂಥವನ್ನು ಬೆಳೆಸಿದ್ದು ಬಿಜ್ಜಳನ ಕ್ರೋಧಕ್ಕೆ ಕಾರಣವಾಯಿತು. ಬಸವೇಶ್ವರನ ದರ್ಪವು ಬಿಗಿಯಾಗಿದ್ದದರಿಂದ ಬಿಜ್ಜಳನು ಅವನನ್ನು ಅಲ್ಲಾಡಿಸುವದಕ್ಕಾಗಲಿಲ್ಲ. ಎಷ್ಟೋ ವೇಳೆ ಪ್ರಯತ್ನಿಸಿದರೂ ಬಿಜ್ಜಳನ ಆಟವೇನೂ ಬಸವೇಶ್ವರನ ಮುಂದೆ ಸಾಗಲಿಲ್ಲ. ಇಷ್ಟೇ ಅಲ್ಲ; ಎಷ್ಟೋ ವೇಳೆ ರಾಜಕಾರ್ಯದಲ್ಲಿಯೂ ಬಿಜ್ಜಳನ ಮಾತು ಹೆಚ್ಚಾಗಿ ನಡೆಯುತ್ತಿರಲಿಲ್ಲ. ಅಲ್ಲಯ್ಯ, ಮಧುವಯ್ಯ,-ಎಂಬಿಬ್ಬರು ಶಿವಭಕ್ತರು ಯಾವಾಗಲೂ ಬಸವೇಶ್ವರನ ಮನೆಯಲ್ಲಿ ಶಿವಾನುಭವಪ್ರಸಂಗದಲ್ಲಿ ಸಲಿಗೆಯಿಂದ

ಸೇರುತ್ತ ತಮ್ಮ ಪ್ರತಿಷ್ಠೆಯನ್ನು ಬೆಳೆಸಿಕೊಂಡಿದ್ದರು. ಅವರ ಉಬ್ಬಟೆಯನ್ನು ನಿಲ್ಲಿಸೆಂದು ಬಿಜ್ಜಳನು ಬಸವೇಶ್ವರನಿಗೆ ಹೇಳಿದನು. ಶಿವಭಕ್ತರೆಂದರೆ ತಪ್ಪು ಮಾಡಿದರೆ ಕೂಡ ಕ್ಷಮಿಸುವ ಬಸವೇಶ್ವರನು ಆ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಬಿಜ್ಜಳನು ತಾನೇ ಆ ಇಬ್ಬರು ಭಕ್ತರನ್ನು ಕರೆಸಿ ಅವರ ಕಣ್ಣುಗಳನ್ನು ಕೀಳಿಸಿದನು. ಈ ಸುದ್ದಿಯನ್ನು ಕೇಳುತ್ತಲೆ ಬಸವೇಶ್ವರನು ಈ ಶಿವಭಕ್ತದ್ವೇಷಿಯ ರಾಜ್ಯದಲ್ಲಿರತಕ್ಕದ್ದಲ್ಲವೆಂದು ಆ ತನ್ನ ಮಂತ್ರಿತ್ವಕ್ಕೆ ಶರಣುಹೊಡೆದು ಹೊರಟುಬಿಟ್ಟನು.

## ಬಿಜ್ಜಳನ ವಧೆ

ಒಮ್ಮೆ ಜಗದೇವನೆಂಬವನು ಬಸವೇಶ್ವರನಿಗೆ ಊಟಕ್ಕೆ ಹೇಳಿದ್ದು ಮೊದಲು ಶಿವಾಚಾರಮತದಂತೆ ಭವಿಗಳೆಂದೆನಿಸಿಕೊಳ್ಳುವ ಬ್ರಾಹ್ಮಣರನ್ನು ಕರೆದು ಸತ್ಕಾರ ಮಾಡಿಬಿಟ್ಟಿದ್ದನು. ಇದನ್ನು ತಿಳಿದು ಬಸವೇಶ್ವರನು ಊಟಕ್ಕೆ ಬರದಿದ್ದದರಿಂದ ಪಶ್ಚಾತ್ತಾಪ ಉಂಟಾಗಿ ಜಗದೇವನು ಈ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಹೇಳಬೇಕೆಂದು ಬಸವೇಶ್ವರನಿಗೆ ಶರಣು ಹೋದನು. ಒಬ್ಬ ಶಿವದ್ರೋಹಿಯನ್ನು ಕೊಂದರೆ ನಿನಗೆ ಅದರ ದೋಷವು ಹೋಗುವದೆಂದು ಬಸವೇಶ್ವರನು ಹೇಳಿದನು. ಈಗ ಬಿಜ್ಜಳನ ಶಿವದ್ರೋಹವು ಜನಜನಿತವಾಗಿತ್ತು. ಆದ್ದರಿಂದ ಜಗದೇವನು ಇನ್ನಿಬ್ಬರು ಸಹಾಯಕರೊಡನೆ ಬಿಜ್ಜಳನ ಮನೆಗೆ ನುಗ್ಗಿ ಅವನನ್ನು ಇರಿದು ಕೊಂದನು.

## ಶಿವೈಕ್ಯ

ಈ ರೀತಿಯಲ್ಲಿ ಚಿಕ್ಕಂದಿನಿಂದಲೂ ಏಕನಿಷ್ಠೆಯಲ್ಲಿದ್ದು ಮಂತ್ರಿತ್ವದ ಮೂಲಕ ವ್ಯವಹಾರಚಾತುರ್ಯದಲ್ಲಿಯೂ ಧರ್ಮಾಭಿಮಾನದಮೂಲಕ ಪರಮಾರ್ಥವಿಚಾರದಲ್ಲಿಯೂ ತನ್ನ ಪ್ರತಿಭೆಯನ್ನು ಪ್ರಕಾಶಮಾಡಿ ವೀರಶೈವಮತವನ್ನುದ್ಧಾರಮಾಡಿದ ಬಸವೇಶ್ವರನು ಕೊನೆಗೆ ಶಿವೈಕ್ಯ ಸುಖಾನುಭವದಲ್ಲಿ ತನ್ನ ಆಯುಷ್ಯವನ್ನು ಮುಗಿಸಿದನು.

---

# ಶ್ರೀಮಧ್ವಾಚಾರ್ಯರು

## ಹುಟ್ಟು

ನಮ್ಮ ಭರತಖಂಡವು ಧಾರ್ಮಿಕ ವಿಭೂತಿವಿಶೇಷಗಳ ತವರು ಮನೆ. ಶ್ರೀಶಂಕರಾಚಾರ್ಯರು, ಶ್ರೀರಾಮಾನುಜಾಚಾರ್ಯರೇ ಮೊದಲಾದವರು ತಮ್ಮ ತಮ್ಮ ಪ್ರತಿಭೆಗಳಿಂದ ಬೆಳಗಿದ್ದ ಭರತಖಂಡದಲ್ಲಿ ಮತ್ತೊಂದು ದಿವ್ಯಜ್ಯೋತಿಯುತ್ಪನ್ನವಾಯಿತು. ಅದರ ವಿಚಾರವನ್ನು ಈ ಲೇಖನವು ತಿಳಿಸುವದು. ಪ್ರಸಿದ್ಧ ಕ್ಷೇತ್ರವಾದ ಉಡುಪಿಯ ಹತ್ತಿರವಿರುವ ಶಿವನಹಳ್ಳಿ ಎಂಬ ಗ್ರಾಮದಲ್ಲಿ ಮಧ್ಯಗೇಹ ಭಟ್ಟನೆಂಬ ಒಬ್ಬ ಸ್ಮಾರ್ತಬ್ರಾಹ್ಮಣನಿದ್ದನು. ಈತನನ್ನು ನಡುಮನೆಯಭಟ್ಟನೆಂದು ಕೆಲವರು ಕರೆಯುವರು. ಅಂತೂ ಹೆಸರಿನ ಮುಂದೆ "ಭಟ್ಟ" ಎಂದಿರುವದನ್ನು ನೋಡಿದರೆ ಈತನು ವೈದಿಕ ವಿದ್ಯಾಸಂಪನ್ನನಾಗಿದ್ದನೆಂದು ಸ್ಪಷ್ಟವಾಗುತ್ತದೆ. ಈ ಪ್ರಾಂತದ ಬ್ರಾಹ್ಮಣರು ವಿಶೇಷವಾಗಿ ಕರ್ಮಮಾರ್ಗದಲ್ಲಿ ಪ್ರಸಿದ್ಧಿಹೊಂದಿದ ಕುಮಾರಿಲಭಟ್ಟರ ಪರಂಪರೆಯವರಾದ್ದರಿಂದಲೂ ಈ ಹೆಸರು ಬಂದಿರಬಹುದು. ಇನ್ನು ಮಧ್ಯಗೇಹ ಅಥವಾ ನಡುಮನೆ ಎಂಬಿವುಗಳು ಕೂಡ ಈತನ ನಿಜವಾದ ಹೆಸರಲ್ಲ; ಈತನು ಒಳ್ಳೇ ಶ್ರೋತ್ರಿಯನೂ ಭಕ್ತಿವಂತನೂ ಆಗಿದ್ದು ವಿಶೇಷವಾಗಿ ವ್ಯವಹಾರದಲ್ಲಿ ನುಗ್ಗದೆ ಅನುಷ್ಠಾನಪರನಾಗಿ ಮನೆಯಲ್ಲಿಯೇ ಇರುತ್ತಿದ್ದದರಿಂದ ಬಂದ ಅಡ್ಡ ಹೆಸರು. ಈತನ ನಿಜವಾದ ಹೆಸರೇನೆಂಬುವದು ತಿಳಿದಿಲ್ಲ. ಮಧ್ಯಗೇಹಭಟ್ಟನೆಂದು ಅಡ್ಡ ಹೆಸರಾಗುವಷ್ಟು ಅನುಷ್ಠಾನತತ್ಪರನಾಗಿರಬೇಕಾದರೆ ಈತನ ಸಾತ್ವಿಕ ಸಂಪತ್ತೆಷ್ಟಿರಬಹುದೆಂದು ವಾಚಕರೇ ಊಹಿಸಬೇಕು. ಈ ಸತ್ಕರ್ಮ ಶ್ರದ್ಧೆಯ ಜೊತೆಗೆ ಈತನಿಗೆ ಶಾಸ್ತ್ರಜ್ಞಾನವೂ ಚೆನ್ನಾಗಿತ್ತು. ಆಸ್ತಿಕ್ಯಾತಿಶಯದಿಂದ ಈತನಿಗೆ ಕ್ಷೇತ್ರವಾಸ ಮಾಡಬೇಕೆಂಬ ಇಚ್ಛೆಯುಂಟಾಗಿ ಈತನು ಪಾಜಕವೆಂಬ ಕ್ಷೇತ್ರವನ್ನು ಸೇರಿ ಅಲ್ಲಿ ತನಗನುರೂಪಳಾದ ವೇದವತಿಯೆಂಬ ಧರ್ಮಪತ್ನಿಯನ್ನು ಹೊಂದಿ ಪುರಾಣ

ಮೊದಲಾದ ಸತ್ಕಾಲಕ್ಷೇಪದಲ್ಲಿದ್ದನು. ಈ ದಂಪತಿಗಳು ತಮ್ಮನ್ನು ಭವಸಮುದ್ರದಿಂದ ಪಾರುಮಾಡಬಲ್ಲಂಥ ಸತ್ಸಂತತಿಯಾಗಬೇಕೆಂದು ಹನ್ನೆರಡು ವರ್ಷ ನಿರಂತರವಾಗಿ ಕಠಿಣ ನಿಯಮಗಳನ್ನು ಸಾಧಿಸುತ್ತ, ಅಲ್ಲಿ ತಮ್ಮ ಕುಲಸ್ವಾಮಿಯಾದ ಅನಂತೇಶ್ವರನನ್ನು ಸೇವೆ ಮಾಡಿದರು. ಅದರ ಫಲವಾಗಿ ಕ್ರಿ. ಶ. ೧೧೯೯ ರಲ್ಲಿ ಈ ದಂಪತಿಗಳ ಪವಿತ್ರ ಗರ್ಭ ದಿಂದ ವಿಜಯದಶಮಿಯ ದಿವಸ ದಿವ್ಯ ತೇಜಸ್ಸುಳ್ಳ ಒಂದು ಕೂಸು ಉತ್ಪನ್ನವಾಯಿತು. ಭಟ್ಟನು ಅತ್ಯಾನಂದದಿಂದ ತನ್ನ ಮುದ್ದು ಕೂಸಿಗೆ ವಾಸುದೇವನೆಂದು ನಾಮಕರಣ ಮಾಡಿದನು.

## ಬಾಲ್ಯ

ವಾಸುದೇವನು ತುಂಬುವೈಯ್ಯವನಾಗಿಯೂ ಒಳ್ಳೇ ತೇಜಸ್ವಿ ಯಾಗಿಯೂ ಉತ್ಕೃಷ್ಟ ಬಲಶಾಲಿಯಾಗಿಯೂ ಇದ್ದನು ತನ್ನ ಜೊತೆ ಯವರನ್ನು ಆಟಪಾಟಗಳಲ್ಲಿ ಸೋಲಿಸುವದರಲ್ಲಿ ಇವನಿಗೆ ತುಂಬ ಲವಲವಿಕೆ ಇತ್ತು. ಆಮೇಲೆ ಉಕ್ತಕಾಲದಲ್ಲಿ ಉತ್ತಮ ಮುಹೂರ್ತ ದಲ್ಲಿ ಅಕ್ಷರಾಭ್ಯಾಸವಾರಂಭವಾಯಿತು. ಆದರೆ ಹುಡುಗನ ಲಕ್ಷ್ಯವು ಆಟದ ಮೇಲಿದ್ದ ಹಾಗೆ ಪಾಠದ ಮೇಲೆ ಇರುತ್ತಲೇ ಇರಲಿಲ್ಲ. ಅದರ ಆಗತ್ಯವೂ ಆವನಿಗಿರಲಿಲ್ಲ. ಭಟ್ಟನು ಒಂದು ಸಲ ಹೇಳುತ್ತಲೇ ಅದು ವಾಸುದೇವನಿಗೆ ಹಳೇ ಪಾಠವು ನೆನಪಾದಂತೆ ಆಗಿ ಬಹು ಸ್ವಲ್ಪ ಕಾಲ ದಲ್ಲಿಯೇ ವಾಸುದೇವನು ಬೇಕಾದ ಹಾಗೆ ಓದುವದರಲ್ಲಿಯೂ ಬರೆಯು ವದರಲ್ಲಿಯೂ ಪಾರಂಗತನಾದನು. ವಾಸುದೇವನ ಜ್ಞಾಪಕಶಕ್ತಿಯು ಅತ್ಯದ್ಭುತವಾಗಿತ್ತು. ಒಮ್ಮೆ ಒಂದು ವಿಷಯವು ಕಿವಿಯೊಳಗೆ ಬಿತ್ತೆಂದರೆ ಅದು ಹೃದಯದಲ್ಲಿ ಊರಿ ಬೇರುಬಿಟ್ಟುಕೊಂಡೇ ಬಿಡುತ್ತಿತ್ತು. ಹೀಗಾಗಿ ಪುರಾಣ ಮೊದಲಾದವುಗಳ ಮೂಲಕ ಕೇಳಿಕೇಳಿಯೇ ಪಡೆದು ಕೊಂಡ ಜ್ಞಾನದಿಂದಲೇ ವಾಸುದೇವನು ಒಮ್ಮೊಮ್ಮೆ ಪುರಾಣ ಕಾಲದಲ್ಲಿ ತನ್ನ ತಂದೆಗೆ ಕೂಡ ಎಷ್ಟೋ ವಿಷಯಗಳನ್ನು ನೆನಪು ಮಾಡಿಕೊಡುತ್ತಿ ದ್ದನು. ಹೀಗಿರುವಾಗ ಸಕಾಲದಲ್ಲಿ ಉಪನಯನವೂ ಆಯಿತು. ಕೊನೆ ಕೊನೆಗೆ ವಾಸುದೇವನ ಪ್ರತಿಭೆಯು ಆ ವೇದಾರ್ಥೋಪದೇಶಕನಿಗೂ ಕೂಡ ತಿಳಿಯದ ಅರ್ಥಗಳನ್ನು ತಿಳಿಸುವಷ್ಟು ಮೇಲ್ಮೆಯನ್ನು ಪಡೆಯಿತು.

## ಸನ್ಯಾಸ ಸ್ವೀಕಾರ

ಈಶ್ವರ ಪ್ರಸಾದದಿಂದ ಹುಟ್ಟಿ ತೀಕ್ಷ್ಣಬುದ್ಧಿಯನ್ನು ಹೊಂದಿದ್ದ ವಾಸುದೇವನಿಗೆ ದಿನದಿನಕ್ಕೆ ಜನಮಂಡಲಿಯ ಧಾರ್ಮಿಕ ಪರಿಸ್ಥಿತಿಯ ಮೇಲೆ ಕಣ್ಣು ಬಿತ್ತು. ತಾನೇ ಬ್ರಹ್ಮವೆಂಬ ಅದ್ವೈತಿಗಳೊಂದು ಕಡೆ, ದೇವರೇ ಇಲ್ಲವೆಂಬ ಶೂನ್ಯವಾದಿಗಳೊಂದು ಕಡೆ– ಹೀಗಾಗಿ ಜನರಲ್ಲಿ ಭಕ್ತಿಭಾವನೆಯ ಹೆಸರೇ ಅಳಿದು ಹೋಗಿರುವದನ್ನು ನೋಡಿ ದಯಾಳುಯನಾದ ವಾಸುದೇವನಿಗೆ ಮನಸ್ಸು ಕರಗಿ ನೀರಾಗಿ ಹರಿಯಿತು. ದೇವರೇ ಇಲ್ಲವೆಂಬ ಶೂನ್ಯವಾದದಿಂದಲಂತೂ ಸರ್ವ ನಾಶವಾಗುವದು. ತಾನೇ ಬ್ರಹ್ಮನೆಂದೂ ಜಗತ್ತು ಇಲ್ಲವೇ ಇಲ್ಲವೆಂದೂ ಸಗುಣಕ್ಕೆ ಸೊನ್ನೆ ಸುತ್ತುವ ಅದ್ವೈತವಾದವು ವಾಸುದೇವನ ಅನುಭವದಲ್ಲಿ ನೀತಿಮರ್ಯಾದೆಯನ್ನು ಪಾಲಿಸಲಾರದಂಥ ಅಲೌಕಿಕ ಮಾರ್ಗವೆನಿಸಿತು. ಇದು ಅವನಿಗೆ ಸಹನವಾಗಲಿಲ್ಲ. ಆದ್ದರಿಂದ ಇದಕ್ಕೆ ಪರಿಹಾರವೇನೆಂದು ಯೋಚಿಸಿ ವಾಸುದೇವನು ಆ ಕೊರತೆಗಳನ್ನು ಹೋಗಲಾಡಿಸುವದಕ್ಕೆ ತಾನೇ ದೀಕ್ಷೆಯನ್ನು ವಹಿಸಬೇಕೆಂದು ದೃಢಸಂಕಲ್ಪ ಮಾಡಿ ಯಾರಿಗೂ ಹೇಳದೆ ಸನ್ಯಾಸಾಶ್ರಮ ಸ್ವೀಕಾರಕ್ಕಾಗಿ ಸದ್ಗುರುವನ್ನು ಹುಡುಕಿಕೊಂಡು ಬರುವದಕ್ಕೆ ಮನೆಯಿಂದ ಹೊರಟೇ ಹೊರಟನು. ಹದಿನಾರು ವರ್ಷದ ಹುಡುಗನು ಸರ್ವಪ್ರಾಪಂಚಿಕ ಸೌಖ್ಯಗಳನ್ನೂ ತುಚ್ಛವಾಗಿ ಕಂಡು ತನಗೆ ತಕ್ಕ ಗುರುಗಳನ್ನು ಹುಡುಕುವಾಗ ದೈವಯೋಗದಿಂದ ಇವನಿಗೆ ಉಡುಪಿಯಲ್ಲಿ ಅಚ್ಯುತಪ್ರೇಕ್ಷರೆಂಬ ಮಹಾನುಭಾವರ ಸಮಾಗಮವಾಯಿತು. ಅಚ್ಯುತಪ್ರೇಕ್ಷರು ಅದ್ವೈತಪಕ್ಷದವರಾಗಿದ್ದರೂ ಅದರಲ್ಲಿ ಅವರ ನಂಬಿಕೆಯು ತೂಗಾಡುತ್ತಿದ್ದುದರಿಂದ ಅವರಿಗೆ ಅದರ ತೂಕವನ್ನು ಮಾಡಿ ಹೇಳಬಲ್ಲ ಒಬ್ಬ ಪ್ರತಿಭಾಶಾಲಿಯ ಸಮಾಗಮವು ಬೇಕಾಗಿತ್ತು. ವಾಸುದೇವನು ಬರುತ್ತಲೇ ತಕ್ಕ ಶಿಷ್ಯನು ಸಿಕ್ಕಿದನೆಂದು ಗುರುವಿಗೆ ಸಂತೋಷವಾಯಿತು. ಇಷ್ಟರಲ್ಲಿ ಮಗನನ್ನು ಕಾಣದೆ ಪರಿತಾಪಗೊಂಡ ಭಟ್ಟನು ಹುಡುಕಿಕೊಂಡು ಬಂದು ಮಗನ ಮನಸ್ಸನ್ನು ತಿರುಗಿಸುವದಕ್ಕೆ ಸರ್ವ ಸಾಹಸವನ್ನೂ ಮಾಡಿದನು. ಆಗ ತಂದೆಗೆ ಪ್ರತಿಯಾಗಿ ಹೇಳುವದಕ್ಕೆ ವಾಸುದೇವನಿಗೂ ಕಷ್ಟವಾಯಿತು. ಆದ್ದರಿಂದ ಇನ್ನೊಬ್ಬ ಪುತ್ರನಾಗುವವರೆಗೆ

ತಾನು ಸನ್ಯಾಸಿಯಾಗುವದಿಲ್ಲವೆಂಬಿಷ್ಟು ಮಾತ್ರದಿಂದ ತಂದೆಯನ್ನು ಸಮಾಧಾನಗೊಳಿಸಿ ಕಳುಹಿಸಿ ವಾಸುದೇವನು ತನ್ನ ವಿದ್ಯಾವ್ಯಾಸಂಗ ವನ್ನು ಅವಿಚ್ಛಿನ್ನವಾಗಿ ನಡೆಸಿದನು. ಈ ಸಮಯದಲ್ಲಿ ಅದ್ವೈತಾರ್ಥವು ವಾಸುದೇವನ ಮನಸ್ಸಿಗೆ ಎಷ್ಟು ಮಾತ್ರವೂ ಬರುತ್ತಿರಲಿಲ್ಲ. ಇವನು ಮಾಡುವ ಪೂರ್ವಪಕ್ಷ ಪರಂಪರೆಗಳಿಗೆ ಸಮಾಧಾನಗೊಳಿಸಲಾರದೆ ಅಚ್ಯುತಪ್ರೇಕ್ಷರು ಹಿಂದುಮುಂದು ನೋಡಬೇಕಾಗಿತ್ತು. ಇಲ್ಲಿ ಹೀಗೆ ನಡೆಯುತ್ತಿರುವಾಗ ಅತ್ತ ವಾಸುದೇವನು ಸಿದ್ಧಸಂಕಲ್ಪನೆಂದು ತೋರಿ ಸುವಂತೆ ಸ್ವಲ್ಪ ದಿವಸಗಳಲ್ಲಿಯೇ ಭಟ್ಟನಿಗೆ ದ್ವಿತೀಯ ಪುತ್ರ ಲಾಭ ವಾಯಿತು. ಒಡನೆ ವಾಸುದೇವನು ಮಾತಾಪಿತೃಗಳ ಬಳಿಗೆ ಬಂದು ಇನ್ನು ತನಗೆ ಸನ್ಯಾಸಕ್ಕೆ ಆಜ್ಞೆಯನ್ನು ಕೊಡಬೇಕೆಂತಲೂ ಇಲ್ಲದಿದ್ದರೆ ತನ್ನ ಮುಖದರ್ಶನವು ಅವರಿಗೆ ದೊರೆಯದೆಂತಲೂ ಹೇಳಿದ್ದರ ಮೇಲೆ ಅವರು ಸುಮ್ಮನಾಗುವದರ ಮೂಲಕ ಅರ್ಧಾಂಗೀಕಾರವನ್ನು ತೋರಿಸ ಬೇಕಾಯಿತು. ಈ ಸಮಯದ ಸದುಪಯೋಗವನ್ನು ಮಾಡಿಕೊಂಡು ವಾಸುದೇವನು ಅಚ್ಯುತಪ್ರೇಕ್ಷರಿಂದ ಚತುರ್ಥಾಶ್ರಮವನ್ನು ಪಡೆದು ಪೂರ್ಣಪ್ರಜ್ಞ ನಾಮಧೇಯವನ್ನು ಹೊಂದಿದನು.

## ಪೀಠಾರೋಹಣ

ಪೂರ್ಣಪ್ರಜ್ಞರ ತಿರುಳನ್ನು ನೋಡಬೇಕೆಂದು ಎಷ್ಟೋ ಕಡೆ ಗಳಿಂದ ಎಷ್ಟೆಷ್ಟೋ ದೊಡ್ಡ ದೊಡ್ಡ ವಿದ್ವಾಂಸರೆನಿಸಿಕೊಂಡವರು ಬಂದು ವಾದಮಾಡಿ ಸೋತು ಹೋಗುವದಕ್ಕಾರಂಭವಾಯಿತು. ಇವರು ಅರ್ಥವನ್ನು ಸಮಂಜಸವಾಗಿ ಮಾಡಿ ತೋರಿಸುವ ಹದವನ್ನು ನೋಡಿ ಎಲ್ಲರೂ ಮೂಗಿನ ಮೇಲೆ ಬೆರಳಿಟ್ಟುಕೊಂಡರು. ಹೀಗೆ ಒಂದೆರಡು ವರ್ಷಗಳಾಗುತ್ತಲೇ ತಮ್ಮ ಗುರುಪೀಠಕ್ಕೆ ಅರ್ಹರೆಂದು ಅಚ್ಯುತ ಪ್ರೇಕ್ಷರು ವೇದವಿಧಿಪ್ರಕಾರವಾಗಿ ಪೂರ್ಣಪ್ರಜ್ಞರಿಗೆ ಪಟ್ಟವನ್ನು ಕಟ್ಟಿ ಆನಂದತೀರ್ಥರೆಂದು ಹೆಸರಿಟ್ಟರು. ಇವರೇ ಶ್ರೀಮಧ್ವಾಚಾರ್ಯರೆಂದು ಪ್ರಸಿದ್ಧರಾದರು.

## ಸ್ವಮತೋದ್ಧಾರ

ಆಚಾರ್ಯರ ಯಶೋದುಂದುಭಿಯ ಧ್ವನಿಯು ನಾಲ್ಕು ದಿಕ್ಕು ಗಳಲ್ಲಿಯೂ ಮೊಳಗುತ್ತಲೇ ಪರಮತಸ್ಥರು ತಮ್ಮ ಪ್ರತಿಷ್ಠೆಯನ್ನು

ಳಿಸಿಕೊಳ್ಳುವದಕ್ಕೆ ಅವರ ಬಳಿಗೆ ಬರುವದಕ್ಕೆ ಮೊದಲುಮಾಡಿದರು. ಅದ್ವೈತಮತದವರು ಬಂದು ಜೀವಾತ್ಮನಿಗೂ ಪರಮಾತ್ಮನಿಗೂ ಅಭೇದವನ್ನು ಸಾಧನೆಮಾಡುವದಕ್ಕೂ ಜಗತ್ತಿನ ಮಿಥ್ಯಾತ್ವವನ್ನು ದೃಢಗೊಳಿಸುವದಕ್ಕೂ ಪ್ರಯತ್ನಮಾಡಿದರು ಬೌದ್ಧರು ಬಂದು ತಮ್ಮ ಪುರಾಣಗಳನ್ನು ಬಿಚ್ಚಿನೋಡಿದರು. ಆಚಾರ್ಯರು ಅವುಗಳನ್ನು ಹಾಯಗೊಡಲಿಲ್ಲ. ಆಚಾರ್ಯರು ತಮ್ಮ ಶಿಷ್ಯರಿಗೆ ಪಾಠವನ್ನು ಹೇಳುವಾಗ ಶಾಂಕರಮತದ ತಾತ್ಪರ್ಯವನ್ನು ಖಂಡನೆಮಾಡುವದರಲ್ಲಿ ವಿದ್ಯಾರ್ಥಿಗಳನ್ನು ಸ್ತಂಭೀಭೂತರನ್ನಾಗಿ ಮಾಡಿ ಜೀವೇಶ್ವರರ ಭೇದ ವನ್ನೂ ಪ್ರಪಂಚದ ಸತ್ಯತ್ವವನ್ನೂ ಸಾಧಿಸುತ್ತಿದ್ದರು. ಈ ರೀತಿಯಲ್ಲಿ ಅನೇಕರ ಚಿತ್ತವೃತ್ತಿಯನ್ನು ವಶಮಾಡಿಕೊಂಡು ಅವರಿಗೆಲ್ಲ ತಾವೇ ಸಾಕ್ಷಾತ್ತಾಗಿ ಮುದ್ರಾಧಾರಣೆಯನ್ನು ಮಾಡಿ ತಮ್ಮ ದ್ವೈತಪಂಥವನ್ನು ವಿಸ್ತಾರಮಾಡಿದರು.

## ದಿಗ್ವಿಜಯ

ಆಚಾರ್ಯರು ತಮ್ಮ ಸಿದ್ಧಾಂತವನ್ನು ಹರಡಿ ಜನರಿಗೆ ದ್ವೈತ ಭಕ್ತಿಯನ್ನು ಉಪದೇಶ ಮಾಡಬೇಕೆಂದು ಅನಂತಪುರ, ಕನ್ಯಾಕುಮಾರಿ, ರಾಮೇಶ್ವರ, ಶ್ರೀರಂಗ, ಮಧುರೆ, ವಿಷ್ಣುಮಂಗಲ ಮೊದಲಾದ ಸ್ಥಲ ಗಳಲ್ಲೆಲ್ಲಾ ಸಂಚಾರ ಮಾಡಿ ತಮ್ಮ ವಾಗ್ವೈಖರಿಯಿಂದ ಮಹಾ ಮಹಾವಿದ್ವಾಂಸರೆನಿಸಿಕೊಂಡವರ ಬಾಯಿ ಕಟ್ಟಿದರು. ಅನಂತಶಯನ ದಲ್ಲಿ ರಾಜನೆದುರಿಗೆ ಆಚಾರ್ಯರು ಒಬ್ಬ ಶಂಕರಮತಾನುಯಾಯಿ ಗಳಾದ ಸ್ವಾಮಿಗಳೊಡನೆ ಬಲವಾಗಿ ವಾದಮಾಡಿದರು. ಬ್ರಹ್ಮಸೂತ್ರಕ್ಕೆ ಆ ಅರ್ಥವನ್ನು ಸಮಂಜಸವಾಗಿ ಮಾಡಿ ಭಾಷ್ಯವನ್ನು ರಚಿಸಿದ ಮೇಲೆ ನೋಡಬಹುದೆಂದು ಆ ಸ್ಮಾರ್ತಸ್ವಾಮಿಗಳು ಹೇಳಲು ಆಚಾರ್ಯರು ಅದನ್ನು ಮಾಡಲುದ್ದೇಶ ಮಾಡಿದರು ಮತ್ತು ಶ್ರುತಿಗೆ ಮೂರರ್ಥ ವನ್ನೂ ಮಹಾಭಾರತಕ್ಕೆ ಹತ್ತರ್ಥವನ್ನೂ ವಿಷ್ಣುಸಹಸ್ರನಾಮಕ್ಕೆ ಸಾವಿರ ಅರ್ಥವನ್ನೂ ಕಲ್ಪಿಸಬಹುದೆಂದು ತಮ್ಮ ಪ್ರೌಢಿಮೆಯನ್ನು ತೋರಿಸಿ ಎಲ್ಲರನ್ನೂ ಬೆರಗು ಮಾಡಿದರು. ಆ ವಿಚಾರವು ನಡೆದ ಪಯಸ್ವಿನೀ ನದಿಯ ದಡದಲ್ಲಿ ಈಗಲೂ ಅವರದೊಂದು ಜಯಸ್ತಂಭ ವಿದ್ದು ಅದು ಮರಳಿನಲ್ಲಿ ಹೂತುಕೊಂಡಿರುವದು. ಅನೇಕರು ಈಗಲೂ

ಅದರ ದರ್ಶನಕ್ಕೆ ಹೋಗಿ ಬರುತ್ತಿರುತ್ತಾರೆ. ಅಲ್ಲಿಂದ ಉಡುಪಿಗೆ ಬರುವಾಗ ದಾರಿಯಲ್ಲಿ ಕಲ್ಯಾಣದಲ್ಲಿ ಶೋಭನಭಟ್ಟನೆಂಬ ಅದ್ವೈತಿಯನ್ನು ತಮ್ಮ ಪಂಥಕ್ಕೆ ಸೇರಿಸಿದರು. ಇವರೇ ಮುಂದೆ ಪದ್ಮನಾಭತೀರ್ಥರೆಂಬ ಹೆಸರಿನ ಉತ್ತರಾಧಿಕಾರಿಗಳು.

## ವೇದವ್ಯಾಸರ ಅನುಗ್ರಹವಾದದ್ದು

ಈ ರೀತಿಯಲ್ಲಿ ದಿಗ್ವಿಜಯ ಮಾಡಿಕೊಂಡು ಬಂದ ಆಚಾರ್ಯರು ಹಿಮಾಲಯಕ್ಕೆ ಹೋಗಿ ಶ್ರೀವೇದವ್ಯಾಸರ ಸಾಕ್ಷಾದ್ದರ್ಶನವನ್ನು ಮಾಡಿಕೊಂಡು ಬರಬೇಕೆಂದು ತಮ್ಮ ಗುರುಗಳ ಅನುಜ್ಞೆಯನ್ನು ಬೇಡಿದರು ಮತ್ತು ಅವರ ಸಂತೋಷಾರ್ಥವಾಗಿ ಭಗವದ್ಗೀತಾಭಾಷ್ಯವನ್ನು ಮಾಡಿ ಅವರಿಗೂ ದ್ವೈತದೀಕ್ಷೆಯನ್ನು ಕೊಟ್ಟು ದ್ವೈತಸಿದ್ಧಾಂತವನ್ನು ನೆಲೆಗೊಳಿಸಿ ಅವರ ಸಮ್ಮತಿಯನ್ನು ಪಡೆದು ಉತ್ತರ ದಿಕ್ಕಿಗೆ ಪ್ರಯಾಣ ಮಾಡಿದರು. ಬದರಿಕಾಶ್ರಮದಲ್ಲಿ ಶ್ರೀಮನ್ನಾರಾಯಣನ ಚರಣಾರಾಧನೆಯಾದ ಮೇಲೆ ಇವರಿಗೆ ಒಂದು ಬದರೀವೃಕ್ಷದ ಮೂಲದಲ್ಲಿ ಶ್ರೀವೇದವ್ಯಾಸಮಹರ್ಷಿಗಳ ದರ್ಶನವಾಯಿತು. ಮಹರ್ಷಿಗಳು ಆಚಾರ್ಯರಿಗೆ ತತ್ವರಹಸ್ಯವನ್ನುಪದೇಶ ಮಾಡಿದರು. ಆಗ ಆಚಾರ್ಯರು ಬ್ರಹ್ಮಸೂತ್ರಗಳಿಗೆ ತಾವು ಬರೆದ ಭಾಷ್ಯವನ್ನು ಅವರ ಮುಂದೆ ಇಟ್ಟರು. ಅದರಿಂದ ಮಹರ್ಷಿಗಳು ಸಂತುಷ್ಟರಾದರು. ಕೊನೆಗೆ ಅವರ ಸನ್ನಿಧಿಯಲ್ಲಿಯೇ ನಿಲ್ಲಬೇಕೆಂದು ಕೂಡ ಆಚಾರ್ಯರಿಗೆ ಮನಸ್ಸಾಗಿತ್ತು. ಆದರೆ ಶ್ರೀವೇದವ್ಯಾಸರಿಂದ ಉಪದಿಷ್ಟರಾದ ಆಚಾರ್ಯರು ಕೃತಾರ್ಥರಾಗಿ ತಿರುಗಿ ಬಂದು ವ್ಯಾಸಾಭಿಪ್ರಾಯಪ್ರದರ್ಶಕವೆಂದು ಇನ್ನೂ ಬೇರೆ ಮಹಾಭಾರತ ತಾತ್ಪರ್ಯ ನಿರ್ಣಯ ಮೊದಲಾದ ಮೂವತ್ತೇಳು ಗ್ರಂಥಗಳನ್ನು ಬರೆದರು.

## ಶ್ರೀಕೃಷ್ಣ ಪ್ರತಿಷ್ಠೆ

ಇತರ ಮಹಾತಪಸ್ವಿಗಳ ಚರಿತ್ರೆಯಲ್ಲಿ ಕಾಣುವಂಥ ಮಹಿಮೆಗಳು ನಮ್ಮ ಆಚಾರ್ಯರ ಚರಿತ್ರೆಯಲ್ಲಿಯೂ ಬೇಕಾದಷ್ಟಿವೆ. ಉದಾಹರಣಾರ್ಥವಾಗಿ ಇಲ್ಲಿ ಒಂದು ಹೇಳಿದರೆ ಸಾಕಾಗಿದೆ. ಆಚಾರ್ಯರು

ಸಮುದ್ರ ಸ್ನಾನಮಾಡುವಾಗ ದೂರದಲ್ಲಿ ದ್ವಾರಕೆಯ ಕಡೆಯಿಂ
ಬರುತ್ತಿದ್ದ ಒಂದು ಹಡಗು ಮುಳುಗುವ ಸ್ಥಿತಿಗೆ ಬಂದು ಜನರೆಲ್ಲರು
ಹಾಹಾಕಾರಮಾಡುತ್ತಿರುವದು ಕೇಳಬಂತು. ಪರಮ ದಯಾಮೂರ್ತಿ
ಗಳಾದ ಆಚಾರ್ಯರು ಬಹಳ ಕನಿಕರದಿಂದ ಒಮ್ಮೆ ತಮ್ಮ ಶಾಟಿಯನ
ಅತ್ತ ಬೀಸುತ್ತಲೇ ಆ ಹಡಗಿಗೆ ಅನುಕೂಲವಾರುತನ ಸಹಾಯ
ವಾದಂತಾಗಿ ಅದು ಸರಾಗವಾಗಿ ದಂಡೆಗೆ ಬಂದು ಮುಟ್ಟಿತು. ಜ
ರೆಲ್ಲರೂ ಆಚಾರ್ಯರಿಂದ ತಮ್ಮ ಜೀವ ಉಳಿಯಿತೆಂದು ಆಚಾರ್ಯರಿ
ಅಸಂಖ್ಯಾಕ ಧನ್ಯವಾದಗಳನ್ನು ಹೇಳಿ ತಮ್ಮ ಸರ್ವಸ್ವವನ್ನೂ ಅರ್ಪ
ಮಾಡಿದರು. ಮಹಾವಿರಕ್ತ ಶಿಖಾಮಣಿಗಳಾದ ಆಚಾರ್ಯರು ಒಂದ
ದೊಡ್ಡ ಗೋಪೀಚಂದನದ ಗಡ್ಡೆಯನ್ನು ಮಾತ್ರ ತೆಗೆದುಕೊಂಡ
ಮಠಕ್ಕೆ ಬಂದರು. ಮಠದಲ್ಲಿ ಶಿಷ್ಯರು ಆ ಗಡ್ಡೆಯನ್ನು ಒಡೆದ
ನೋಡಿದಾಗ ಅದರಲ್ಲಿ ಶ್ರೀಕೃಷ್ಣನ ವಿಗ್ರಹವು ದೃಗ್ಗೋಚರವಾಯಿತ
ಅಪ್ರಾರ್ಥಿತವಾಗಿ ತಮಗೆ ಪ್ರಾಪ್ತವಾದ ಆ ದಿವ್ಯ ಮಂಗಲಮೂರ್ತಿ
ಯನ್ನು ಆಚಾರ್ಯರು ಉಡುಪಿಯಲ್ಲಿಯೇ ವಿವಿಧ ವೈಭವಗಳಿಂ
ಪ್ರತಿಷ್ಠೆ ಮಾಡಿ ಅದರ ಪೂಜೆಗಾಗಿ ಎಂಟು ಮಠಗಳನ್ನು ಸ್ಥಾಪ
ಮಾಡಿರುವರು. ಈ ಕೃಷ್ಣವಿಗ್ರಹದಿಂದಲೇ ಉಡುಪಿಯು ಮಹ
ಕ್ಷೇತ್ರವೆನಿಸಿರುವದು. ಆ ಎಂಟು ಮಠಗಳು ಈಗಲೂ ನಡೆದು ಬ
ತ್ತಿರುವವು. ಎರಡು ವರ್ಷಕ್ಕೊಮ್ಮೆ ಆ ಬೇರೆ ಬೇರೆ ಸ್ವಾಮಿಗ
ಆ ಉಪಾಸನೆಯ ಯೋಗವನ್ನು ಪಡೆಯುವ ಉತ್ಸವವು ಪರ್ಯಾ
ವೆಂಬ ಹೆಸರಿನಿಂದ ಬಹು ವಿಜೃಂಭಣೆಯಿಂದ ನಡೆಯುವದು.

## ಕೊನೆಯ ವಿಜಯ

ಹೀಗಿರುವಾಗ ಅದ್ವೈತದಲ್ಲಿ ಅಪ್ರತಿಮಪಂಡಿತನೆಂದು ಹೆಸ
ಗೊಂಡಿದ್ದ ತ್ರಿವಿಕ್ರಮಶಾಸ್ತ್ರಿಯು ಮಹಾದುರಭಿಮಾನಗ್ರಸ್ತನಾ
ಆಚಾರ್ಯರೊಡನೆ ವಾದಕ್ಕೆ ಬಂದನು. ಏಳು ದಿನ ವಾದ ನಡೆಯಿತ
ಶಾಸ್ತ್ರಿಯ ಪ್ರಶ್ನೆಗಳೆಲ್ಲ ಹಾರಿಹೋದವು. ಕೊನೆಗೆ ಅವನು ಆಚ
ರ್ಯರ ಶಿಷ್ಯತ್ವವನ್ನು ಸ್ವೀಕರಿಸಿ ತ್ರಿವಿಕ್ರಮ ಪಂಡಿತಾಚಾರ್ಯನೆಂ
ಹೆಸರಾದನು. ಅವನ ಮಗ ಪಂಡಿತ ನಾರಾಯಣಾಚಾರ್ಯ

ಮಧ್ವವಿಜಯ, ಮಣಿಮಂಜರಿ ಮತ್ತು ವಾಯುಸ್ತುತಿ ಮೊದಲಾದ ಗ್ರಂಥಗಳನ್ನು ಬರೆದನು.

## ಅವತಾರ ಸಮಾಪ್ತಿ

ಬೌದ್ಧಪ್ರಾಯರಾಗಿ ನಾಸ್ತಿಕರಾಗಿರುವ ಜನರನ್ನು ತಿದ್ದಿ ಭಕ್ತಿ ಮಾರ್ಗಕ್ಕೆ ಹಚ್ಚಬೇಕೆಂಬ ಆಚಾರ್ಯರ ಉದ್ದೇಶವು ಇಲ್ಲಿಗೆ ಮುಗಿದ ಹಾಗಾಯಿತು. ರಾಮಾನುಜಾಚಾರ್ಯರ ಪಂಥದಲ್ಲಿ ಪೂಜಾಸ್ಥಾನ ದಲ್ಲಿ ಅವಕಾಶವೇ ಇಲ್ಲದೆ ಇದ್ದ ಶಿವನನ್ನು ಶ್ರೀಮಧ್ವಾಚಾರ್ಯರು ಭಕ್ತಕೋಟಿಯಲ್ಲಿ ಸೇರಿಸಿಕೊಂಡು ಸಹಾನುಭೂತಿಯನ್ನು ಬೆಳೆಸಿದರು. ಶ್ರೀರಾಮಾನುಜರ ಕಾಲಕ್ಕೆ ಒಮ್ಮೆ ಮುದ್ರಾಧಾರಣೆಯಾಗುವ ಪದ್ಧತಿಯು ಬಂದಿತ್ತು. ಮಠಾಧಿಪತಿಗಳು ಬಂದಾಗಲೆಲ್ಲಾ ಮುದ್ರಾ ಧಾರಣೆ ಮಾಡಿಸಿಕೊಳ್ಳತಕ್ಕದ್ದೆಂದು ಮಧ್ವಾಚಾರ್ಯರ ಕಾಲದಲ್ಲಿ ಅದು ಮುಂದೆ ಸಾಗಿತು. ಯಜ್ಞಯಾಗಾದಿಗಳಲ್ಲಿ ಪಶುವಧೆಯಿಂದ ಪ್ರಾಣಿವಧೆಯಾಗುವದನ್ನು ಮನಸ್ಸಿಗೆ ತಂದುಕೊಂಡು ಆ ರಕ್ತಪಾತ ವನ್ನು ನಿಲ್ಲಿಸಲು ಆಚಾರ್ಯರು ಪಿಷ್ಟಪಶುವಿನ ಪದ್ಧತಿಯನ್ನು ಆಚರಣೆಗೆ ತಂದರು. ತಾವು ಸಾಕ್ಷಾದ್ಭೀಮಸೇನನ ಅವತಾರವೆಂದು ಜನರು ತಿಳಿಯುವಂತೆ ಎಷ್ಟೋವೇಳೆ ಅವರು ತಮ್ಮ ಅದ್ಭುತವಾದ ಜೀರ್ಣಶಕ್ತಿ ಯನ್ನು ತೋರಿಸಿಕೊಂಡಿರುವರು. ಒಮ್ಮೆ ಕಂಕುಳೊಳಗಿನ ಕೂಸಾಗಿರು ವಾಗಲೇ ಎತ್ತಿಗಾಗಿ ಬೇಯಿಸಿದ್ದ ಹುರಳಿಯನ್ನು ಸಮೃದ್ಧಿಯಾಗಿ ತಿಂದು ಹಾಲುಕುಡಿದರೆಂತಲೂ ದೊಡ್ಡವರಾದ ಮೇಲೆ ಒಮ್ಮೆ ಪಂಚ ಪಕ್ವಾನ್ನಗಳನ್ನು ಭೋಜನಮಾಡಿ ಆ ಮೇಲೆ ಬೇಕಾದಷ್ಟು ಬಾಳೆಯ ಹಣ್ಣುಗಳನ್ನು ತಿಂದರೆಂತಲೂ ಹೇಳುವರು. ಈ ರೀತಿಯಾಗಿ ಸುಮಾರು ೮೦ ವರ್ಷ ತಮ್ಮ ಬುದ್ಧಿಶಕ್ತಿಯಲ್ಲಿಯೂ ದೇಹಶಕ್ತಿಯಲ್ಲಿಯೂ ಅಸಾಧಾರಣ ಪ್ರಭಾವವನ್ನು ಪ್ರಕಾಶಮಾಡಿ ಆಚಾರ್ಯರು ಕ್ರಿ. ಶ. ೧೨೭೮ ರಲ್ಲಿ ತಮ್ಮ ಅವತಾರವನ್ನು ಸಮಾಪ್ತಿಮಾಡಿದರು.

# ಜ್ಞಾನದೇವ

## ಹುಟ್ಟು

ಒಬ್ಬ ಮನುಷ್ಯನು ಉಪಾಯಾಂತರವಿಲ್ಲದೆ ಕರ್ಮಮಾರ್ಗದಿಂದ ಭ್ರಷ್ಟನಾದರೂ ಜ್ಞಾನಮಾರ್ಗದಿಂದ ಭ್ರಷ್ಟನಾಗದಿದ್ದರೆ ಅವನ ಕುಲವು ಪಾವನವಾಗುವದಕ್ಕೆ ಯಾವ ಯಾವ ವಿಘ್ನವೂ ಬರಲಾರದು. ಮಹಾರಾಷ್ಟ್ರದೇಶದಲ್ಲಿ ಕುಲಕರ್ಣಿವೃತ್ತಿಯಲ್ಲಿದ್ದ ವಿಠ್ಠಲಪಂತನೆಂಬ ಬ್ರಾಹ್ಮಣನು ಒಳ್ಳೇ ಭಕ್ತಿಸಂಪನ್ನನಾಗಿದ್ದನು. ಅವನ ತಂದೆತಾಯಿಗಳು ಪುಣೆಯ ಹತ್ತರಿರುವ 'ಆಳಂದಿ' ಎಂಬ ಊರಿನಿಂದ ರುಕ್ಮಿಣಿಯೆಂಬ ಕನ್ಯೆಯನ್ನು ತಂದು ಅವನ ಸೆರಗಿಗೆ ಗಂಟುಹಾಕಿ ಸ್ವಲ್ಪ ಕಾಲದಲ್ಲಿಯೇ ಕಣ್ಮುಚ್ಚಿದರು. ಆತ್ಮವಿಚಾರದ ಕಡೆಗೆ ಹೆಚ್ಚು ಲಕ್ಷ್ಯವಿದ್ದ ವಿಠ್ಠಲಪಂತನು ತನ್ನ ವೈರಾಗ್ಯದ ವೇಗದ ಭರದಲ್ಲಿ ಹೆಂಡತಿಯ ಸಮ್ಮತಿಯನ್ನು ಪಡೆಯದೆ ಕಾಶಿಗೆ ಹೋಗಿ ರಾಮಾನಂದರೆಂಬ ಸನ್ಯಾಸಿಗಳಿಗೆ ಶರಣುಹೊಕ್ಕನು. ಅವರು ಇವನ ಪೂರ್ವೋತ್ತರವನ್ನು ವಿಚಾರಿಸಿದರು. ಹೆಂಡತಿ ಇರುವಳೆಂದು ಹೇಳಿದರೆ ಸನ್ಯಾಸವನ್ನು ಕೊಡಲಾರರೆಂದು ತಿಳಿದು ವಿಠ್ಠಲಪಂತನು ಸನ್ಯಾಸದ ಮೇಲಿನ ಪ್ರೇಮವಿಶೇಷದಿಂದ ಸುಳ್ಳು ಹೇಳಿ ಅವರಿಂದ ಸನ್ಯಾಸವನ್ನು ತೆಗೆದುಕೊಂಡನು. ಆಳಂದಿಯವರಿಗೆ ಇವನ ನೆಲೆ ಹತ್ತಲಿಲ್ಲ. ಸ್ವಭಾವವಾಗಿ ಬಹು ಸದ್ಗುಣಿಯಾಗಿದ್ದುದರಿಂದ ರಾಮಾನಂದರಿಗೆ ಅವನು ಬಹು ಮೆಚ್ಚಿನ ಶಿಷ್ಯನಾದನು. ಹೀಗಿರುವಾಗ ಅವರು ತಮ್ಮ ಮಠದ ಭಾರವನ್ನೆಲ್ಲಾ ಅವನ ತಲೆಯ ಮೇಲೆ ಹಾಕಿ ಸಂಚಾರಕ್ಕೆ ಹೊರಟು ದಾರಿಹೋಕರಾಗಿ ಆಳಂದಿಗೆ ಬಂದರು. ಆ ಸಮಯದಲ್ಲಿ ಚಿಂತಾತುರಳಾದ ರುಕ್ಮಿಣೀಬಾಯಿಯು ಇತರರೊಡನೆ ಬಂದು ಅವರ ಪಾದದ ಮೇಲೆ ಹಣೆಯನ್ನಿಟ್ಟಳು. 'ನಿನಗೆ ಸಂತತಿಯಾಗಲಿ' ಎಂದು ಅವರು ಆಶೀರ್ವಾದ ಮಾಡಿದರು. ಅದನ್ನು ಕೇಳಿ ಆಕೆಯ ಮುಖವು ವಿವರ್ಣವಾಯಿತು. ಅದರ ಕಾರಣವೇನೆಂದು ಸ್ವಾಮಿಗಳು ಕೇಳಿದರು. ಆಕೆ ತನ್ನ ವೃತ್ತಾಂತವನ್ನೆಲ್ಲ ವಿಶದವಾಗಿ ವಿಜ್ಞಾಪನೆ ಮಾಡಿದಳು. ಸ್ವಾಮಿಗಳು

ಆಕೆಗೆ ಅಭಯವನ್ನು ಕೊಟ್ಟು ತಮ್ಮ ಸಂಚಾರವನ್ನು ಸಾಕುಮಾಡಿ ಆಕೆಯನ್ನು ಕರೆದುಕೊಂಡು ಕಾಶಿಗೆ ಹಿಂದಿರುಗಿ ಬಂದು ವಿಠ್ಠಲಪಂತನನ್ನು ವಿಚಾರ ಮಾಡಿದರು. ವಿಠ್ಠಲಪಂತನು ಆಗ ಇದ್ದಿದ್ದ ಹಾಗೆ ಹೇಳಿಬಿಟ್ಟನು. ಆಗ ಸ್ವಾಮಿಗಳು "ನೀನು ಹಿಂದಿರುಗಿ ಹೋಗಿ ಗೃಹಸ್ಥಾಶ್ರಮದಲ್ಲಿಯೇ ಇರು" ಎಂದು ಅವನಿಗೆ ಆಜ್ಞೆಮಾಡಿ ಕಳುಹಿಸಿಬಿಟ್ಟರು. ಹಾಗೆ ಮಾಡುವದು ಲೋಕವಿರುದ್ಧವಾದರೂ ಗುರುವಿನ ಆಜ್ಞೆಯೆಂದು ವಿಠ್ಠಲಪಂತನು ಆಳಂದಿಗೆ ಹೆಂಡತಿಯೊಡನೆ ಬಂದನು. ಇವನೊಬ್ಬ ಪತಿತನೆಂದು ಎಲ್ಲರೂ ಇವನನ್ನು ದೂರಮಾಡಿಬಿಟ್ಟರು. ಮಾನಾಪಮಾನಗಳನ್ನೂ ಕಷ್ಟ-ಸುಖಗಳನ್ನೂ ಸಮವಾಗಿ ಭಾವಿಸುತ್ತ ವಿಠ್ಠಲಪಂತನು ಕೆಲವು ಕಾಲ ಸಂಸಾರ ಮಾಡಿಕೊಂಡಿರುವಾಗ ಕ್ರಿ. ಶ. ೧೨೭೫ ರಲ್ಲಿ ಜ್ಞಾನದೇವನ ಜನ್ಮವಾಯಿತು.

## ಬಾಲ್ಯ

ಜ್ಞಾನದೇವನಿಗೆ ನಿವೃತ್ತಿನಾಥನೆಂಬ ಅಣ್ಣನೂ ಸೋಪಾನದೇವನೆಂಬ ತಮ್ಮನೂ ಮುಕ್ತಾಬಾಯಿಯೆಂಬ ತಂಗಿಯೂ ಇದ್ದರು. ಇವರೆಲ್ಲಾ ಪತಿತರ ಸಂತತಿಯವರೆಂದು ಊರಿನವರು ಯಾರೂ ಇವರನ್ನು ಜೊತೆಗೆ ಸೇರಿಸಿಕೊಳ್ಳದೆ ಇದ್ದದರಿಂದ ಆಟಪಾಟಗಳಲ್ಲಿ ಇವರಿಗೆ ಇತರರ ಸಂಪರ್ಕವೇ ತಪ್ಪಿಹೋಗಿತ್ತು. ಒಳ್ಳೇ ವಿರಕ್ತನೂ ಜ್ಞಾನಿಯೂ ಆಗಿದ್ದ ತಂದೆಯ ಮತ್ತು ಸಾಧ್ವೀಶಿರೋಮಣಿಯಾದ ತಾಯಿಯ ಹತ್ತರದಲ್ಲಿಯೇ ಈ ಹುಡುಗರ ಕಾಲವೆಲ್ಲಾ ಹೋಗುತ್ತಿತ್ತು. ಇವರು ಯಾವಾಗಲೂ ಭಕ್ತಿಜ್ಞಾನಪ್ರಧಾನವಾದ ಮಾತುಗಳನ್ನೇ ಆಡುತ್ತಿದ್ದರಿಂದ ಮಹಾಮಹಾದಿಗ್ದಂತಿ ಪಂಡಿತರ ಉಪದೇಶದಿಂದ ಕಲಿಯಬೇಕಾದ ಹೆಚ್ಚಿನ ಸಂಗತಿಗಳೆಲ್ಲಾ ಬಹು ಸುಲಭವಾಗಿ ಈ ಹುಡುಗರ ಮನಸ್ಸಿನಲ್ಲಿ ಮೂಡಿಕೊಂಡವು. ಇತರರು ಇಷ್ಟನ್ನೂ ಕಲಿಸುವುದೂ ಶಕ್ಯವಿರಲಿಲ್ಲ ಮತ್ತು ಇತರರ ಸಹವಾಸದಿಂದ ಅಲ್ಪಸ್ವಲ್ಪವಾದರೂ ಕೆಟ್ಟ ಚಟಗಳ ಗಾಳಿಯೂ ಬೀಸದೇ ಹೋಗುತ್ತಿರಲಿಲ್ಲ. ಪ್ರಾಪಂಚಿಕ ದೃಷ್ಟಿಯಿಂದ ಇತರರ ಸವ್ಯವಹಾರವಿಲ್ಲದ್ದು ಒಂದು ನ್ಯೂನತೆಯಾಗಿ ಕಂಡರೂ ಅದರ ಪರಿಣಾಮದ ದೃಷ್ಟಿಯಿಂದ ಅದು ವಿಲಕ್ಷಣವಾದ ಪ್ರಾಶಸ್ತ್ಯವುಳ್ಳದ್ದಾಯಿತು. ಪ್ರಾಯಶ್ಚಿತ್ತವನ್ನು ತೆಗೆದುಕೊಂಡು ಈ ಗಂಡು ಮಕ್ಕಳಿಗೆ

ಉಪನಯನವನ್ನು ಮಾಡಬೇಕೆಂದು ವಿಠ್ಠಲಪಂತನು ಎಷ್ಟೋ ಹೆಣಗಿದನು ಬ್ರಾಹ್ಮಣರು ದಾರೀ ಕೊಡಲಿಲ್ಲ. ಆರೂಢಪತಿತನಾದವನಿಗೆ ದೇಹಾಂತಶಿಕ್ಷೆಯೇ ಹೊರತು ಪ್ರಾಯಶ್ಚಿತ್ತವೇ ಇಲ್ಲವೆಂದು ಅಲ್ಲಿಯವರೆಲ್ಲರೂ ಗದರಿಸಿಬಿಟ್ಟರು. ತಾವು ಆ ಪ್ರಾಯಶ್ಚಿತ್ತವನ್ನು ತೆಗೆದುಕೊಂಡಮೇಲಾದರೂ ತಮ್ಮ ಮಕ್ಕಳಿಗೆ ಅನುಕೂಲವಾದೀತೆಂದು ಗಂಡಹೆಂಡರಿಬ್ಬರೂ ಪ್ರಯಾಗಕ್ಕೆ ಹೋಗಿ ತ್ರಿವೇಣಿಯಲ್ಲಿ ಆತ್ಮಾರ್ಪಣವನ್ನು ಮಾಡಿಬಿಟ್ಟರು. ಈ ಹುಡುಗರಿಗೆ ಚಿಕ್ಕವಯಸ್ಸಿನಲ್ಲಿಯೇ ಯಾರೂ ದಿಕ್ಕಿಲ್ಲದಂತಾಯಿತು.

## ಉಪನಯನ

ಹಿರಿಯವನಾದ ನಿವೃತ್ತಿನಾಥನು ಒಬ್ಬ ಯೋಗಿಯಿಂದ ಉಪದೇಶವನ್ನು ಪಡೆದು ಸಾಧನ ಮಾಡುತ್ತ ಉಪನಯನದಿಂದ ತನಗೇನೂ ಆಗಬೇಕಾದ್ದಿಲ್ಲವೆಂದೂ ತಾನು ಸ್ವಭಾವವಾಗಿಯೇ ಪವಿತ್ರನೇ ಆಗಿರುವೆನೆಂದೂ ಹೇಳುವದಕ್ಕಾರಂಭಿಸಿದನು. ಜ್ಞಾನದೇವನು ಆ ಅಭಿಪ್ರಾಯವನ್ನು ಮುಂದುವರಿಯಗೊಡಲಿಲ್ಲ. ಸಮಾಜದ ಸುಸ್ಥಿತಿಗೆ ಕೆಲವು ಕಟ್ಟುಗಳಿರಲೇಬೇಕೆಂದೂ ಆ ಕಟ್ಟನ್ನನುಸರಿಸಿಯೇ ತಾವು ಮೇಲು ಪಂಗ್ತಿಯನ್ನು ತೋರಿಸಬೇಕೆಂದೂ ಜ್ಞಾನದೇವನು ತನ್ನ ಅಣ್ಣನಿಗೆ ಹೇಳಿದನು ಆಮೇಲೆ ಅವರಿಬ್ಬರೂ ಅಲ್ಲಿಯೇ ಬ್ರಾಹ್ಮಣರನ್ನು ಕೇಳಿದಾಗ ಪೈಠಣದಲ್ಲಿರುವ ವಿದ್ವಾಂಸರ ಸಮ್ಮತಿಯನ್ನು ತಂದರೆ ತಾವು ಒಪ್ಪಿಕೊಳ್ಳುವದಾಗಿ ಅವರು ಹೇಳಿದರು. ಆಗ ಜ್ಞಾನದೇವನು ಪೈಠಣಕ್ಕೆ ಹೋಗಿ ಅಲ್ಲಿಯ ಬ್ರಹ್ಮವೃಂದದ ಮುಂದೆ ತನ್ನ ಪ್ರಶ್ನೆಯನ್ನಿಟ್ಟನು. ಇಷ್ಟರಲ್ಲಿ ಜ್ಞಾನದೇವನು ಒಂದು ಕೋಣನ ಬಾಯಿಂದ ವೇದವನ್ನು ಹೇಳಿಸಿದನೆಂಬ ಸುದ್ದಿ ಹರಡಿಕೊಂಡಿತ್ತು. ಇಂಥವನ ಮುಂದೆ ತಮ್ಮದೇನೆಂದು ತಮ್ಮತಮ್ಮೊಳಗೆ ಗೊಣಗುಟ್ಟಿಕೊಂಡು ಅಲ್ಲಿಯ ಬ್ರಾಹ್ಮಣರು ಇವನಿಗೆ ಸಮ್ಮತಿಯನ್ನು ಕೊಟ್ಟರು. ಅದನ್ನು ಗೌರವಿಸಿ ಆಳಂದಿಯುವರು ಈ ಹುಡುಗರಿಗೆ ಉಪನಯನವನ್ನು ಮಾಡಿಸಿದರು.

## ಗ್ರಂಥರಚನೆ

ಉಪನಯನವಾದ ಮೇಲೆ ಕಲಿಯಬೇಕಾದ್ದೆಲ್ಲಾ ಜ್ಞಾನದೇವನಿಗೆ ಉಪನಯನಕ್ಕೆ, ಮೊದಲೇ ತನ, ತಂದೆಯ ಸಂಭಾಷಣದಿಂದ ತಿಳಿ

ದಿತ್ತು. ಇದರ ಮೇಲೆ ಜ್ಞಾನದೇವನು ತನ್ನ ಅಣ್ಣನಿಂದ ಉಪದಿಷ್ಟನಾಗಿ ಯೋಗಸಾಧನೆಯನ್ನು ಮಾಡಿದನು. ಹೀಗೆ ತಾನು ಕೃತಾರ್ಥನಾಗಿದ್ದರೂ ವಿವೇಕವಿಲ್ಲದೆ ಹೊಯ್ದಾಡುತ್ತಿರುವ ಜನಮಂಡಲಿಗೆ ಶಾಂತತೆಯನ್ನು ತಂದುಕೊಡಬೇಕೆಂದು ಜ್ಞಾನದೇವನಿಗೆ ಉತ್ಸುಕತೆಯುಂಟಾಯಿತು. ಆಗಿನ ಜನರಲ್ಲಿ ಶಿವವಿಷ್ಣ್ವಾದಿದೇವರುಗಳಲ್ಲಿಯ ಹೆಚ್ಚು ಕಡಿಮೆಯ ಬಡಿದಾಟ, ಬೇರೆಬೇರೆ ಜಾತಿಗಳಲ್ಲಿ ವ್ಯರ್ಥವಾದ ದ್ವೇಷ– ಇವೆಲ್ಲಾ ಜ್ಞಾನದೇವನಿಗೆ ಕಂಡುಬಂತು. ದೇವರ ವಿಷಯಕವಾದ ಜ್ಞಾನವೆಲ್ಲಾ ಸಂಸ್ಕೃತಗ್ರಂಥಗಳಲ್ಲಿ ಸೇರಿಕೊಂಡು ಅವೆಲ್ಲಾ ಬ್ರಾಹ್ಮಣರ ಕಂಕಳುಗಳಲ್ಲಿ ಅಡಗಿಕೊಂಡಿದ್ದವು. ಈ ಜ್ಞಾನವಿಲ್ಲದಿರುವ ಕೊರತೆಯಿಂದಲೇ ಜನರಲ್ಲಿ ಸಹಾನುಭೂತಿ ಇಲ್ಲವೆಂದು ಮರ್ಮವನ್ನು ಕಂಡುಹಿಡಿದು ಜ್ಞಾನದೇವನು ತನ್ನ ಹದಿನೈದನೆಯ ವಯಸ್ಸಿನಲ್ಲಿಯೇ ಭಗವದ್ಗೀತೆಗೆ ಮರಾಠಿಯಲ್ಲಿ ಭಾವಾರ್ಥ ದೀಪಿಕೆಯೆಂಬ ವ್ಯಾಖ್ಯಾನವನ್ನು ಬರೆದನು. ಸಮುದ್ರದ ತಳವನ್ನು ಹಿಡಿದಿದ್ದ ರತ್ನಗಳು ಮೇಲಕ್ಕೆದ್ದು ಕಾಣಿಸಿಕೊಂಡು ಎಲ್ಲರ ಕಣ್ಣಿಗೂ ಮನಸ್ಸಿಗೂ ಹಬ್ಬವನ್ನು ಮಾಡಿದಂತೆ ಜ್ಞಾನದೇವನ ವ್ಯಾಖ್ಯಾನದಿಂದ ಭಗವದ್ವಿಷಯಕವಾದ ರಹಸ್ಯಗಳೆಲ್ಲಾ ಹೊರಬಿದ್ದು ಸಾಮಾನ್ಯಜನರಿಗೆ ಕೂಡ ಸುಲಭವಾಗಿ ಸಿಕ್ಕಿ ಎಲ್ಲರ ಮನಸ್ಸಿನ ಮೇಲೆಯೂ ಅತ್ಯುತ್ತಮವಾದ ತಿದ್ದುಪಾಟನ್ನು ಮಾಡಿದವು. ಇದು ನಿರ್ಗುಣಬ್ರಹ್ಮಜ್ಞಾನವೆಂಬ ಭೋರ್ಗರೆವ ಅಲೆಯನ್ನೆಬ್ಬಿಸಿ ಶಿವ, ವಿಷ್ಣು–ಮೊದಲಾದವರ ಭೇದ ಜ್ಞಾನವೆಂಬ ಕೆಸರನ್ನು ತೊಡೆದದ್ದರಿಂದ ಜನರ ವ್ಯರ್ಥಕಲಹವು ಕಡಿಮೆಯಾಯಿತು. ಇಂಥ ಉತ್ಕೃಷ್ಟವಿಚಾರವು ದೇಶಭಾಷೆಯಲ್ಲಿಳಿದದ್ದರಿಂದ ಬಹು ಜನರು ಓದುವದಕ್ಕೆ ಅನುಕೂಲವಾಗಿ ಭಾಷಾಪ್ರಸಾರಕ್ಕೂ ಬಹಳ ಸಹಾಯವಾಯಿತು ಜ್ಞಾನೇಶ್ವರನು ಈ ವ್ಯಾಖ್ಯಾನವನ್ನು ಬರೆದದ್ದಲ್ಲದೆ ಅಮೃತಾನುಭವವೆಂಬ ಸ್ವತಂತ್ರಗ್ರಂಥವನ್ನೂ ಬರೆದು ಭಾಷಾಸೇವೆಯನ್ನು ಮಾಡಿರುವನು. ಇತರವೇದಾಂತಿಗಳಂತೆ ಕರ್ಮವನ್ನು ದೂಷಿಸದೆ ಜ್ಞಾನಕ್ಕೂ ಭಕ್ತಿಗೂ ಪ್ರಾಶಸ್ತ್ಯವನ್ನು ಕೊಟ್ಟು ಬರೆದ ಇವನ ಗ್ರಂಥಗಳು ಸಮಾಜೋನ್ನತಿಗೂ ಮತ್ತು ಆತ್ಮೋನ್ನತಿಗೂ ಅತ್ಯುತ್ತಮಗಳಾಗಿವೆ.

## ದೇಶ ಸಂಚಾರ

ಗ್ರಂಥಮೂಲಕವಾದ ದೇಶಸೇವೆಯು ಶಾಶ್ವತವಾದರೂ ಫಲಕಾರಿಯಲ್ಲವೆಂದು ಯೋಚಿಸಿ ತನ್ನ ಉದ್ದೇಶವು ನೆರವೇರಿದ್ದನ್ನು ಕಣ್ಣಾರೆ ನೋಡಬೇಕೆಂದು ಜ್ಞಾನದೇವನು ತನ್ನ ಸಹೋದರರೊಡನೆ ತೀರ್ಥಯಾತ್ರೆಯನ್ನು ಕೈಕೊಂಡನು. ತೀರ್ಥಯಾತ್ರೆಯಲ್ಲಿ ಅವನಿಗೆ ಪುಣ್ಯಸಂಪಾದನೆಯ ಲಕ್ಷ್ಯವಿರಲಿಲ್ಲ. ಅಲ್ಲಲ್ಲಿ ನಿಂತು ಜನಮಂಡಲಿಯನ್ನು ಸೇರಿಸಿ ಭಗವದ್ವಿಚಾರವನ್ನು ಪ್ರಸಾರಮಾಡುವದೇ ಅವನ ಉದ್ದೇಶವಾಗಿತ್ತು. ಭಗವದ್ವಿಚಾರವೊಂದು ಎಲ್ಲರ ಮನಸ್ಸಿನಲ್ಲಿಯೂ ಬಿಂಬಿಸಿತೆಂದರೆ ಅವರು ಸರ್ವರೊಡನೆ ಸಹಾನುಭೂತಿಯಿಂದ ನಡೆದು ಭೂಲೋಕವನ್ನೇ ವೈಕುಂಠವಾಗಿ ಮಾಡುವರೆಂದು ಅವನಿಗೆ ನಂಬಿಕೆಯಿತ್ತು. ಮತ್ತು ಈ ಭಗವದ್ವಿಚಾರವು ಕೇವಲ ಜ್ಞಾನಪ್ರಧಾನವಾಗಿರದೆ ಭಕ್ತಿಯ ಕಡೆಗೆ ಒಲವಿರಬೇಕೆಂದು ಅವನು ನಿಶ್ಚಯಿಸಿದ್ದನು. ಏಕೆಂದರೆ ಎಲ್ಲರಿಗೂ ಮೇಧಾ ಶಕ್ತಿಯು ವಿಶೇಷವಾಗಿ ಇರುವದಿಲ್ಲ; ಪ್ರೇಮಶಕ್ತಿ ಮಾತ್ರ ಇದ್ದೇ ಇರುವದು. ಆದ್ದರಿಂದ ಹೋದಹೋದ ಕಡೆಗಳಲ್ಲಿ ಹೇಗಾದರೂ ಜನರನ್ನು ಆಕರ್ಷಣೆ ಮಾಡಿ ಎಲ್ಲಾ ಜಾತಿಯವರನ್ನೂ ಸೇರಿಸಿ ಭಜನೆ ಮೊದಲಾದವುಗಳನ್ನು ಮಾಡಿಸುವದರ ಮೂಲಕ ಜಾತಿಯ ದುರಭಿಮಾನವನ್ನು ಮರೆಸುವ ಉದ್ಯೋಗವನ್ನು ಮಾಡಿದನು. ಜ್ಞಾನದೇವನು ವರ್ಣಾಶ್ರಮಧರ್ಮಗಳಿಗೆ ಉತ್ತೇಜನ ಕೊಡುವದರಲ್ಲೇನೂ ಹಿಂದಾಗಿರಲಿಲ್ಲ. ವರ್ಣಾಶ್ರಮಗಳೆಲ್ಲ ಇದ್ದು ಅವುಗಳ ದ್ವೇಷ ಮಾತ್ರ ಇರಬಾರದೆಂದೂ ಜನರೆಲ್ಲರೂ ಐಕ್ಯಮತ್ಯದಿಂದ ಇರಬೇಕೆಂದೂ ಅವನು ಲಕ್ಷ್ಯದಲ್ಲಿಟ್ಟಿದ್ದನು.

## ಅಂತ್ಯಕಾಲ

ಜ್ಞಾನದೇವನು ಹೊಟ್ಟೆಗಾಗಿ ಎಂದೆಂದೂ ದುಡಿಯಲಿಕ್ಕೆ ಹೋಗಲಿಲ್ಲ; ಪ್ರಾಪಂಚಿಕ ಸುಖವನ್ನನುಭವಿಸಬೇಕೆಂದು ಮದುವೆಯಾಗಲೂ ಇಲ್ಲ; ದೇವರೆಂದು ಮೂಗುಹಿಡಿದುಕೊಂಡು ಕೂಡಲೂ ಇಲ್ಲ. ಜನತೆಯ ಸೇವೆಯೇ ಜನಾರ್ದನನ ಸೇವೆಯೆಂದು ಅವನ ಭಾವನೆ. ಜನತೆಯಲ್ಲಿ ಯಾರೂ ಹಿಂದುಳಿದಿರಬಾರದೆಂದು ಅವನ ಆಶೆ. ಜನರು ದುರಭಿಮಾನ

ಗ್ರಸ್ತರಾಗುವದನ್ನು ತಪ್ಪಿಸುವದರಲ್ಲಿಯೂ ಅವನಿಗೆ ಕುತೂಹಲವಿತ್ತು. ಒಂದು ದಿನ ಚಂಗದೇವನೆಂಬ ಯೋಗಿಯು ತನ್ನ ಯೋಗ ಮಹಿಮೆಯನ್ನು ತೋರಿಸಬೇಕೆಂದು ಉಗ್ರವಾದ ಹುಲಿಯ ಮೇಲೆ ಕೂತು ಕಾಲಸರ್ಪವನ್ನು ಚಾಟಿಯಾಗಿ ಮಾಡಿಕೊಂಡು ಜ್ಞಾನದೇವನ ಕಡೆಗೆ ಬರುತ್ತಿದ್ದನಂತೆ. ಅವನಿಗೆ ಬುದ್ಧಿಯನ್ನು ಕಲಿಸಬೇಕೆಂದು ಜ್ಞಾನದೇವನು ಒಂದು ಮೋಟುಗೋಡೆಯ ಮೇಲೆ ಕೂತು ಅದನ್ನು ನಡೆಸಿಕೊಂಡು ಇದಿರಾಗಿ ಹೋದನಂತೆ. ನಿರ್ಜೀವವಾದ ಗೋಡೆಯನ್ನು ನಡೆಸುವದನ್ನು ನೋಡಿ ಸಜೀವವಾದ ಹುಲಿಯನ್ನು ನಡೆಯಿಸಿದ ಯೋಗಿಯು ನಾಚಿಕೊಂಡು ಒಡನೆ ಶಿಷ್ಯನಾದನಂತೆ. ಹೀಗೆ ಅನೇಕವಾಗಿ ಅಲೌಕಿಕವಾದ ಚಾತುರ್ಯಗಳಿಂದಲೂ ಜನಮಂಡಲಿಯ ಮನಸ್ಸನ್ನೊಲಿಸಿಕೊಂಡು ಭಕ್ತಿಮಾರ್ಗವನ್ನು ಪ್ರಸಾರ ಮಾಡಿದ ಜ್ಞಾನದೇವನು ತನ್ನ ಇಪ್ಪತ್ತೆರಡನೆಯ ವಯಸ್ಸಿನಲ್ಲಿಯೇ ಅಂದರೆ ಕ್ರಿ. ೧೨೯೬ರಲ್ಲಿ ನಮ್ಮ ದುರ್ದೈವದಿಂದ ನಶ್ವರವಾದ ಸ್ಥೂಲದೇಹವನ್ನು ಬಿಟ್ಟು ಹೋದನು.

# ಶ್ರೀವಿದ್ಯಾರಣ್ಯರು

## ಪೀಠಿಕೆ

ಪರಮಾತ್ಮನು ಲೋಕಕ್ಕೆಲ್ಲ ಒಂದೊಂದು ವಿಶೇಷ ತತ್ವವನ್ನು ಉಪದೇಶ ಮಾಡುವದಕ್ಕೆ ಆಗಾಗ ಒಬ್ಬೊಬ್ಬ ವಿಶೇಷ ವ್ಯಕ್ತಿಯನ್ನು ಕಳುಹಿಸುವನೆಂದು ತೋರುತ್ತದೆ. ಜನಮಂಡಲಿಯಲ್ಲೆಲ್ಲಾ ಸಾಮಾನ್ಯ ವಾಗಿ ಪ್ರಪಂಚವೆಲ್ಲಾ ತುಚ್ಛವೆಂದು ಮೂಲೆಯನ್ನು ಸೇರಿ ಮೂಗು ಹಿಡಿದು ಮುದುರಿಕೊಳ್ಳುವವರು ಒಂದು ಭಾಗ ಪ್ರಪಂಚದಲ್ಲಿ ಬಿದ್ದು ಅದರ ಸವಿಗೆ ಬಾಯಿನೀರು ಸುರಿಸುತ್ತಿರುವವರು ಒಂದು ಭಾಗ ಹೀಗೆ ಎರಡು ಭಾಗವಾಗಿರುವದನ್ನು ನಾವು ನೋಡುತ್ತೇವೆ. ಮತ್ತು ಪ್ರಪಂಚಕ್ಕೂ ಪರಮಾರ್ಥಕ್ಕೂ ದೂರವೆಂಬ ಕೆಲವು ವೇದಾಂತಿ ಗಳ ಮಾತನ್ನು ಕೇಳಿಯೂ ಇದ್ದೇವೆ. ಇದು ನಿಜವಾಗಿದ್ದ ಪಕ್ಷದಲ್ಲಿ ಪರಮಕಾರುಣಿಕನಾದ ಪರಮಾತ್ಮನು ಪಾರಮಾರ್ಥಕ್ಕೆ ವಿರೋಧವಾದ ದುಃಖಮಯಪ್ರಪಂಚವನ್ನೇಕೆ ಸೃಷ್ಟಿಮಾಡಿದನೆಂಬ ಪ್ರಶ್ನೆಗೆ ಸಮಂಜಸ ವಾದ ಉತ್ತರವನ್ನು ಕಂಡುಹಿಡಿಯಬೇಕಾಗುತ್ತದೆ. ಅದು ನಮಗೆ ಶಕ್ಯವಿಲ್ಲ. ಈ ಒಗಟನ್ನು ಒಡೆದುನೋಡಿಕೊಳ್ಳುವದಕ್ಕಾಗಿಯೇ ಪರ ಮಾತ್ಮನ ಸೃಷ್ಟಿವೈಚಿತ್ರ್ಯವು ನಡೆಯಿತೆಂಬಂತೆ ಹದಿಮೂರನೆಯ ಶತ ಮಾನದ ಕೊನೆಯ ಭಾಗದಲ್ಲಿ ಒಂದು ವಿಶೇಷ ವ್ಯಕ್ತಿಯು ಉತ್ಪನ್ನ ವಾಗಿ ಪ್ರಪಂಚವೂ ಪಾರಮಾರ್ಥವೂ ಒಂದಕ್ಕೊಂದು ವಿರುದ್ಧವಲ್ಲವೆಂದು ಅಷ್ಟೇ ಅಲ್ಲ, ಅವು ಒಂದೆಡೆಯಲ್ಲಿ ಸಮ್ಮೀಲನವಾಗುವದರಿಂದಲೇ ಮಹ ತ್ಕಾರ್ಯವಾಗುವದೆಂದೂ ದೊಡ್ಡದೊಂದು ಮೇಲ್ಪಂಙ್ತಿಯನ್ನು ಹಾಕಿರು ವನು. ಬರೀ ಮೂಗು ಹಿಡಿದು ಕೂತುಕೊಂಡವರು ತಮ್ಮ ಉದ್ಧಾರ ವನ್ನು ತಾವು ಮಾಡಿಕೊಂಡು ತಮ್ಮ ಹತ್ತರಕ್ಕೆ ಬಂದು ಅಂಗಲಾಚಿ ದವರಿಗೆ ಧರ್ಮದಾನವನ್ನು ಮಾಡಬಹುದು. ಬರೀ ಪ್ರಪಂಚಕ್ಕೆ ಬಾಯಿನೀರು ಸುರಿಸುವವರು ದೊಡ್ಡದೊಂದು ರಾಜ್ಯವನ್ನೇ ಸಂಪಾದಿಸಿ ಕೆಲವು ಕಾಲ ತಮ್ಮ ಹೆಮ್ಮೆಯಲ್ಲಿ ತಾವು ಮೆರೆಯಬಹುದು. ಇವರಿಬ್ಬ

ರಿಂದಲೂ ಲೋಕದ ಏಳಿಗೆಯಾಗುವದಿಲ್ಲ. ಜನಮಂಡಲಿಯ ಮನೋವೃತ್ತಿಯೆಲ್ಲಾ ಜಾಗರೂಕವಾಗಿ ಅದರೊಳಗೆ ಚೈತನ್ಯದ ಕಳೆ ತುಂಬಬೇಕಾದರೆ ಪ್ರಪಂಚವೂ ಬೇಕು, ಪಾರಮಾರ್ಥವೂ ಬೇಕು. ಇವೆರಡೂ ಪರಸ್ಪರ ಸಹಾನುಭೂತಿಯಿಂದ ಸೇರಿದವೆಂದರೆ ಔಷಧವೂ ಪಥ್ಯವೂ ಒಂದಕ್ಕೊಂದು ಅನುಗುಣವಾಗಿ ಸೇರಿದಂತೆ ಆಗಿ ಪ್ರಜೆಗಳ ಸರ್ವರೋಗಗಳೂ ಪರಿಹಾರವಾಗುವವು. ದೇಶಾಭಿಮಾನವು ಔಷಧದಂತೆ, ಧರ್ಮಾಭಿಮಾನವು ಪಥ್ಯದಂತೆ– ಇವೆರಡೂ ಒಂದು ಕಡೆ ಸೇರಿದ್ದ ವ್ಯಕ್ತಿಯೆಂದರೆ ವಿದ್ಯಾರಣ್ಯರು.

## ಬಾಲ್ಯ

ವಿದ್ಯಾರಣ್ಯರ ಜನ್ಮಸ್ಥಾನವು ತುಂಗಭದ್ರಾತೀರದಲ್ಲಿರುವ ಪಂಪಾಕ್ಷೇತ್ರ. ಅಲ್ಲಿ ಮಾಯಣನೆಂಬ ಒಳ್ಳೇ ಶೀಲವಂತನಾದ ಮತ್ತು ಪಂಡಿತನಾದ ಬ್ರಾಹ್ಮಣನು ಶ್ರೀಮತಿಯೆಂಬ ತನ್ನ ಧರ್ಮಪತ್ನಿಯೊಡನೆ ವಾಸಮಾಡುತ್ತಿದ್ದನು. ಸರಸ್ವತೀಪ್ರೇಮಪಾತ್ರನಾಗಿ ಸಾತ್ವಿಕಶಿರೋಮಣಿಯಾಗಿದ್ದ ಆತನಿಗೆ ಲಕ್ಷ್ಮೀದೇವಿಯ ಅನುಗ್ರಹದ ಕೊರತೆ ಬಹಳವಾಗಿತ್ತು. ಈ ರೀತಿಯಲ್ಲಿ ಅವನಿರುವಾಗ ಭುವನ ಪ್ರಸಿದ್ಧವಾದ ನವರತ್ನಗಳ ಖನಿಗಳುಳ್ಳ ಪಂಪಾಕ್ಷೇತ್ರವು ಆ ದಂಪತಿಗಳ ಗರ್ಭದಿಂದ ಒಮ್ಮೆ ಒಂದು ಜೀವರತ್ನವನ್ನು ಹೊರಗೆಡವಿತು. ಆ ಶಿಶುವಿನ ಹೆಸರು ಮಾಧವ. ಮಾಧವನೇ ವಿದ್ಯಾರಣ್ಯರೆಂಬುವದು ಮುಂದೆ ವ್ಯಕ್ತವಾಗುವದು. ಮಾಧವನ ಜನ್ಮಕಾಲವು ಸುಮಾರು ಕ್ರಿ. ೧೨೬೮ ಇರಬಹುದು. ಭಾರದ್ವಾಜ ಗೋತ್ರದಲ್ಲಿ ಯಜುಶ್ಶಾಖೆಯಲ್ಲಿ ಬೋಧಾಯನಸೂತ್ರದವರಲ್ಲಿ ಅವತರಿಸಿದ ಮಾಧವನಿಗೆ ಸಾಯಣ, ಭೋಗನಾಥ–ಎಂಬಿಬ್ಬರು ತಮ್ಮಂದಿರು ಇದ್ದರು. ವೇದ ಶಾಸ್ತ್ರಜ್ಞನಾಗಿ ಸಂಪ್ರದಾಯಪ್ರಿಯನಾಗಿದ್ದ ಮಾಯಣನು ತನ್ನ ಮಕ್ಕಳಿಗೆ ಕಾಲಕಾಲಕ್ಕೆ ತಕ್ಕ ವೇದೋಕ್ತ ಕರ್ಮಗಳನ್ನು ಮಾಡಿ ತಾನೇ ಅಷ್ಟಿಷ್ಟು ಶಾಸ್ತ್ರಪಾಠವನ್ನು ಹೇಳಿದನು. ತೀವ್ರಬುದ್ಧಿಶಾಲಿ ಮಾಧವನು ಬಹುಬೇಗ ಅದನ್ನೆಲ್ಲಾ ಹೀರಿ ಇನ್ನೂ ಸಾಲದೆ ಮುಂದಿನ ಅಭ್ಯಾಸಕ್ಕಾಗಿ ಸಾಯಣನೆಂಬ ತಮ್ಮನೊಡನೆ ಕಂಚಿಗೆ ಹೋಗಿ ಅಲ್ಲಿ ಕಾಮಕೋಟಿಪೀಠಾಧಿಪತಿಗಳಾಗಿದ್ದ ಶ್ರೀವಿದ್ಯಾತೀರ್ಥಸ್ವಾಮಿಗಳಲ್ಲಿ ತನ್ನ ಶಾಸ್ತ್ರದ ಬಾಯಾರಿಕೆಯನ್ನೆಲ್ಲಾ ಇಂಗಿಸಿ

ಕೊಂಡನು. ಮಾಧವನ ಬುದ್ಧಿಕೌಶಲ್ಯವನ್ನು ನೋಡಿದ ಸಮಕಾಲದಲ್ಲಿಯೇ ದೇಶವೆಲ್ಲಾ ತುರುಷ್ಕರ ತುಳಿದಾಟದಿಂದ ತತ್ತರಿಸುತ್ತಿರುವದನ್ನು ಮನಸ್ಸಿಗೆ ತಂದುಕೊಂಡ ಶ್ರೀವಿದ್ಯಾತೀರ್ಥರು ತಮಗೆ ಗುರುದಕ್ಷಿಣೆಯಾಗಿ– ಸಮಯಬಂದಾಗ–ರಾಜ್ಯವನ್ನು ಸುಸ್ಥಿತಿಗೆ ತರಬೇಕೆಂದು ಹೇಳಿದ ಹಾಗೆ ತೋರುತ್ತದೆ. ಅಂತು ವಿದ್ಯಾಭ್ಯಾಸವು ಮುಗಿಯುತ್ತಲೇ ಮಾಧವನು ಸಾಯಣನೊಡನೆ ಹಿಂದಿರುಗಿದನು.

## ಪ್ರಾಯಕಾಲ

ಮನೆಗೆ ಬಂದ ಮೇಲೆ ಮಾಧವನ ವ್ಯವಹಾರವು ಹೇಗಿತ್ತೆಂಬದಕ್ಕೆ ಸರಿಯಾದ ಆಧಾರಗಳೇನೂ ಮುಂದೆಬಂದಿಲ್ಲ. ಅವನಿಗೆ ಮದುವೆಯಾದದ್ದೂ ಇಲ್ಲದ್ದೂ ಕೂಡ ಸಂಶಯಾಸ್ಪದವಾಗಿಯೇ ಇದೆ. ಪೂರ್ವಪದ್ಧತಿಯಂತೆ ಅವನು ಅನೇಕ ಶಿಷ್ಯರನ್ನಿಟ್ಟುಕೊಂಡು ಅವರನ್ನು ವಿದ್ವಾಂಸರನ್ನಾಗಿ ಮಾಡುತ್ತ ತನ್ನ ತಮ್ಮನ ಸಹಾಯವನ್ನಿಟ್ಟುಕೊಂಡು ಉದ್ಗ್ರಂಥಗಳ ವಿವರಣರೂಪವಾದ ಅನೇಕ ಗ್ರಂಥಗಳನ್ನು ರಚನೆಮಾಡುತ್ತಿದ್ದನೆಂಬ ವಿಷಯದಲ್ಲಿ ಸಂಶಯವಿಲ್ಲ. ಸುಮಾರು ೬೦-೬೫ನೆಯ ವರ್ಷದವರೆಗೂ ಹೀಗಿದ್ದು ಆಮೇಲೆ ಅವನು ಗುರುದಕ್ಷಿಣಾರೂಪವಾಗಿ ದೇಶಕ್ಕೆ ರಾಜಕೀಯ ಸುಸ್ಥಿತಿಯನ್ನು ತಂದುಕೊಡುವ ಯತ್ನವನ್ನು ಮುಂದುವರಿಸಲು ಧನಸಹಾಯವನ್ನು ಪಡೆಯುವದಕ್ಕಾಗಿ ತನ್ನ ಉಪಾಸ್ಯದೇವತೆಯಾದ ಭುವನೇಶ್ವರಿಯನ್ನು ಕುರಿತು ಕೆಲವು ಕಾಲ ಬರೀ ಬಣ್ಣುಹಂಪಲದ ಮೇಲೆಯೂ ಕೆಲವು ಕಾಲ ಬರೀ ನೀರಿನ ಮೇಲೆಯೂ ಕೆಲವು ಕಾಲ ಒಣವಾಯುವಿನ ಮೇಲೆಯೂ ಜೀವವನ್ನು ಹಿಡಿದುಕೊಂಡು ತಪಶ್ಚರ್ಯೆಯನ್ನು ಮಾಡಿದನು. ಆಗ ದೇವಿಯು ಪ್ರತ್ಯಕ್ಷಳಾಗಿ ಈ ಇಷ್ಟವು ಮುಂದಿನ ಜನ್ಮದಲ್ಲಿ ಸಿದ್ಧವಾಗುವದೆಂದು ಹೇಳಿದಂತೆ ಆಯಿತು. ಆಗ ಮಹಾಪ್ರತಿಭಾಸಂಪನ್ನನಾದ ಮಾಧವನು ತಾನು ಸನ್ಯಾಸವನ್ನು ಸ್ವೀಕರಿಸಿ ಈ ಜನ್ಮದಲ್ಲಿಯೇ ಶಾಸ್ತ್ರದೃಷ್ಟಿಯ ಪ್ರಕಾರ ಮತ್ತೊಂದು ಜನ್ಮವನ್ನು ತಂದುಕೊಳ್ಳುವೆನೆಂದು ಹೇಳಲು ದೇವಿಯು ಹಾಗಾದರೆ ನೀನು ಕೇಳಿದ ಕಡೆಯಲ್ಲಿ ನಾನು ಸುವರ್ಣದ ವೃಷ್ಟಿಯನ್ನೇ ಮಾಡಿ ಬಿಡುವೆನೆಂದು ಹೇಳಿದಳಂತೆ. ಅಂತೂ

ಮಾಧವನು ಆ ದ್ವಿತೀಯ ಜನ್ಮವನ್ನು ತಂದುಕೊಳ್ಳಲು ಶ್ರಿಂಗೇರಿಗೆ ಹೋಗಿ ತಮ್ಮ ವಿದ್ಯಾಗುರುಗಳಾದ ಶ್ರೀವಿದ್ಯಾತೀರ್ಥರಿಂದ ಅನುಗ್ರಹ ವನ್ನು ಪಡೆದಿದ್ದ ಶ್ರೀಭಾರತೀ ಕೃಷ್ಣತೀರ್ಥರಿಂದ ಚತುರ್ಥಾಶ್ರಮ ಸ್ವೀಕಾರ ಮಾಡಿ ಶ್ರಿಂಗೇರಿಯ ಜಗದ್ಗುರು ಸಿಂಹಾಸನದ ಪಟ್ಟಶಿಷ್ಯರಾಗಿ ಶ್ರೀವಿದ್ಯಾರಣ್ಯರೆಂದು ಹೆಸರನ್ನು ಪಡೆದರು.

## ದೇಶಹಿತದ ಕಡೆಗೆ ತಿರುಗಬೇಕೆಂದು ನಿಶ್ಚಯ ಮಾಡಿದ್ದು

ಜಗದ್ಗುರು ಪೀಠದ ಮೇಲೆ ಶ್ರೀಭಾರತೀಕೃಷ್ಣತೀರ್ಥರೇ ಇದ್ದುದ ರಿಂದ ವಿದ್ಯಾರಣ್ಯರು ಶ್ರಿಂಗೇರಿಯಲ್ಲಿಯೇ ನಿಲ್ಲಬೇಕಾದ ಅಗತ್ಯವೇನೂ ಇರಲಿಲ್ಲ. ಇದಲ್ಲದೆ ಹಂಪೆಯ ಪ್ರಾಂತದ ಪರಿಸ್ಥಿತಿಯು ವಿದ್ಯಾರಣ್ಯರ ಮನಸ್ಸನ್ನು ಬಲವಾಗಿ ಸೆಳದಂತೆ ತಿಳಿಯುತ್ತದೆ. ಅಲ್ಲಿಯ ಆಗಿನ ದೇಶದ ಪರಿಸ್ಥಿತಿಯು ಬಹು ವಿಷಾದಕರವಾಗಿತ್ತು. ಮುಸಲ್ಮಾನರ ಮುಷ್ಟಿಯ ಹೊಡೆತದಿಂದ ಹಿಂದುಗಳ ಮುಸುಡಿಗಳೆಲ್ಲಾ ಮುರಿದು ಮುಕ್ಕಾಗಿ ಹೋಗಿದ್ದವು. ಮಹಮ್ಮದಬಿನ್‌ತೊಗಲಕ, ಅಲ್ಲಾವುದ್ದೀನ, ಮಲ್ಲೀಕ ಕಾಫರ–ಮೊದಲಾದವರ ದಾಳಿಗಳಿಂದ ಕರ್ಣಾಟಕವೆಲ್ಲ ತಲ್ಲಣಿಸಿ ಹೋಗಿತ್ತು. ಹೆಂಗಸರು ಮಕ್ಕಳು ಎಲ್ಲರೂ ಜೀವಿತೆಯಲ್ಲಿ ಕೂಡ ನಿರಾಶರಾಗಿ ಮೃತ್ಯುಮುಖವನ್ನು ಎದುರುನೋಡುತ್ತಿದ್ದರು. ಹಿಂದುಗಳ ಧರ್ಮವೆಂಬುವದು ಹೇಳುವದಕ್ಕೆ ಹೆಸರುಕೂಡ ಇಲ್ಲದಂತೆ ಹಾರಿ ಹೋಗಿತ್ತು. ಸಮಸ್ತ ಪಂಡಿತರೂ ತಪಸ್ವಿಗಳೂ ಬಾಯಲ್ಲಿ ಅಕ್ಕೀ ಕಾಳನ್ನು ಹಾಕಿಕೊಂಡು ಎಲ್ಲಿಯೋ ಮರೆಯಲ್ಲಿ ಕುಟುಕು ಜೀವವನ್ನು ಹಿಡಿದುಕೊಂಡಿದ್ದರು ಹಂಪೆಯ ಬಳಿಯಲ್ಲಿರುವ ಆನೇಗೊಂದಿಯ ರಾಜನಾದ ಜಂಬುಕೇಶ್ವರನು ಮುಸಲ್ಮಾನರ ಚಿತ್ರಹಿಂಸೆಗೆ ಗುರಿಯಾಗ ಲಾರದೆ ತನ್ನ ಪತ್ನಿಯರೊಡನೆ ಅಗ್ನಿಪ್ರವೇಶವನ್ನು ಮಾಡಿದ್ದನು. ಹೀಗೆ ಅನರ್ಥಪರಂಪರೆಗಳು ನಡೆದುಹೋಗಿ ಕರ್ಣಾಟಕಮಾತೆಯ ಮಂಗಳಸೂತ್ರಕ್ಕೆ ಕಂಡಕಂಡವರು ಕೈಹಾಕಿ ಕಿತ್ತು ಚೆಲ್ಲುತ್ತಿರುವದನ್ನು ನೋಡಿ ತಮ್ಮ ವಿದ್ಯಾಗುರುಗಳ ಅಪೇಕ್ಷೆಯನ್ನು ಪೂರ್ಣಮಾಡುವದಕ್ಕೆ ವಿದ್ಯಾರಣ್ಯರು ಹಂಪೆಗೆ ಬಂದರು. ಹಂಪೆಯಲ್ಲಿ ಅವರು ತಪಶ್ಚರ್ಯ ಯನು ಮಾಡುತಿರುವಾಗ ಅವರ ಬಳಿಗೆ ಹುಕ್ಕ, ಬುಕ್ಕ ಎಂಬಿಬ್ಬರು

ದೀನವದನರಾಗಿ ಬಂದರು. ಈ ಹುಕ್ಕಬುಕ್ಕರು ವಿದ್ಯಾರಣ್ಯರ ತಪಶ್ಚರ್ಯಾಕಾಲದಲ್ಲಿ ಎಷ್ಟೋವೇಳೆ ಹಾಲು, ಹಣ್ಣು-ಮೊದಲಾದವುಗಳನ್ನು ಕೊಟ್ಟು ಅವರ ಪ್ರೀತಿಗೆ ಪಾತ್ರರಾದವರು. ಅಷ್ಟೇ ಅಲ್ಲ. ವಿದ್ಯಾರಣ್ಯರ ಪೂರ್ವಾಶ್ರಮದ ಪೂರ್ವಿಕರು ಹುಕ್ಕಬುಕ್ಕರ ಮನೆತನದ ಪುರೋಹಿತರು. ಅವರು ಬಂದು ತಮ್ಮ ಗೋಳನ್ನು ಹೇಳಿಕೊಂಡು ಈ ದುಷ್ಕಾಲದಲ್ಲಿ ತಮ್ಮನ್ನು ಕೈಹಿಡಿದು ನಿಲ್ಲಿಸಬೇಕೆಂದು ಬೇಡಿಕೊಂಡರು. ಈ ಸಮಯದಲ್ಲಿ ಆ ಪ್ರಾಂತದಲ್ಲಿ ಜನರೆಲ್ಲರೂ ಮುಸಲ್ಮಾನರ ಆಳಿಕೆಯೆಂದರೆ ವಿಷವನ್ನು ಕಕ್ಕುವಂಥವರಾಗಿ ತಮ್ಮ ಸ್ವರಾಜ್ಯಸ್ಥಾಪನೆಗಾಗಿ ಮನಸ್ಸಿನಲ್ಲಿಯೇ ಮಂಡಿಗೆಗಳನ್ನು ಮಾಡಿಕೊಳ್ಳುತ್ತಿದ್ದರು. ಇದೊಳ್ಳೇಸಮಯವೆಂದು ನೋಡಿ ವಿದ್ಯಾರಣ್ಯರು ಇನ್ನುಮುಂದೆ ತಾವು ತಮ್ಮ ಜೀವಿತವನ್ನು ಸ್ವರಾಜ್ಯಸ್ಥಾಪನೆಗಾಗಿ ಸವೆಸಬೇಕೆಂದು ನಿಶ್ಚಯಮಾಡಿದರು.

## ಕನಕವೃಷ್ಟಿ

ವಿದ್ಯಾರಣ್ಯರು ತಾವು ಸ್ಥಾಪನೆಮಾಡಬೇಕಾದ ಸ್ವರಾಜ್ಯಕ್ಕೆ ಹಂಪೆಯೇ ತಕ್ಕ ಸ್ಥಲವೆಂದು ಗೊತ್ತುಮಾಡಿದರು. ಏಕೆಂದರೆ ಸುತ್ತಲೂ ಪರ್ವತಶ್ರೇಣಿಯಿದ್ದು ನಡುವೆ ಪವಿತ್ರವಾದ ತುಂಗಭದ್ರಾನದಿಯು ಹಾದು ಹೋಗುತ್ತಿತ್ತು. ಆದ್ದರಿಂದ ಅಲ್ಲಿಯೇ ಕರ್ಣಾಟಕದ ಸ್ವರಾಜ್ಯವನ್ನು ಸ್ಥಾಪಿಸಬೇಕೆಂದು ಮನಸ್ಸಿನಲ್ಲಿಯೇ ಅಲ್ಲಿ ಹುಕ್ಕನಿಗೆ ಪಟ್ಟವನ್ನು ಕಟ್ಟಿದರು. ಮತ್ತು ಜನಮಂಡಲಿಯ ಸಹಾಯವನ್ನು ಪಡೆದು ಮುಸಲ್ಮಾನರ ಅಧಿಕಾರಿಯನ್ನು ಓಡಿಸುವಂತೆ ಹುಕ್ಕಬುಕ್ಕರಿಗೆ ಒತ್ತಾಸೆಯನ್ನು ಕೊಟ್ಟರು. ವಿದ್ಯಾರಣ್ಯರ ಬೆಂಬಲ ದೊರೆಯುತ್ತಲೇ ಹುಕ್ಕಬುಕ್ಕರು ಚಿಗಿತುಕೊಂಡರು. ಎಲ್ಲೆಲ್ಲಿಯೂ ಅವರ ಕೈ ಮುಂದಾಗುತ್ತ ಹೋಯಿತು. ಹುಕ್ಕನು ಆನೇಗೊಂದಿಯ ರಾಜನಾದನು. ಆಮೇಲೆ ವಿದ್ಯಾರಣ್ಯರು ಹುಕ್ಕನ ತಮ್ಮಂದಿರು, ಮಗ, ಅಳಿಯ-ಮುಂತಾದವರನ್ನೆಲ್ಲಾ ಒಬ್ಬೊಬ್ಬರನ್ನು ಒಂದೊಂದು ಕಡೆಗೆ ಕಳುಹಿಸುವ ಯೋಚನೆಯನ್ನು ನಡೆಸಿದರು. ಉದ್ದೇಶವೇನೆಂದರೆ ಇತರ ದೇಶಗಳನ್ನು ತಾವು ಬಡಿದು ಬಾಚಿಹಾಕಿಕೊಳ್ಳುವದಲ್ಲ; ಕರ್ಣಾಟಕಕ್ಕೆ ವಿಪತ್ಪರಂಪರೆಗಳೊದಗದಂತೆ ಎಲ್ಲರೂ ಪರಸ್ಪರಮಿತ್ರಭಾವದಿಂದ ಒಂದುಗೂಡಿ ಸೌಜ

ನ್ಯಪೂರ್ವಕವಾಗಿ ಸ್ವರಾಜ್ಯವನ್ನು ಅನುಭವವಾಡುವದಕ್ಕೆ ಈ ದಿವ್ಯ ಸಂದೇಶದೊಡನೆ ಜನರು ಮುಂದುವರಿಯುತ್ತಲೇ ಇತರರಾಜರುಗಳೆಲ್ಲಾ ಅವರನ್ನು ಗೌರವಿಸುವದಕ್ಕಾರಂಭಿಸಿದರು. ಇಷ್ಟರಲ್ಲಿ ಹಂಪೆಯಲ್ಲಿ ವಿದ್ಯಾರಣ್ಯರು ಭುವನೇಶ್ವರಿಯನ್ನು ಪ್ರಾರ್ಥಿಸಿ ಕನಕವೃಷ್ಟಿಯನ್ನು ಮಾಡಿಸಿದರೆಂದು ಎಲ್ಲೆಲ್ಲಿಯೂ ಸುದ್ದಿ ಹಬ್ಬಿತು. ಇಂಥ ಪ್ರಭಾವವುಳ್ಳ ಮಹಾತಪಸ್ವಿಗಳಾದ ವಿದ್ಯಾರಣ್ಯರ ಬೆಂಬಲವಿದ್ದ ಮೇಲೆ ಆರಾಜ್ಯವು ನಿಜವಾದ ಸ್ವರಾಜ್ಯವಾಗುವದೆಂದು ಎಲ್ಲರಿಗೂ ಭರವಸೆಯಾಯಿತು. ಆದ್ದರಿಂದ ಏಕಕಾಲಕ್ಕೆ ಹುಕ್ಕನ ರಾಜ್ಯವು ಹನುಮನ ಬಾಲದಂತೆ ಬೆಳೆದೇ ಬೆಳೆಯಿತು.

## ವಿಜಯನಗರ ಸ್ಥಾಪನೆ

ವಿದ್ಯಾರಣ್ಯರು ತಮ್ಮ ಕರ್ನಾಟಕ ರಾಜಧಾನಿಯನ್ನು ಹಂಪೆಯಲ್ಲಿ ಸ್ಥಾಪನೆಮಾಡುವ ಸಿದ್ಧತೆಯನ್ನು ನಡೆಸಿದರು. ಅಲ್ಲಿ ಸುವರ್ಣವೃಷ್ಟಿ ಯಾಯಿತೆಂಬಂತೆ ಧನರಾಶಿಯು ಸಮೃದ್ಧಿಯಾಗಿ ದೊರೆತದ್ದರಿಂದ ನಗರನಿರ್ಮಾಣಕಾರ್ಯವು ನಿರಾತಂಕವಾಗಿ ನಡೆಯಿತು. ಹೀಗೆ ಅವರು ಅಲ್ಲಿಯೇ ಕ್ರಿ. ೧೩೩೬ ರಲ್ಲಿ ಬಹುವಿಸ್ತಾರವಾದ ರಾಜಧಾನಿ ಯನ್ನು ಮಾಡಿದರು. ವಿದ್ಯಾರಣ್ಯರ ಪ್ರಭಾವದಿಂದಾದ ಕನಕ ವೃಷ್ಟಿಯ ಭಾಗದಿಂದ ಜನರೆಲ್ಲರೂ ಪುಷ್ಟಿಗೊಂಡಂತೆ ಆಗಿ ಬಹು ಕ್ಷಿಪ್ರದಲ್ಲಿಯೇ ಮುಸಲ್ಮಾನರ ಸುಲಿಗೆಗಳ ನಷ್ಟದಿಂದ ಚೇತರಿಸಿಕೊಂಡು ನೆಮ್ಮದಿಯಾದ ಜೀವನವನ್ನು ಕಂಡರು. ವಿದ್ಯಾರಣ್ಯರು ಬರೀ ದೊಡ್ಡದೊಂದು ರಾಜಧಾನಿಯನ್ನು ಕಟ್ಟಿದ್ದಿಷ್ಟೇಅಲ್ಲ; ಹಿಂದಿನಂತೆ ಕಾವೇರಿಯಿಂದ ಗೋದಾವರಿಯವರೆಗಿನ ನಾಡಿನಲ್ಲಿ ಮತ್ತೆ ಐಕಮತ್ಯ ವನ್ನು ತಂದು ಕರ್ನಾಟಕಸ್ಥರಿಗೆ ಸ್ವರಾಜ್ಯವನ್ನು ಸೂರೆಮಾಡಿಬಿಟ್ಟರು. ಅವರು ಸ್ಥಾಪನೆಮಾಡಿದ ವಿಜಯನಗರವೆಂಬ ಪಟ್ಟಣವನ್ನು ಈಚೆಗೆ ಯುರೋಪ್ ಮೊದಲಾದ ದೇಶದವರುನೋಡಿ ಮೂಗಿನ ಮೇಲೆ ಬೆರಳಿಟ್ಟುಕೊಂಡು ಬಾಯಿತುಂಬ ಹೊಗಳಿ ಕೈತುಂಬ ಬರೆದಿಟ್ಟಿದ್ದಾರೆ. ಒಟ್ಟಿನಮೇಲೆ ವಿಜಯನಗರವು ಸರಸ್ವತಿಗೂ ಲಕ್ಷ್ಮಿಗೂ ಒಂದೇ ರಂಗ ಭೂಮಿಯಾಗಿ ಲೋಕಕ್ಕೆ ಅನ್ಯಾದೃಶವಾದ ನಿದರ್ಶನವಾಯಿತು.

## ವಿಶೇಷವಿಷಯ

ವಿದ್ಯಾರಣ್ಯರು ರಾಜ್ಯಸ್ಥಾಪನೆ ಮಾಡಿದ್ದಿಷ್ಟೇ ಅಲ್ಲ. ಬರೇ ಹುಕ್ಕನ ಮನೆತನದ ಪುರೋಹಿತನಾದ ಮಾಧವನಾಗಿದ್ದ ವಿದ್ಯಾರಣ್ಯರು ಈಗ ಐವತ್ತಾರು ವರ್ಷ ಅವಿಚ್ಛಿನ್ನವಾಗಿ ರಾಜಗುರುತ್ವವನ್ನು ವಹಿಸಿ ಸಮಸ್ತ ರಾಜ್ಯಭಾರದ ಸೂತ್ರಧಾರಕರಾಗಿ ಸ್ವರಾಜ್ಯಸ್ವರೂಪವೆಂಥದ್ದೆಂಬ ದನ್ನು ಮಾಡಿ ತೋರಿಸಿರುತ್ತಾರೆ. ಮಹಾ ವಿರಕ್ತಶಿರೋಮಣಿಗಳಾದಂಥ ನ್ಯಾಯಮೂರ್ತಿಗಳಾದಂಥ ನಿಷ್ಪಕ್ಷಪಾತಿಗಳಾದಂಥ ವಿದ್ಯಾರಣ್ಯರ ಕೈಯಲ್ಲಿ ರಾಜ್ಯವು ಸಿಕ್ಕಿದ್ದರಿಂದ ವಿಜಯನಗರದ ರಾಜ್ಯವು ರಾಮರಾಜ್ಯ ವಾಯಿತು. ವಿಜಯನಗರದ ರಾಜ್ಯದಲ್ಲಿ ಬರೀ ಹಿಂದುಗಳೇ ಇರದೆ ಮುಸಲ್ಮಾನರೂ ಜೈನರೂ ಲಿಂಗಾಯತರೂ-ಹೀಗೆ ಬೇರೆಬೇರೆ ಧರ್ಮ ಪಂಥದವರು ಇದ್ದದರಿಂದ ಅವರು ಎಲ್ಲರಿಗೂ ಸಮಾಧಾನವಾಗುವ ಏರ್ಪಾಡುಗಳನ್ನು ಮಾಡಿದ್ದರು ಮುಸಲ್ಮಾನರು ಹಿಂದುಗಳ ಹೃದಯ ವೆಂಬ ಜಲಾಶಯಗಳನ್ನೆಲ್ಲಾ ತುಳಿದು ತಳದಲ್ಲಿದ್ದ ಕಶ್ಮಲಗಳನ್ನೆಬ್ಬಿ ಸಿದ್ದರೂ ಶಾಂತತೆಯ ಕಾಲದಲ್ಲಿ ಅದರ ಸೇಡು ತೀರಿಸಿಕೊಳ್ಳುವ ಯೋಚನೆ ಹಿಂದುಗಳಿಗೆ ಉಂಟಾಗದಂತೆ ಅವರಿಬ್ಬರನ್ನೂ ಪ್ರೇಮಬಂಧದಿಂದ ಕಟ್ಟಿದರು. ಆಗಿನ ಕಾಲದಲ್ಲಿ ಹತ್ತರದಲ್ಲಿ ಪ್ರಸಿದ್ಧಮಹಮ್ಮದೀಯ ರಾಜ್ಯದಲ್ಲಿದ್ದ ಹಸನ್ ಗಂಗೋರಾಜನಿಗೆ ಒಂದುತ್ತಮರತ್ನವನ್ನು ಪಾರಿ ತೋಷಕವಾಗಿ ಕಳುಹಿಸಿ ಅವನ ಸಹಾನುಭೂತಿಯನ್ನು ಪಡೆದುಕೊಂಡ ದ್ದಲ್ಲದೆ ವಿಜಯನಗರದವರು ವಿದ್ಯಾರಣ್ಯರ ಕಾಲದಲ್ಲಿ ಜೈನರಿಗೂ ಲಿಂಗಾಯತರಿಗೂ ದೊಡ್ಡದೊಡ್ಡ ಅಧಿಕಾರಗಳನ್ನು ಕೊಟ್ಟರು. ವಿದ್ಯಾ ರಣ್ಯರು ಸಾಯಣರೊಡನೆ ಸೇರಿ ಬೇರೆಬೇರೆ ವಿಷಯಗಳ ಮೇಲೆ ಅನೇಕ ಗ್ರಂಥಗಳನ್ನು ಬರೆದದ್ದಲ್ಲದೆ ವೇದಗಳಿಗೆ ಕೂಡ ಭಾಷ್ಯವನ್ನು ಬರೆ ದಿರುವರು. ಇದರಿಂದ ಅವರಿಗೆ ಆಚಾರ್ಯರೆಂಬ ಬಿರುದು ಬಂದು ಅದು ಮಾಧವ ಎಂಬ ಹೆಸರಿಗೆ ಸಂಬಂಧಿಸಿಕೊಂಡಿರುವದು. ಧರ್ಮ ಶಾಸ್ತ್ರ, ಸ್ಮೃತಿಗಳು, ವೈದ್ಯಶಾಸ್ತ್ರ, ವೇದಾಂತ, ವ್ಯಾಕರಣ ಮೊದಲಾದ ಪ್ರತಿಯೊಂದು ವಿಷಯದಲ್ಲಿಯೂ ಎಷ್ಟೆಷ್ಟೋ ಗ್ರಂಥಗಳನ್ನು ಬರೆದು ಭಾಷಾ ಸೇವೆ ಮಾಡಿದವರಲ್ಲಿ ವಿದ್ಯಾರಣ್ಯರು ಅದ್ವಿತೀಯರಾಗಿರುವರು. ಎರಡು ಕೈಯಲ್ಲಿಯೂ ಕತ್ತಿಯನ್ನು ತಿರುವಬಲ್ಲ ಶೂರರಂತೆ ಇವರು

ವೇದಶಾಸ್ತ್ರಗಳಲ್ಲಿ ಹೇಗೋ ಹಾಗೆ ರಾಜನೀತಿಯಲ್ಲಿಯೂ ಒಂದೇ ಸಮನಾಗಿ ತಮ್ಮ ಚಾತುರ್ಯವನ್ನು ವ್ಯಕ್ತಗೊಳಿಸಿರುವರು. ಇವರು ವಿಜಯನಗರದಲ್ಲಿ ಸ್ವರಾಜ್ಯವನ್ನು ಸ್ಥಾಪನೆ ಮಾಡಿ ಪಡೆದ ಕರ್ನಾಟಕ ಸಿಂಹಾಸನಪ್ರತಿಷ್ಠಾಪನಾಚಾರ್ಯರೆಂಬ ಸುವರ್ಣಾಕ್ಷರಗಳು ಈಗಲೂ ಶೃಂಗಗಿರಿಯ ಮಠದ ಬಿರುದುಗಳ ಒಕ್ಕಣೆಯಲ್ಲಿ ವಿರಾಜಮಾನಗಳಾಗಿರುವವು. ಶೃಂಗೇರಿಯಲ್ಲಿ ಸುಸೂತ್ರವಾಗಿ ಕೆಲಸವನ್ನು ಸಾಗಿಸುವವರು ಬೇರೆ ಇದ್ದದರಿಂದ ಇವರು ವಿಶೇಷವಾಗಿ ಅಲ್ಲಿಗೆ ಹೋಗಲೇ ಇಲ್ಲ. ವಿಜಯನಗರದಲ್ಲಿಯೇ ನಿಂತು ಹುಕ್ಕನೂ ಬುಕ್ಕನೂ ಆಳಿ ತೀರಿ ಹೋಗಿ ಹರಿಹರನೆಂಬ ಮೂರನೇ ಅರಸು ಬರುವವರೆಗೂ ಲೋಕೋತ್ತರವಾದ ರಾಜ್ಯಭಾರವನ್ನು ನಡೆಸಿದ ಮೇಲೆ ವಿದ್ಯಾರಣ್ಯರು ಮನುಷ್ಯ ಜನ್ಮದ ಪರಮಾವಧಿಯು ಮುಗಿದದ್ದರಿಂದ ಅಲ್ಲಿಯೇ ವಿರೂಪಾಕ್ಷೇಶ್ವರನ ಹಿಂದುಗಡೆಯಲ್ಲಿ ಕ್ರಿ. ೧೩೮೬ರಲ್ಲಿ ( ಶಾ. ೧೩೦೯ ಕ್ಷಯಸಂವತ್ಸರದ ಜೇಷ್ಟ ಬ|| ೧೩ ಶನಿವಾರ ) ಮಹಾಸಮಾಧಿಸ್ಥರಾದರು. ಆಮೇಲೆ ಆ ಹರಿಹರರಾಜನು ಶೃಂಗೇರಿಯ ಹತ್ತರ ಒಂದು ಅಗ್ರಹಾರವನ್ನು ಕಟ್ಟಿಸಿ ವಿದ್ಯಾರಣ್ಯರ ಜ್ಞಾಪಕಾರ್ಥವಾಗಿ ವಿದ್ಯಾರಣ್ಯಪುರವೆಂದು ಹೆಸರಿಟ್ಟು ಬ್ರಾಹ್ಮಣರಿಗೆ ದಾನಮಾಡಿರುವದು ಈಗಲೂ ಇರುವದು. ವಿದ್ಯಾರಣ್ಯರಿಗೆ ಶಿಲ್ಪಕಲೆಯಲ್ಲಿ ಎಷ್ಟು ಪ್ರೇಮವಿತ್ತೆಂಬದಕ್ಕೆ ಮತ್ತು ಆ ಕಾಲದಲ್ಲಿ ಆ ಕಲೆ ಎಷ್ಟು ಬೆಳೆದಿತ್ತೆಂಬದಕ್ಕೆ ವಿದ್ಯಾರಣ್ಯರು ಶೃಂಗೇರಿಯಲ್ಲಿ ಕಟ್ಟಿಸಿರುವ ವಿದ್ಯಾಶಂಕರ ದೇವಸ್ಥಾನವೂ ಹಂಪೆಯಲ್ಲಿ ಹಾಳು ಬಿದ್ದಿರುವ ಅನೇಕ ದೇವಾಲಯಗಳೂ, ಸಾಕ್ಷಿಗಳಾಗಿ ನಿಂತಿರುವವು. ವಿದ್ಯಾರಣ್ಯರ ಸ್ಥೂಲದೇಹವು ಅದೃಶ್ಯವಾದರೂ ಅವರ ಯಶಶ್ಶರೀರವು ಆಚಂದ್ರಾರ್ಕವಾಗಿರುವದು.

# ಪ್ರತಾಪಸಿಂಹ

## ಹುಟ್ಟು

ಪರ್ವತಗಳು ತಾವೂ ಕಷ್ಟಸಹಿಷ್ಣುಗಳಾಗಿ ತಮ್ಮ ಸ್ವಭಾವಸ್ಥಿ
ಯಿಂದ ಎಂದೆಂದಿಗೂ ಕದಲದೆ ಇರುವಂಥವುಗಳಾಗಿರುವವಲ್ಲದೆ ತ
ಆಶ್ರಯದಲ್ಲಿ ವಾಸಮಾಡುವಂಥವರಲ್ಲಿ ಕೂಡ ತಮ್ಮ ಗುಣಗಳ
ತುಂಬಿತೂರಿರುವವೆಂದು ತಿಳಿದು ಬರುತ್ತದೆ. ನಮ್ಮ ಹಿಂದುಸ್ತಾನ
ಪಶ್ಚಿಮದ ಕಡೆಯಲ್ಲಿ "ಅರವಲ್ಲಿ" ಎಂಬದೊಂದು ಪರ್ವತದ ಸಾ
ಕಂಗೊಳಿಸುತ್ತಿರುವದು. ಆ ಗುಡ್ಡನಾಡಿನಲ್ಲಿ ಎಷ್ಟೋ ಸಣ್ಣ ಪು
ರಾಜ್ಯಗಳಿರುವವು. ಅವುಗಳಲ್ಲಿ ಮೇವಾಡವೆಂಬುದೊಂದು ರಾ
ಅಲ್ಲಿಯ ಜನರು ರಾಜಪುತ್ರರೆಂದು ಪ್ರಸಿದ್ಧರಾಗಿರುವರು. ಅವ
ತಾವು ಕ್ಷತ್ರಿಯರೆಂದೂ ಮನುಷ್ಯನಾಗಿದ್ದು ರಾಕ್ಷಸರ ಬೆನ್ನನ್ನು
ಕ್ಕೊರಗಿಸಿದಂಥ ಮಹಾಸಾಹಸಿಯಾದ ಶ್ರೀರಾಮಚಂದ್ರನೆಂಬ ದೇವಾ
ಸಂಭೂತನನ್ನು ಕೂಡ ಒಮ್ಮೆ ಮೂರ್ಛೆಗೊಳಿಸಿದ ಲವನ ವಂಶೀ
ರೆಂದೂ ಹೇಳಿಕೊಳ್ಳುವರು. ಲವನವರೆಗಿನ ವಂಶವೃಕ್ಷವನ್ನು ಹೊಂ
ತೋರಿಸುವದಕ್ಕೆ ನಾವು ಉಪಕರಣಗಳ ಅಭಾವದ ದೆಸೆಯಿಂದ ಒಂ
ಪಕ್ಷ ಹಿಂದುಮುಂದು ನೋಡಬಹುದಾದರೂ ಮೇವಾಡದವರ ಧಮ
ಗಳಲ್ಲಿರುವ ರಕ್ತವು ಆ ಮಹಾವೀರಾಗ್ರಣಿಯಾದ ಲವನ ಪರಂಪರೆಯಿ
ಹರಿದುಬಂದದ್ದೆಂಬದಕ್ಕೆ ಹಿಂದುಮುಂದು ನೋಡಬೇಕಾಗಿಲ್ಲವೆನ್ನುವ
ಆ ರಾಜಪುತ್ರರ ಅಸಾಮಾನ್ಯಸಾಹಸಕೃತ್ಯಗಳ ಎಷ್ಟೋ ನಿದಶ
ಗಳಿರುವವು. ಸಾಹಸಕೃತ್ಯಗಳು ಕಾಣಲಿ ಕಾಣದಿರಲಿ; ವಿಶಾಲವ
ಎದೆ, ಉದ್ದವಾದ ಬಾಹುಗಳು, ದೀರ್ಘವಾದ ದೇಹ, ಬಿಗಿಯಾದ
ಕಟ್ಟು—ಮೊದಲಾದ ಅವರ ದೇಹರಚನೆಯೇ ಕ್ಷಾತ್ರತೇಜಸ್ಸಿನ ಮೂ
ಸ್ವರೂಪವೆಂಬ ಭಾವನೆಯನ್ನುಂಟು ಮಾಡುತ್ತಿರುವದು. ಯಾ
ತಮ್ಮ ಜನ್ಮಭೂಮಿಗೆ ಇತರರ ದೃಷ್ಟಿ ತಾಕಿದಾಗ ಆ ದೃಷ್ಟಿದೋ
ಪರಿಹಾರಕ್ಕಾಗಿ ಭೂಮಾತೆಗೆ ತಮ್ಮ ಜೀವಜ್ಯೋತಿಯಿಂದ ಆರತಿ

ನ್ನೆತ್ತುವದಕ್ಕೆ ನಾನು ಮುಂದು ತಾನು ಮುಂದೆಂದು ತವಕಿಸುವರೊ, ಯಾರು ದೇಶವನ್ನೂ ಧರ್ಮವನ್ನೂ ಸ್ತ್ರೀಯರನ್ನೂ ಸರ್ವ ವಿಧದಿಂದಲೂ ರಕ್ಷಣ ಮಾಡುವದೇ ತಮ್ಮ ಕರ್ತವ್ಯವೆಂದು ದೀಕ್ಷೆಯನ್ನು ವಹಿಸಿರುವರೋ ಯಾರ ವಂಶದಲ್ಲಿ ಸ್ತ್ರೀಯರು ಪರಪುರುಷರ ಸೋಂಕಿಗೆ ಅವಕಾಶ ವನ್ನೀಯದೆ ಅಂಥ ಬಿಕ್ಕಟ್ಟಿನ ಸಮಯದಲ್ಲಿಯೂ ನಗುಮುಖದಿಂದ ಆಜ್ಯಾಹುತಿಯಂತೆ ತಮ್ಮ ದೇಹವನ್ನು ಯಜ್ಞೇಶ್ವರನಿಗೆ ಸಮರ್ಪಿಸಿದು ವರೋ ಯಾರು ಸ್ವದೇಶದ, ಸ್ವಧರ್ಮದ, ಸ್ವಾಭಿಮಾನದ ಕಾರ್ಯ ಸಾಧನೆಯ ಮುಂದೆ ಜೀವವೆಂಬುದನ್ನೊಂದು ಕಃಪದಾರ್ಥವಾಗಿ ಕಡೆ ಗಣ್ಣಿಂದ ನೋಡುವರೋ, ಅಂಥ ರಾಜಪುತ್ರರ ಮನೆತನದಲ್ಲಿ—ಅದರ ಲ್ಲಿಯೂ ಯಾರು ಧರ್ಮಯುದ್ಧಕ್ಕೆ ಮೈಗೊಟ್ಟು ಒಂದು ಕೈ, ಒಂದು ಕಾಲು ಮತ್ತು ಒಂದು ಕಣ್ಣು ಹೋದರೂ ಕೂಡ ಉತ್ಸಾಹಪೂರ್ಣ ವಾಗಿಯೇ ರಣರಂಗದಲ್ಲ ಗುಡುಗಾಡಿ ದೇಹವೆಲ್ಲ ಶಸ್ತ್ರಘಾತದಿಂದ ಚೂರುಚೂರಾಗುವವರೆಗೂ ಏಕಪ್ರಕಾರವಾಗಿ ಹೆಣಗಿದನೋ ಅಂಥ ಸಂಗ್ರಾಮಸಿಂಹನ ಮೊಮ್ಮಗನಾಗಿ—ಈ ನಮ್ಮ ಕಥಾನಾಯಕನು ಹದಿ ನೈದನೆಯ ಶತಮಾನದಲ್ಲಿ ಹುಟ್ಟಿ ಹಿಂದುಸ್ಥಾನವನ್ನು ಕಣ್ದೆರೆದು ನೋಡಿದನು.

## ಚಿಕ್ಕಂದಿನ ಶಿಕ್ಷಣ

ರಾಜಪುತ್ರರಿಗೆ ಪ್ರತಾಪದ ಮೇಲೆ ಬಹುಪ್ರೇಮ. ಪ್ರತಾಪವೇ ಅವರ ಜೀವವೆಂದರೂ ಸಲ್ಲುವದು. ಆದ್ದರಿಂದ ತಂದೆತಾಯಿಗಳು ಆ ಶಿಶುವನ್ನು ಪ್ರತಾಪನೆಂದು ಕರೆದರು. ರಾಜಪುತ್ರರು ಕರಡುಕಾಗದಗಳ ಮೇಲೆ ಬರೆಯುವ ಬರಹವನ್ನು ಓದಿಸುವವರಲ್ಲ; ತಮ್ಮ ದೇಶದ ಮೇಲೆ ಮತ್ತು ಧರ್ಮದವರ ಮೇಲೆ ಪ್ರತಿಭಟಿಸುವವರ ಹೃದಯವೆಂಬ ಹಲಿಗೆ ಯನ್ನು ಹರಿತವಾದ ಕತ್ತಿಯಿಂದ ಕೊರೆದು ಅದರಲ್ಲಿ ಪ್ರತಾಪದ್ಯೋತಕ ವಾದ ಮಹಾವಾಕ್ಯವನ್ನು ರೂಪುಗೊಳಿಸುವದೇ ಅವರ ಅಕ್ಷರಾಭ್ಯಾಸ. ನಮ್ಮ ಪ್ರತಾಪನಿಗೆ ಈ ಬಗೆಯ ಅಭ್ಯಾಸವೇ ನಡೆಯಿತು. ಕುದುರೆ ಯನ್ನು ಹತ್ತುವದು, ಬೇಟೆಯನ್ನಾಡುವದು—ಇವೇ ಅವನ ನಿತ್ಯ ವಿಧಿ ಗಳಾಗಿದ್ದವು. ಇದರ ಮೇಲೆ ವೀರರಸಪ್ರಧಾನವಾದ ರಾಷ್ಟ್ರಗೀತೆಯನ್ನು

ಊರಲ್ಲೆಲ್ಲಾ ಹಾಡುತ್ತ ಜನರನ್ನು ಹುರಿದುಂಬಿಸುವದೆಂದರೆ ಅವನಿಗೆ ಬಹುಪ್ರೀತಿ. ಯುದ್ಧಪ್ರಸಂಗವೆಂದರೆ ಅವನಿಗೆ ದೀಪಾವಳಿಯ ಹಬ್ಬ ವೆನಿಸುತ್ತಿತ್ತು.

## ಸ್ಥಾನಭ್ರಷ್ಟತೆ

ಪ್ರತಾಪಸಿಂಹನ ತಂದೆಯು ಉದಯಸಿಂಹನು. ಇವನು ಚಿತ್ತೂರಲ್ಲಿ ಮಹಾರಾಜನೆನಿಸಿ ರಾಜ್ಯಭಾರವನ್ನು ಮಾಡುತ್ತಿದ್ದನು. ಪ್ರತಾಪನ ತಾಯಿ ಕರ್ಣಾವತಿ. ಆಕೆಯು ರಾಜಪುತ್ರರ "ರಾಖಿ" ಎಂಬ ಪದ್ಧತಿಯಂತೆ ಹುಮಾಯೂನನ ಸಹೋದರತ್ವವನ್ನು ಪಡೆದಿದ್ದಳು. ಹುಮಾಯೂನನ ಮಗನಾದ ಅಕಬರನು ಆಧರ್ಮಬಂಧವನ್ನು ಲಕ್ಷ್ಯ ಮಾಡದೆ, ಉದಯಸಿಂಹನು ಇತರರಂತೆ ತನಗೆ ಆಧೀನನಾಗಲಿಲ್ಲವೆಂಬ ಸಂಕಟದಿಂದ ಮತ್ತು ತನ್ನ ಶತ್ರುಗಳಿಗೆ ಇದು ಆಶ್ರಯಸ್ಥಾನವೆಂಬ ಅಸೂಯೆಯಿಂದ ಸ್ವಪ್ರತಿಷ್ಠೆಯನ್ನು ಬೆಳೆಸಬೇಕೆಂದು ಬಲವತ್ತರವಾದ ಮಹತ್ವಾಕಾಂಕ್ಷೆಯನ್ನಿಟ್ಟುಕೊಂಡು ದಂಡನ್ನು ಕಳುಹಿಸಿದನು. ಉದಯಸಿಂಹನಿದ್ದದ್ದು ಬಹು ಬಲವಾದ-ಪ್ರಪಂಚಕ್ಕೇ ಮೇಲುಗೈಯ್ಯಾಗಿದ್ದ—ಚಿತ್ತೂರ ಕೋಟೆ. ಯುದ್ಧವಾರ್ತೆಯು ಬರುತ್ತಲೇ ಪ್ರತಾಪನು ತನ್ನ ಮಧುರಸ್ವರದಿಂದ ರಾಷ್ಟ್ರಗೀತೆಯನ್ನು ಹಾಡಿ ಆ ನಾಡಿನವರ ಹೃದಯದಲ್ಲೆಲ್ಲಾ ವೀರರಸವನ್ನು ಉಕ್ಕಿಸಿದನು. ಬರೀ ಗಂಡಸರೇ ಅಲ್ಲ—ಸಿಂಹದ ಜಾತಿಯಲ್ಲಿ ಗಂಡೇನು ಹೆಣ್ಣೇನು ?—ಸ್ತ್ರೀಯರೂ ಕೂಡ ದುರ್ಗಾವತಾರವನ್ನು ತಾಳಿ ಕತ್ತಿಯನ್ನು ಹಿರಿದು ಶತ್ರುಗಳನ್ನು ಬೆರಗು ಮಾಡಿ ರಣರಂಗದಲ್ಲಿ ಚೆಲ್ಲಿದ ರಕ್ತವು ಶೋಣವರದಂತೆ ದಡದಡನೆ ಹರಿದುಹೋಯಿತು. ಆದರೂ ರಾಜಪುತ್ರಸಂತತಿಗೆ ಅದೊಂದು ಅಪರಿಹಾರ್ಯವಾದ ದುರ್ದೈವದ ಕಾಲವಾಗಿದ್ದವರಿಂದ ದುರ್ಭೇದ್ಯವಾಗಿದ್ದ ಚಿತ್ತೂರಿನ ಕೋಟೆಯೇ ಬಾಯಿಬಿಟ್ಟಿತು. ಶತ್ರುಗಳ ಪರಹತಿಯ ಧಾಂ ಧೂಂ ಶಬ್ದಗಳು ಕಿವಿಗೆ ಬೀಳುತ್ತಲೇ ಉಳಿದಿದ್ದ ರಾಜಪುತ್ರರ ರಮಣಿಯರೆಲ್ಲರೂ ಸ್ವಹಸ್ತದಿಂದ ಮಾಡಿದ ಚಿತಿಗಳನ್ನೇರಿ ಅಗ್ನಿಪ್ರತಿಷ್ಠೆಯನ್ನು ಮಾಡಿಕೊಂಡು ಹೊಗೆಯ ಮೂಲಕವಾಗಿ ಶತ್ರುಗಳ ಕಣ್ಣನ್ನು ಭೇದಿಸಿ ನಭೋಮಂಡಲದಲ್ಲಿ ಲೀನರಾದರು. ರಾಜನಾಗಿದ್ದ ಉದಯಸಿಂಹನು ದುರ್ದೈವದಿಂದ ಪೊಳ್ಳೆದೆಯುವನಾಗಿದ್ದ ಕಾರಣ ಹೇಗೋ ಅಲ್ಲಿಂದ ಕದ್ದು ಹೋಗಿ ಉದಯಪುರದಲ್ಲಿ ಬಚ್ಚಿಟ್ಟುಕೊಂಡನು.

ಪ್ರತಾಪನು ಮಾತ್ರ ಕಾಲು ತೆಗೆಯಲಿಲ್ಲ. ತಾನಿನ್ನೂ ಎಳೆಮೈಯವ ನಾದರೂ ಜಯಮಲ್ಲನೆಂಬ ಶೂರಾಗ್ರಣಿಯ ಸೇನಾಧಿಪತ್ಯದ ಕೆಳಗಿದ್ದ ಅಕಬರನೊಡನೆ ಖಡಾಖಡಿಯಾಗಿ ಯುದ್ಧವನ್ನು ಮಾಡಿದನು. ಆದರೂ ಅನುಕೂಲಪರಿಸ್ಥಿತಿ ಕಾಣದೇಹೋಯಿತು. ಆಗ ಕೆಲವರು ಪ್ರಮುಖರು ಮೃತ್ಯುಮುಖದಿಂದ ಪ್ರತಾಪನನ್ನು ರಕ್ಷಿಸಿಡಬೇಕೆಂದು ಯೋಚಿಸಿ ಉಪಾಯಾಂತರದಿಂದ ಅವನನ್ನು ಚಿತ್ತೂರಿಂದ ಕಮಲ ಮೇರುದುರ್ಗವೆಂಬ ಸ್ಥಲಕ್ಕೆ ಸಾಗಿಸಿದರು. ಆಮೇಲೆ ಚಿತ್ತೂರು ಪರ ಧರ್ಮದವರ ತಾಂಡವಶಾಲೆಯಾಗಿ ತನ್ನ ಅಳಿಗಾಲವನ್ನು ಕಂಡಿತು.

## ಪಟ್ಟಾಭಿಷೇಕ

ಇತ್ತ ಉದಯಸಿಂಹನು ತಾನು ಉಳಿದುಕೊಳ್ಳಬೇಕೆಂದು ನುಸುಳಿ ಕೊಂಡು ಬಂದನಷ್ಟೆ; ಕೀರ್ತಿಶರೀರಿಯಾದವನೊಬ್ಬನು ಉಳಿಯುವನೇ ಹೊರತು ಕ್ಷುದ್ರವಾದ ಮಾಂಸಮಯದೇಹವನ್ನು ಹೆಚ್ಚೆಂದು ಭಾವಿ ಸುವವನು ಉಳಿಯುವನೇ ? ಉದಯಸಿಂಹನು ಉದಯಪುರಕ್ಕೆ ಬಂದ ಮೇಲೆ ಏನೋ ಒಂದು ಬಗೆಯ ಬಾಳು ಮಾಡಿಕೊಂಡಿದ್ದು ಕೊನೆಗೆ ರೋಗಗ್ರಸ್ತನಾದನು. ಅದೇನು ದೈವದ ಮಾಯೆಯೋ ? ವಿಲಾಸಿ ಯಾದ ಉದಯಸಿಂಹನಿಗೆ ವೀರನಾದ ಪ್ರತಾಪನಮೇಲೆ ಹೆಚ್ಚು ಪ್ರೀತಿ ಇರಲಿಲ್ಲ. ಆದ್ದರಿಂದ ಅವನು ಸಾಯುವ ಕಾಲಕ್ಕೆ ತನ್ನ ಕಿರೀಮಗನನ್ನು ರಾಜನೆಂದು ಹೆಸರಿಟ್ಟು ಸಿಂಹಾಸನವನ್ನು ಹತ್ತಿಸಿ ತಾನು ಅಸ್ತನಾದನು. ಚಿತ್ತೂರಿನ ಯುದ್ಧದಲ್ಲಿ ಉಳಿದಿದ್ದ ಮಹಾವೀರರಿಗೆ ಈ ನಡವಳಿಕೆ ಒಪ್ಪಲಿಲ್ಲ. ಯೋಗ್ಯತೆಯಲ್ಲಿಯೂ ಅಧಿಕಾರದಲ್ಲಿಯೂ ಪ್ರತಾಪನು ಅಗ್ರಗಣ್ಯನಾಗಿದ್ದದರಿಂದ ಆ ಕಿರಿಯನ ಅರಸುತನವನ್ನು ಮನ್ನಿಸದೆ ಅವರೆಲ್ಲರೂ ಬಂದು ಅವನನ್ನು ಸಿಂಹಾಸನದಿಂದ ಕೆಳಕ್ಕೆ ಇಳಿಸಿ ಸರ್ವ ವೈಭವದಿಂದಲೂ ಪ್ರತಾಪನನ್ನು ಹತ್ತಿಸಿ ಅವನಿಗೇ ತಮ್ಮ ರಾಜಭಕ್ತಿ ಯನ್ನು ಪ್ರದರ್ಶನ ಮಾಡಿದರು.

ದಿನದಿನಕ್ಕೆ ಅಕಬರನ ಕ್ರೂರದೃಷ್ಟಿಯು ಪ್ರತಾಪನ ಕಡೆಗೆ ಹೆಚ್ಚು ಹೆಚ್ಚು ವಕ್ರವಾಗಿ ಬೀಳುತ್ತಲೇ ಇತ್ತು. ಏಕೆಂದರೆ ಅವನು ಚಿತ್ತೂರನ್ನು ವಶಮಾಡಿಕೊಂಡರೂ ಚಿತ್ತೂರಿನ ರಾಜಪುತ್ರರನ್ನು ವಶ ಮಾಡಿಕೊಂಡಂತೆ ಆಗಿರಲಿಲ್ಲ. ಮೇವಾಡದ ರಾಜಪುತ್ರರು ತಮ್ಮ

ಯಶಶ್ಚಂದ್ರಿಕೆಗೆ ರಾಹುಸ್ವರೂಪರಾಗಿರುವದು ಅವನ ಮನಸ್ಸಿನಲ್ಲಿ ಯಾವಾಗಲೂ ಕೊರೆಯುತ್ತಿತ್ತು. ಆದ್ದರಿಂದ ಬಾಲಕನಾದ ಪ್ರತಾಪನು ಪ್ರತಿಕ್ಷಣದಲ್ಲಿಯೂ ಮೊಗಲರ ದಾಳಿಯನ್ನು ನಿರೀಕ್ಷಣೆ ಮಾಡುತ್ತಲೇ ಇರಬೇಕಾಗಿತ್ತು. ಇದರಲ್ಲಿ ಮತ್ತೊಂದು ವಿಶೇಷವೇನೆಂದರೆ—ಸ್ವದೇಶ ದ್ರೋಹಿಗಳೂ ಸ್ವಧರ್ಮದ್ರೋಹಿಗಳೂ ಸ್ವಾಭಿಮಾನಶೂನ್ಯರೂ ಆದ ಕೆಲವರು ರಾಜಪುತ್ರರು ವಿಲಾಸಕಾಂಕ್ಷಿಗಳಾಗಿ ಅಕಬರನ ಛತ್ರಚ್ಛಾಯೆ ಯನ್ನು ಆಶ್ರಯಿಸಿ ಬಾಯಿಚಪ್ಪರಿಸುತ್ತಿದ್ದರು. ಆದರೂ ಪ್ರತಾಪನು ಎದೆ ಗೆಡಲಿಲ್ಲ. ತಮ್ಮ ಮೂಲಪುರುಷನಾದ ಬಾಪ್ಪಾರಾಯನಿಂದ ಪರಂಪರೆ ಯಾಗಿ ಹರಿದುಬಂದಿರುವ ರಕ್ತವು ತಮ್ಮ ಶರೀರದಲ್ಲಿ ಸಂಚರಿಸುತ್ತಿರುವವ ರೆಗೂ ಸ್ವದೇಶಕ್ಕಾಗಿ, ಸ್ವಧರ್ಮಕ್ಕಾಗಿ, ಸ್ವಾಭಿಮಾನಕ್ಕಾಗಿ ಹೆಣಗುವದೇ ಸರಿಯೆಂದು ತಾನೂ ಶಪಥವನ್ನು ತೊಟ್ಟದ್ದಲ್ಲದೆ ತನ್ನ ಅನುಯಾಯಿ ಗಳಿಗೆಲ್ಲಾ ಈ ದೀಕ್ಷೆಯನ್ನು ಕೊಟ್ಟನು. ಈ ದೀಕ್ಷೆಯ ಬಾಹ್ಯಾಂಗ ವಾಗಿರುವ ತಮ್ಮ ಸ್ವರಾಜ್ಯವಾದ ಚಿತ್ತೂರು ಮತ್ತೆ ರಾಜಪುತ್ರಧ್ವಜಪಟದ ಪಟಪಟಧ್ವನಿಯಿಂದ ತುಂಬಿ ತುಳುಕುವವರೆಗೂ ವಂಶಾಭಿಮಾನಿಯಾದ ಯಾವ ರಾಜಪುತ್ರನೂ ಕ್ಷೌರವನ್ನು ಮಾಡಿಸಿಕೊಳ್ಳಕೂಡದೆಂದೂ ಚಿನ್ನದ ತಟ್ಟೆಗಳನ್ನು ಬಿಟ್ಟು ಎಲೆಯ ಮೇಲೆ ಉಣ್ಣಬೇಕೆಂದೂ ಹಾಸಿಗೆಯನ್ನು ಬಿಟ್ಟು ಹುಲ್ಲಮೇಲೆ ಮಲಗಬೇಕೆಂದೂ ಮನೆಯನ್ನು ಬಿಟ್ಟು ಗುಡ್ಡಗಾಡಿನಲ್ಲಿ ಗುಡಿಸಲುಗಳಲ್ಲಿರಬೇಕೆಂದೂ ಸಂತೋಷ ಸೂಚಕವಾದ ಎಲ್ಲಾ ಕಾರ್ಯಗಳನ್ನೂ ಬಿಟ್ಟು ಶೋಕಚಿಹ್ನಗಳನ್ನು ಧಾರಣಮಾಡಬೇಕೆಂದೂ ರಣಭೇರಿಯನ್ನು ಸೈನ್ಯದ ಹಿಂಭಾಗದಲ್ಲಿ ಹೊಡೆಯಬೇಕೆಂದೂ ಕೆಲವು ನಿಯಮಗಳನ್ನು ಮಾಡಿಟ್ಟನು. ಚಿತ್ತೂರಿನ ಭೂಮಿಯಲ್ಲಿ ರಾಜಪುತ್ರಧ್ವಜಪಟವು ನಿಲ್ಲುವ ಸುಯೋಗವು ಇನ್ನೂ ಬರಲಿಲ್ಲವಾದರೂ ಈಗಲೂ ಸ್ವಾಭಿಮಾನಿಗಳಾದ ಆ ಜನರು ಊಟದ ತಾಟುಗಳ ಕೆಳಗೆ ಎಲೆಯನ್ನಿಟ್ಟುಕೊಳ್ಳುವದು, ಹಾಸಿಗೆಯ ಕೆಳಗೆ ಹುಲ್ಲುಕಡ್ಡಿಯನ್ನು ಹಾಕಿಕೊಳ್ಳುವದು, ರಣಭೇರಿಯನ್ನು ಸೈನ್ಯ ದಲ್ಲಿ ಹಿಂದೆ ಮಾಡುವದು-ಹೀಗೆ ಸೂಕ್ಷ್ಮರೂಪದಲ್ಲಾದರೂ ಆ ನಿಯಮ ಗಳನ್ನು ಪಾಲಿಸುತ್ತಲೇ ಇರುವರು. ರಾಜಪುತ್ರಜಾತಿಯವರಿಗೆ ಸ್ವಧರ್ಮ ವನ್ನು ಅತಿಕ್ರಮಿಸುವದಕ್ಕಿಂತ ಹೆಚ್ಚಿಗೆ ಮಹಾಪಾತಕವು ಯಾವದೂ

ಇಲ್ಲ. ಆದ್ದರಿಂದ ಕುತ್ಸಿತವಾದ ಪ್ರಾಸಂಗಿಕಸುಖಕ್ಕಾಗಿ ಪರಧರ್ಮದ ಮೊಗಲರಿಗೆ ಪವಿತ್ರದೇಹವನ್ನು ಮಾರಿಕೊಂಡಂಥ ಪರಮಪಾತಕಿಗಳನ್ನು ಪಂಕ್ತಿಯೊಳಗೆ ಕೂಡ ಕರೆದುಕೊಳ್ಳಬಾರದೆಂದೂ ಎಲ್ಲರೂ ಹಟವನ್ನು ತೊಟ್ಟರು. ಒಂದುಸಲ ಹುಟ್ಟಿನಿಂದರಾಜಪುತ್ರನಾದ ಮಾನಸಿಂಹನೆಂಬುವನು ಕಮಲಮೇರುವಿಗೆ ಬಂದನು. ಮಾನಸಿಂಹನು ಜಯಪುರದ ರಾಜಮನೆತನದವನಾಗಿದ್ದು ಅಕಬರನ ಶ್ವೇತಚ್ಛತ್ರಿಯ ನೆರಳಿಗೆ ಬಾಯಿನೀರು ಕರೆದು ತನ್ನ ವೀರಭಗಿನಿಯನ್ನು ಅಕಬರನ ಕ್ರೀಡಾಮೃಗವಾಗಿ ಮಾಡುವದರ ಮೂಲಕ ತಾನು ಅಕಬರನ ಬೀಗ (ಅಥವಾ ಭಾವಮೈದುನ) ನಾಗಿ ತನ್ನ ಬೇಳೆಯನ್ನು ಬೇಯಿಸಿಕೊಂಡು ದೊಡ್ಡ ಸೇನಾಪತಿಯಾದನು. ಎಂಥವನೇ ಬರಲಿ: ಅತಿಥಿಸತ್ಕಾರವನ್ನು ಮಾಡತಕ್ಕದ್ದು ಗೃಹಸ್ಥನ ಧರ್ಮ. ಪ್ರತಾಪನು ಅವನ ಸತ್ಕಾರಕ್ಕೆ ತಕ್ಕ ಸನ್ನಾಹಗಳನ್ನು ಮಾಡಿ ಆ ಸಮಾರಂಭಕ್ಕೆ ತನ್ನ ಮಗನಾದ ಅಮರಸಿಂಹನನ್ನು ಮುಂದುಮಾಡಿದನು. ಅಮರಸಿಂಹನಿಂದ ಆದರವನ್ನು ಪಡೆದ ಮಾನಸಿಂಹನು ಎಡೆಯ ಮುಂದೆ ಕೂತು ಪ್ರತಾಪನ ದಾರಿಯನ್ನು ನೋಡಿ ನೋಡಿ ಸಾಕಾಗಿ ಕೊನೆಗೆ" ಪ್ರತಾಪನು ತನ್ನ ಪಂಕ್ತಿಗೆ ಬರಲಿಚ್ಛಿಸುವದಿಲ್ಲವೋ? " ಎಂದು ಪ್ರಶ್ನೆ ಮಾಡುತ್ತಿರಲು ಪ್ರತಾಪನು ಒಳಗಣಿಂದಲೇ " ಬಾಪ್ಪಾರಾಯನ ರಕ್ತದ ಪವಿತ್ರತೆಯನ್ನುಳಿಸಿಕೊಂಡಿರುವ ಪ್ರತಾಪನು ಅಕಬರನ ರಕ್ತದ ಸಮಾವೇಶದಿಂದ ಅಪವಿತ್ರರಾದವರ ಸಾಲಿಗೆಂದೂ ಸೇರಲಾರನು " ಎಂದು ನಿರ್ದಾಕ್ಷಿಣ್ಯದಿಂದ ಕೂಗಿ ಹೇಳಲು ಮಾನಸಿಂಹನು ಬಣ್ಣಗೆಟ್ಟವನಾಗಿ ಹಾಗೆಯೇ ಎದ್ದು ಕುದುರೆಯನ್ನು ಹತ್ತುತ್ತ ಅಷ್ಟುಹೊತ್ತಿಗೆ ಅಲ್ಲಿಗೆ ಬಂದ ಪ್ರತಾಪನನ್ನು ನೋಡಿ " ನಾವು ನಮ್ಮ ಉನ್ನತ ಸ್ಥಿತಿಗಾಗಿ ಮೊಗಲರೊಡನೆ ಕೂಡಿಕೊಂಡೆವು; ನೀನು ಅವನತಿಯ ಯೋಗವನ್ನು ಬಯಸುವವನಾದರೆ ಮಾತ್ರ ನಿನ್ನ ಹಠವನ್ನೇ ಸಾಧಿಸಬಹುದು. ಹೀಗೆ ಹಠವನ್ನು ಹಿಡಿಯುವದಾದರೆ ಆಸೊಕ್ಕನ್ನು ನಾನು ಕಕ್ಕಿಸದೆ ಬಿಡುವದಿಲ್ಲ" ಎಂದು ಹೇಳಿದನು. ಆಗ ಪ್ರತಾಪನೂ ಮತ್ತು ಇತರ ಪ್ರಮುಖರೂ ಸೇರಿ ಉಚ್ಚಸ್ವರದಿಂದ " ಆ ಉದ್ದೇಶದಿಂದ ನೀವು ರಣರಂಗದಲ್ಲಿ ತಲೆಯನ್ನು ಹಾಕಿರಿ; ನಿಮ್ಮ ಮತ್ತು ನಿಮ್ಮ ಬೀಗನಾದ ಅಕಬರನ ನೆತ್ತಿಯ ಪಿತ್ಥವನ್ನು ನೆಲಕ್ಕಿಳಿಸದೆ ಬಿಡುವದಿಲ್ಲ " ಎಂದು ಹೇಳಿದರು.

ಇದರಿಂದ ಮನಸ್ಸಿನಲ್ಲಿ ನೊಂದುಕೊಂಡ ಮಾನಸಿಂಹನು ಮುಖವನ್ನು ಮುಚ್ಚಿಕೊಂಡು ಹೋಗಿ ಮೊಗಲ ಚಕ್ರವರ್ತಿಯನ್ನು ಕಂಡು ತನಗಾದ ಅವಮಾನದ ಸೇಡು ತೀರಿಸಿಕೊಳ್ಳಬೇಕೆಂದು ಮೊರೆಯಿಟ್ಟನು. ರಾಜಪುತ್ರರ ಎದೆಯ ಕೆಚ್ಚು ಆಕಬರನಿಗೆ ಗೊತ್ತಿತ್ತು ಅವರು ಬಾಹುಬಲಕ್ಕೆ ಬಗ್ಗುವವರಲ್ಲವೆಂದು ಅವನು ಮನಗಂಡಿದ್ದನು. ರಾಜಪುತ್ರರ ರಾಜ್ಯವನ್ನು ಸೇರಿಸಿಕೊಳ್ಳುವದರ ಮೂಲಕ ತನ್ನ ರಾಜ್ಯವನ್ನು ದೊಡ್ಡದು ಮಾಡಿಕೊಳ್ಳುವದೇ ಅವನ ಮುಖ್ಯವಾದ ಉದ್ದೇಶವಾಗಿರಲಿಲ್ಲ; ಎಲ್ಲರನ್ನೂ ತನ್ನ ಛತ್ರಚ್ಛಾಯೆಯಲ್ಲಿ ಸೇರಿಸಿಕೊಂಡು ತನ್ನ ಅಟ್ಟಹಾಸವನ್ನು ಮೆರೆಯಿಸಬೇಕೆಂದು ಅವನ ಕಾಂಕ್ಷೆ. ಆದ್ದರಿಂದ ಪ್ರತಾಪನು ತನಗೆ ಅಧೀನನಾಗುವಂತೆ ಎಷ್ಟೋಜನಗಳ ಮೂಲಕ ಹೇಳಿಕಳುಹಿಸಿ ಸಾಮ ದಾನ ಭೇದೋಪಾಯಗಳನ್ನು ಬಗೆಬಗೆಯಿಂದ ಮಾಡಿ ನೋಡಿದನು. ಪ್ರತಾಪನ ಸಂಕಲ್ಪವು ಪರ್ವತದಂತೆ ಅಚಲವಾಗಿದ್ದದರಿಂದ ಆ ಉಪಾಯಗಳೆಲ್ಲ ಗಾಳಿಗೆ ಹಾರಿಹೋದವು. ಎಲ್ಲೆಲ್ಲಿಯೂ ಝಗಝಗಿಸುತ್ತಿರುವ ತನ್ನ ಬೆಳಕು ಪ್ರತಾಪನ ಮೇಲೆ ಬೀಳದೆ ಇರುವದನ್ನು ಕಂಡು ಆಕಬರನು ಯಾವಾಗಲೂ ಹಳಹಳಿಸುತ್ತಿದ್ದನು. ಏನಾದರೂ ಮಾಡಿ ಪ್ರತಾಪನನ್ನು ಹಣ್ಣುಮಾಡಬೇಕೆಂದು ಅವನಿಗೆ ಹೊರಗಣಿಂದ ದೊರೆಯುತ್ತಿದ್ದ ಎಲ್ಲ ಸೌಕರ್ಯಗಳಿಗೂ ಕಲ್ಲು ಹಾಕಿದನು. ಆದರೂ ದೇವರು ಒಂದು ಸೌಕರ್ಯವನ್ನುಳಿಸಿದ್ದನೆನ್ನುವಹಾಗಿತ್ತು. ಅದೇನೆಂದರೆ, ಉತ್ತರಹಿಂದುಸ್ಥಾನದ ಎಲ್ಲಾ ವ್ಯಾಪಾರದ ಪದಾರ್ಥಗಳೂ ಯುರೋಪಖಂಡಕ್ಕೆ ಅರವಲ್ಲೀಪರ್ವತದ ಮಾರ್ಗವಾಗಿಯೇ ಹೋಗಬೇಕಾಗಿತ್ತು. ಇಂಥ ಪದಾರ್ಥಗಳನ್ನು ನಡುದಾರಿಯಲ್ಲಿ ಸ್ವಾಹಾಮಾಡುವದು ನೀತಿಯೆನಿಸಲಾರದಾದರೂ ಬಣ್ಣದ ಬೆಕ್ಕಿಗೆ ಬಣ್ಣದ ಹಾಲೆಂದು ಮೊಗಲರ ಪ್ರತಿಕ್ರಿಯೆಗೆ ಉತ್ತರ ರೂಪವಾದ ಪ್ರತಿಕ್ರಿಯೆಯಾಗಿ ಪ್ರತಾಪನು ಆ ಸಾಮಾನುಗಳನ್ನೆಲ್ಲಾ ಹಿಡಿದುಕೊಂಡು ತನ್ನ ದೇಶವನ್ನು ಪುಷ್ಟಿಗೊಳಿಸುವದಕ್ಕಾರಂಭಿಸಿದನು.

## ಹಳದೀಘಟ್ಟದ ಯುದ್ಧ

ಮೊಗಲರು ಚಿತ್ತೂರನ್ನು ತಿಂದು ತೇಗಿದ ಮೇಲೆ ಆರೇಳು ವರ್ಷಗಳವರೆಗೂ ಮುಸುಕಿನೊಳಗಣ ಗುದ್ದೇ ಹೊರತು ಬಯಲ ಯುದ್ಧ

ಗಳೇನೂ ಆಗಿರಲಿಲ್ಲ. ಈಗ ಮೈದುನನಾದ ಮಾನಸಿಂಹನ ಮಾನವನ್ನುಳಿಸುವದಕ್ಕಾಗಿ ಅಕಬರನು ಮಾನಸಿಂಹನಿಗೇ ಸೇನಾಧಿಪತ್ಯವನ್ನು ಕಟ್ಟಿ ದೊಡ್ಡ ಸೇನೆಯೊಡನೆ ಮಹಾಯುದ್ಧಕ್ಕೆ ತಾಂಬೂಲವನ್ನು ಕೊಟ್ಟುಕಳುಹಿಸಿದನು. ಮಾನಸಿಂಹನು ಒಳ್ಳೇ ಉತ್ಸಾಹದಿಂದ ಮೀಸೆಯನ್ನು ಹುರಿಮಾಡುತ್ತ ಸೇನೆಯನ್ನು ಮುಂದುಮಾಡಿಕೊಂಡು ಬಂದನು. ಇತ್ತ ಪ್ರತಾಪನೂ ಒಂದು ಸೇನೆಯನ್ನು ಮಾಡಿದನು. ಆದರೇನು ! ಸಣ್ಣಸೇನೆ. ಪ್ರತಾಪಸಿಂಹನು ಕಡಿದಾದ ಹಳದೀಘಟ್ಟದ ಮೇಲೆ ತನ್ನ ಸೇನೆಯನ್ನೆಲ್ಲಾ ಒಂದು ವ್ಯೂಹಾಕಾರವಾಗಿ ಮಾಡಿದನು. ಎರಡು ಸೇನೆಗೂ ಕೈಕೈ ಕಲೆಯಿತು ಜೀವದಾಸೆಯನ್ನು ಬಿಟ್ಟು ಎರಡು ಕಡೆಯವರೂ ಶಸ್ತ್ರಪ್ರಯೋಗಗಳನ್ನು ಮಾಡಿದರು. ರಣರಂಗದಲ್ಲಿ ಅನೇಕ ವೀರರ ಬಲಿಯಾಗಿ ಭೂತತೃಪ್ತಿಯಾಯಿತು. ಆಗ ಪ್ರತಾಪನು ತಾನೇ ಒಂದು ಕುದುರೆಯ ಮೇಲೆ ಕುಳಿತು ಅಡ್ಡಬಂದ ಸೈನಿಕರನ್ನು ಕೊಚ್ಚಿ ಕೆಡಹುತ್ತ ಮಾನಸಿಂಹನನ್ನು ಹುಡುಕಿಕೊಂಡು ಮುಂದೆ ಮುಂದೆ ನುಗ್ಗಿದನು. ಮಾನಸಿಂಹನು ಮಾನಸಿಂಹನಾಗಿರಲಿಲ್ಲವಾದ್ದರಿಂದ ಪ್ರತಾಪನ ಭಯಂಕರವಾದ ಹಾವಳಿಗೆ ಬೆಚ್ಚಿಬಿದ್ದು ಹಿಂದೆ ಹಿಂದೆಯೇ ಅಡಿಗಿಕೊಂಡು ಆತ್ಮರಕ್ಷಣೆ ಮಾಡಿಕೊಳ್ಳುತ್ತಿದ್ದನು. ಎಲ್ಲಿದ್ದರೂ ಹುಡುಕಿ ಅವನ ಅಂಹಕಾರವನ್ನು ಮಟ್ಟುಮಾಡಬೇಕೆಂದು ಸುತ್ತು ನಾಲ್ಕು ಕಡೆಗೂ ನಿಟ್ಟಿಸಿ ನೋಡುವಾಗ ದೂರದಲ್ಲಿ ಮಾನಸಿಂಹನು ಆನೆಯ ಮೇಲೆ ಕುಳಿತಿದ್ದದ್ದು ಕಂಡುಬಂತು. ಸ್ವಜಾತಿಗೆ ತಿಲತರ್ಪಣವನ್ನು ಕೊಟ್ಟು ದೇವಯೋಗ್ಯವಾದ ಪುರೋಡಾಶವನ್ನು ಶ್ವವಾಯಸಗಳಿಂದ ಸ್ಪರ್ಶಮಾಡಿಸಿದ ಸ್ವಧರ್ಮದ್ರೋಹಿಯ ಮುಖವು ಕಾಣಬರುತ್ತಲೇ ಪ್ರತಾಪನಿಗೆ ಹುಟ್ಟಿದಾಗ ಇಟ್ಟಿದ್ದ ಬಜೇ ಬೆಣ್ಣೆಯು ಕೂಡ ತೊಳಿಸಿಕೊಂಡು ಮೇಲಕ್ಕೆ ಬಂದದ್ದರಿಂದ ಒಡನೆ ಅವನು ತನ್ನ ಬರ್ಚಿಯನ್ನು ಗುರಿಯಿಟ್ಟೆಸೆದನು. ಮಾನಸಿಂಹನ ಸುದೈವವು ಅವನನ್ನು ಓರೆಮಾಡಿತು. ಆಗ ಯುದ್ಧವು ರೋಷಾವೇಶದಿಂದ ಬೆಳೆಯಿತು. ಪ್ರತಾಪನಿಗೆ ಮೂರು ಬರ್ಚಿಯ ಗಾಯಗಳೂ ಮೂರು ಕತ್ತಿಯ ಗಾಯಗಳೂ ಒಂದು ಬಾಣದ ಗಾಯವೂ ಆಗಿ ಅವನ ಶಕ್ತಿಯು ಕುಂದುತ್ತಿದ್ದದ್ದನ್ನು ನೋಡಿ ಸ್ವಾಮಿಭಕ್ತನಾದ ಮಾನ್ನಾ ಎಂಬ ರಾಜಭಟನು ಆ ಸಮಯದಲ್ಲಿ ಪ್ರತಾಪನನ್ನುಳಿಸಬೇಕೆಂದು ರಾಜಚಿಹ್ನವಾದ ಛತ್ರಿ

ಯನ್ನು ತನ್ನ ಮೇಲೆ ಹಿಡಿಸಿಕೊಂಡನು. ಶತ್ರುಸೈನ್ಯದವರು ಅವನೇ ಪ್ರತಾಪನೆಂದು ತಿಳಿದು ಎಲ್ಲರೂ ಅಲ್ಲಿಗೆ ನುಗ್ಗಿದರು. ಇತ್ತ ಪ್ರತಾಪನು ಮುಂದಿನ ಸನ್ನಾಹವನ್ನು ಮಾಡಿಕೊಳ್ಳಲು ಅವಕಾಶ ದೊರೆಯಿತು. ಮಾನ್ನಾನ ಶಿರವನ್ನು ಚೆಂಡಾಡಿ ಶತ್ರುಸೈನಿಕರು ಮಾನಸಿಂಹನ ಹೆಸರಿನಿಂದ ಜಯಘೋಷವನ್ನು ಮಾಡಿದರು.

## ತಮ್ಮನ ಸಮಾಗಮ

ಪ್ರತಾಪನಿಗೆ ಶಕ್ತಸಿಂಹನೆಂಬ ಒಬ್ಬ ತಮ್ಮನಿದ್ದನು. ಅವನು ಪ್ರತಾಪನ ತಮ್ಮನೆನಿಸಕೊಳ್ಳಲಿಕ್ಕೆ ತಕ್ಕವನಾಗಿರದೆ ಕ್ಷುದ್ರವಾದ ಹೃದಯದೌರ್ಬಲ್ಯದಿಂದ ಅಕಬರನಿಗೆ ಶರಣು ಹೋಗಿ ತನ್ನ ಕುಲಕ್ಕೆ ಕಲಂಕವನ್ನು ತಂದಿದ್ದನು. ಮಾನಸಿಂಹನು ದಂಡೆತ್ತಿ ಹೊರಟಾಗ ನಾಯಿ ಹಿಂದಣ ಬಾಲದಂತೆ ಶಕ್ತಸಿಂಹನೂ ಹಿಂದೆ ಬಂದಿದ್ದನು. ತನ್ನ ಅಣ್ಣನಾದ ಪ್ರತಾಪನು ಮಾನಸಿಂಹನೊಡನೆ ಹಣೆದಾಡಿದ್ದನ್ನು ನೋಡಿ ಅವನು ಬೆರಗಾದನು. ಮೊಗಲರ ಎಂಜಲಿಗೆ ಬಾಯಿತೆರೆದು ತನ್ನ ರಾಜಪುತ್ರತ್ವದ ಬಿಗಿಯನ್ನು ನೀಗಿಕೊಂಡಿದ್ದರೂ ಅವನಿಗೆ ಪ್ರತಾಪನ ಗುಣ ಗ್ರಹಣ ಮಾಡದೆ ಇರುವದಾಗಲಿಲ್ಲ. ಯುದ್ಧದಲ್ಲಿ ಮರೆಯಾದ ಪ್ರತಾಪನು ಕುದುರೆಯನ್ನೇರಿ ಮಾರ್ಗಾಂತರವನ್ನು ಹಿಡಿಯುತ್ತಲೇ ಮೊಗಲರ ಸೈನಿಕರಲ್ಲಿ ಕೆಲವರು ಅವನನ್ನು ಬೆನ್ನಟ್ಟಿಕೊಂಡು ಹೊರಟರು. ಹಾಗೆ ಹೊರಟವರಲ್ಲಿ ಶಕ್ತಸಿಂಹನು ಒಬ್ಬನಾಗಿದ್ದನು. ಶಕ್ತಸಿಂಹನು ಹೋಗುತ್ತ ದಾರಿಯಲ್ಲಿ ತನ್ನ ಅಣ್ಣನ ಶೌರ್ಯಪ್ರಭಾವವನ್ನು ಮನಸ್ಸಿಗೆ ತಂದುಕೊಂಡು ಈ ಸಮಯದಲ್ಲಿ ತಾನೂ ತನ್ನ ಅಣ್ಣನನ್ನು ಕೊಲ್ಲುವವನಾಗದೆ ಕಾಯುವವನಾಗಬೇಕೆಂದು ತನ್ನ ಕುದುರೆಯನ್ನು ಬಲುಮೆಯಿಂದ ಮುಂದೆ ಮುಂದೆ ಓಡಿಸಿಕೊಂಡು ತನ್ನ ಅಣ್ಣನ ಹತ್ತರಕ್ಕೆ ಬಂದು ತನ್ನ ಅಣ್ಣನಿಗೇ ಅಂತಕರಾಗಬಂದಿದ್ದ ಮೊಗಲ ಭಟರ ಜೀವವನ್ನು ತನ್ನ ಬರ್ಚಿಯಿಂದ ಹೊರಚಿಮ್ಮಿ ಕುದುರೆಯಿಂದಿಳಿದು ಅಣ್ಣನ ಪಾದದ ಮೇಲೆ ಬಿದ್ದು ಕಣ್ಣೀರಿಟ್ಟು ಪಶ್ಚಾತ್ತಾಪವನ್ನು ತೋರಿಸಿದನು. ಪ್ರತಾಪನು ತಮ್ಮನನ್ನು ಸಮಾಧಾನಗೊಳಿಸಿ ಮುಂದಾದರೂ ಜಾತಿವಾತ್ಸಲ್ಯವನ್ನು ಬಿಡಬಾರದೆಂದು ಸದುಪದೇಶವನ್ನು

ಮಾಡಿದನು. ಯುದ್ಧರಂಗದಿಂದ ಅಲ್ಲಿಯವರಿಗೆ ಒಂದೇ ವೇಗದಿಂದ ಪ್ರತಾಪನನ್ನು ಹೊತ್ತು ತಂದ ಕುದುರೆಯು ಆಯಾಸಬಾಹುಲ್ಯದಿಂದ ಅಲ್ಲಿಯೇ ಆಗ ಚಿರವಿಶ್ರಾಂತಿಯನ್ನು ಪಡೆಯಿತು. ಅದನ್ನು ನೋಡಿ ಶಕ್ತನು ಮುಂದಿನ ಪ್ರಯಾಣಕ್ಕೆ ಅನುಕೂಲವಾಗುವಂತೆ ತನ್ನ ಕುದುರೆಯನ್ನು ತನ್ನ ಅಣ್ಣನಿಗೆ ಕೊಟ್ಟು ತಾನು ತನ್ನ ಪಾಳಯಕ್ಕೆ ಹಿಂದಿರುಗಿದನು. ಈ ನಡೆದ ಸಂಗತಿಯನ್ನು ತಿಳಿಯುತ್ತಲೇ ಅಕಬರನು ಕೋಪಾವಿಷ್ಟನಾಗಿ ಶಕ್ತನನ್ನು ಅರಮನೆಯಿಂದ ಹೊರಗೆ ಹಾಕಿಬಿಟ್ಟನು. ಶಕ್ತನು ಅಲ್ಲಿಂದ ಹೊರಟು ತನ್ನ ಬಾಹುಬಲದಿಂದ ಕೆಲವು ಕೋಟಿಗಳನ್ನು ಹಿಡಿದುಕೊಂಡು ವಿಜಯಶ್ರೀಯೊಡನೆ ತನ್ನ ಅಣ್ಣನಿದ್ದೆಡೆಗೆ ಬಂದು ಆ ಕೋಟೆಗಳನ್ನು ತನ್ನ ಅಣ್ಣನಿಗೆ ಕಾಣಿಕೆಯಾಗಿ ಸಮರ್ಪಿಸಿದನು. ಪ್ರತಾಪನು ತಿರುಕರ ಅನ್ನಕ್ಕೆ ಬಾಯಿಬಿಡುವವನೇ? ಪ್ರತಾಪನು ಅದನ್ನು ಸ್ವೀಕರಿಸಿದ ಹಾಗೆ ಮಾಡಿ ಮತ್ತೆ ಅವುಗಳನ್ನು ಅವನ ಆಡಳಿತಕ್ಕೇ ಬಿಟ್ಟುಬಿಟ್ಟನು.

## ಯುದ್ಧದ ಚಾಲ

ಹಳದೀಘಟ್ಟವು ಶತ್ರುಗಳ ಹಿಡಿತಕ್ಕೆ ಸಿಕ್ಕಿದಾಗ ಒಳ್ಳೇ ನಡು ಹಗಲು, ಉರಿಬಿಸಿಲು. ಆಗ ಪ್ರತಾಪನ ಸೈನಿಕರು ಅಲ್ಲಲ್ಲಿಯೇ ಅಡಗಿಕೊಂಡುಬಿಟ್ಟರು. ಮಾನಸಿಂಹನ ಸೈನಿಕರಿಗೆ ಮುಂದೆ ಯಾವ ದಾರಿಯನ್ನು ಹಿಡಿಯಬೇಕೆಂದು ತೋಚದಂತಾಯಿತು. ಏಕೆಂದರೆ ಆ ಗುಡ್ಡಗಾಡಿನಲ್ಲಿ ಆ ರಣಧೀರರಾದ ರಾಜಪುತ್ರರು ಯಾವಾಗ ಕಾಣಿಸಿಕೊಳ್ಳುವರೆಂದು ಗೊತ್ತುಮಾಡಿ ಹೇಳುವ ಹಾಗೆ ಇರಲಿಲ್ಲ. ಆದ್ದರಿಂದ ಮಾನಸಿಂಹನು ಎಡಗೈಯಲ್ಲಿ ಜೀವವನ್ನು ಹಿಡಿದುಕೊಂಡು ಮುಂದೆ ಮುಂದೆ ಹೆಜ್ಜೆಯಿಟ್ಟನು. ಇವರಿಗೆ ತಕ್ಕದ್ದನ್ನು ಮಾಡಬೇಕೆಂದು ಪ್ರತಾಪನು ಕ್ರೂಟ ಯುದ್ಧವನ್ನು ಹೂಡಿದನು. ಅಂದರೆ ಸಮಯವನ್ನು ನೋಡಿ ಒಮ್ಮೆಗೇ ಮೇಲೆ ಬೀಳುವದು ಅಥವಾ ಒಮ್ಮೆಗೇ ಅಡಗುವದು— ಈ ಚಮತ್ಕೃತಿಯನ್ನು ಕೈಕೊಂಡನು. ಮೊಗಲರು ಎಲ್ಲಿ ನಿರ್ಭಯವೆಂದು ಕಾಲಿಡುತ್ತಿದ್ದರೋ ಅಲ್ಲಿ ರಾಜಪುತ್ರರು ತಮ್ಮ ಪೂರ್ಣಭಯಂಕರ ಸ್ವರೂಪದಿಂದ ಕಾಣಿಸಿಕೊಳ್ಳುತ್ತಿದ್ದರು. ಹೀಗೆ ರಾಜಪುತ್ರರು ನಾಲ್ಕು

ಕಡೆಯಲ್ಲಿಯೂ ಅಡಗಿಕೊಂಡು ಮೊಗಲಸೇನೆಯ ಸೌಕರ್ಯಗಳಿಗೆಲ್ಲ ದಿಗ್ಬಂಧನವನ್ನು ಮಾಡಿದ್ದರಿಂದ ಮೊಗಲಸೈನಿಕರು ಕೊನೆಗೆ ಹೊಟ್ಟೆ ಗಿಲ್ಲದೆ ಸಾಯುವ ಹೊತ್ತು ಬಂತು. ಮಾನಸಿಂಹನು ಮೊಗಲರನ್ನು ಮನೆದೇವರನ್ನಾಗಿ ಮಾಡಿಕೊಂಡಿದ್ದರೂ ಅವನ ಮನಸ್ಸಿನ್ನೂ ಸಂಪೂರ್ಣವಾಗಿ ಜಾತ್ಯಂತರವಾಗದೆ ಇದ್ದದರಿಂದ ರಾಜಪುತ್ರರ ಊರು ಕೇರಿಗಳನ್ನು ಸೂರೆ ಮಾಡುವದಕ್ಕೆ ಅವನು ಅವಕಾಶವನ್ನು ಕೊಡಲಿಲ್ಲ. ಪ್ರತಾಪನ ಬೆನ್ನಟ್ಟಿ ತಾನೇ ಹೋಗದೆ ಇದ್ದದ್ದೂ ರಾಜಪುತ್ರಸ್ಥಾನ ವನ್ನು ಸುಲಿಗೆ ಮಾಡುವದಕ್ಕೆ ಸೈನಿಕರಿಗೆ ಅವಕಾಶ ಕೊಡದೆ ಇದ್ದದ್ದೂ ಅಕಬರನ ಮನಸ್ಸಿಗೆ ರುಚಿಸಲಿಲ್ಲ. ಇಷ್ಟು ಹೊತ್ತಿಗೆ ಮಳೆಗಾಲವೂ ಬಂತು. ಆದ್ದರಿಂದ ಮಾನಸಿಂಹನು ಬಂದದಾರಿಯನ್ನು ಹಿಡಿದು ಹಿಮ್ಮೆಟ್ಟಿದನು.

## ಮತ್ತೆ ಸ್ಥಾನಭ್ರಷ್ಟತೆ

ಅತ್ತ ಮೊಗಲರು ಕಾಲುತೆಗೆಯುತ್ತಲೇ ಇತ್ತ ಪ್ರತಾಪನು ಗರಿ ಗಟ್ಟಿಕೊಂಡು ತನ್ನ ಭಟರ ಸಹಾಯದಿಂದ ಉದಯಪುರದ ಸುತ್ತ ಮುತ್ತಲಿನ ಪ್ರಾಂತಗಳನ್ನು ಸ್ವಾಧೀನ ಮಾಡಿಕೊಂಡು ಯುದ್ಧಸನ್ನಾಹ ವನ್ನು ನಡೆಸಿದನು. ಮತ್ತು ಅನೇಕದಿನಗಳವರೆಗೆ ಸಾಕಾಗುವಂತೆ ಆಹಾರಸಾಮುಗ್ರಿಗಳನ್ನು ಕೂಡಹಾಕಿ ಜನರ ಮನಸ್ಸಿಗೆ ಧೈರ್ಯವನ್ನು ತುಂಬಿದನು; ತರುಣಮಂಡಲಿಯನ್ನೆಲ್ಲಾ ಕೂಡಹಾಕಿ ಒಳ್ಳೇ ಶೌರ್ಯ ರಸಪ್ರಧಾನವಾದ ರಾಷ್ಟ್ರಗೀತೆಗಳನ್ನು ಕಲಿಸಿ ಕೇಳಿದವರ ಮೈಜುಮ್ಮೆ ನ್ನುವಂತೆ ಅವುಗಳನ್ನು ಬೀದಿಯಲ್ಲಿ ಹಾಡುವ ಹಾಗೆ ಮಾಡಿದನು; ಉತ್ತಮರಾದ ಯೋದ್ಧರನ್ನೆಲ್ಲ ಕೂಡಿಸಿಕೊಂಡು ರಾಜಪುತ್ರಸ್ಥಾನದ ಪೂರ್ವದ ವೈಭವವನ್ನು ನೆನಪುಗೊಟ್ಟು ಈಗಿನ ದುಸ್ಥಿತಿಯನ್ನು ದೂರ ಮಾಡುವದಕ್ಕೆ ಎಲ್ಲರೂ ಪ್ರಾಣಾಂತವಾಗಿ ಪ್ರಯತ್ನಮಾಡುವಂತೆ ಉತ್ಸಾಹವನ್ನು ಹುಟ್ಟಿಸಿದನು; ಸುತ್ತುಮುತ್ತಲಿನ ಸಂಸ್ಥಾನಿಕರಿಗೆಲ್ಲಾ ಪತ್ರಬರೆದು ಕಳುಹಿಸಿ ಎಲ್ಲರ ಸಹಾನುಭೂತಿಯನ್ನೂ ದೊರಕಿಸಿ ಕೊಂಡನು. ಪ್ರತಾಪನು ಇಷ್ಟೆಲ್ಲಾ ಮಾಡುತ್ತಿರುವದನ್ನು ಕೇಳಿ ಅಕಬರನಿಗೆ ಎಷ್ಟುಮಾತ್ರವೂ ಸಹಿಸುವದಾಗಲಿಲ್ಲ. ಎಲ್ಲೆಲ್ಲಿಯೂ ದಿಗ್ವಿಜಯನ್ನು ಪಡೆದಿರುವ ತನ್ನ ಪ್ರತಿಭೆಯು ಇಲ್ಲಿ ಕುಂಠಿತವಾಗಿರು

ವದು ತನಗೊಂದು ದೊಡ್ಡ ಕಲಂಕವೆಂದು ತಿಳಿದು ಅಕಬರನು ಪ್ರತಾಪನ ಮೇಲೆ ತಾನೇ ಹೋಗಿ ಪ್ರಾಯಶ್ಚಿತ್ತವನ್ನು ಮಾಡುತ್ತೇನೆಂದು ಪ್ರತಿಜ್ಞೆಯನ್ನು ಮಾಡಿ ರಣಭೇರಿಯನ್ನು ಹೊಡೆಸಿದನು. ಬೇಕಾದಷ್ಟು ಸೇನೆಯೂ ಸಿದ್ಧವಾಯಿತು. ಅಕಬರನು ಸರ್ವಸಾಹಿತ್ಯಸಮೇತನಾಗಿ ಅರವಲ್ಲೀರಣಕ್ಷೇತ್ರದ ಯಾತ್ರೆಯನ್ನು ಕೈಕೊಂಡನು. ಬಯಲಲ್ಲಿ ನಿಂತು ಯುದ್ಧಮಾಡುವಷ್ಟು ಸಿದ್ಧತೆಯಿಲ್ಲದ ಕಾರಣ ಪ್ರತಾಪನು ಭಟ ರೊಡನೆ ಪರ್ವತಪ್ರಾಂತದಲ್ಲಿ ಎಲ್ಲೆಲ್ಲಿಯೋ ಅಡಗಿಕೊಂಡಿದ್ದು ದಿಗ್ಭ್ರಮೆಯಾಗುವಂತೆ ಶತ್ರುವಿನ ಮೇಲೆ ಬೀಳುವ ಸಂಚನ್ನು ನಡೆ ಸಿದ್ದನು. ಮೊಗಲರ ಕಡೆಯವರಿಗೆ ಅಲ್ಲಿಯ ಗುಪ್ತಸ್ಥಲಗಳ ಪರಿಚಯ ವಿರಲಿಲ್ಲ. ಹೀಗಾಗಿ ಅಕಬರನಿಗೆ ಪ್ರತಾಪನ ಪರಿಚಯವೂ ಕೂಡ ಆಗಲಿಲ್ಲ. ಆದರೂ ಪ್ರತಾಪನ ಹಾವಳಿ ಮಾತ್ರ ತಪ್ಪಲಿಲ್ಲ. ಸೇನಾ ಪತಿಯಾದ ಮಾನಸಿಂಹನು ಗುಡ್ಡಗಾಡುಗಳನ್ನೆಲ್ಲಾ ತಿರುಗಿ ರಾಜ ಪುತ್ರರ ಹೆಸರಿಲ್ಲದೆ ಮಾಡಿಬಂದೆನೆಂದು ಆತ್ಮಸ್ತುತಿಯನ್ನು ಮಾಡಿ ಕೊಂಡು ತನ್ನ ಬೀಗನ ಅನುಗ್ರಹವನ್ನು ಪಡೆದುಕೊಳ್ಳುವದರೊಳಗಾಗಿ ಮೊಗಲರ ಸೇನೆಗೆ ಪ್ರತಾಪನಿಂದ ಮುಂದೆ ಏಳದಂಥ ಮತ್ತು ಎಚ್ಚತ್ತು ಕೊಳ್ಳದಂಥ ಘಾಸಿಯಾಗಿರುವ ಸುದ್ದಿಗಳು ಮೇಲೆ ಮೇಲೆ ಬರುವದಕ್ಕೆ ಮೊದಲಾಗುತ್ತಿದ್ದವು. ಇದನ್ನು ನೋಡಿ ಅಕಬರನು ಆ ಗುಡ್ಡಗಾಡನ್ನು ನಾಲ್ಕು ಕಡೆಯಿಂದಲೂ ಸೇನೆಯು ಮುತ್ತುವಂತೆ ವ್ಯವಸ್ಥೆಯನ್ನು ಮಾಡಿ ದನು. ಇಷ್ಟಾಗುವದರಲ್ಲಿ ಮತ್ತೆ ಮಳೆಗಾಲ ಬಂತು. ಆ ಮಳೆಯ ಹೊಡೆತಕ್ಕೆ ಮೈಗೊಡುವದು ಸೈನಿಕರಿಗೆ ಶಕ್ಯವಾಗಲಿಲ್ಲ. ಆದ್ದರಿಂದ ಅವರು ಕೆಲವು ಕಾಲ ಕೈಕಟ್ಟಿಕೊಂಡು ಕೂಡಬೇಕಾಯಿತು. ಈ ಸಮಯದಲ್ಲಿ ಪ್ರತಾಪನು ಮೆಲ್ಲಗೆ ಕಮಲಮೇರು ದುರ್ಗವನ್ನು ಹೊಕ್ಕು ಅಲ್ಲಿ ತನ್ನ ಪರಿವಾರವನ್ನು ಸಜ್ಜುಗೊಳಿಸಿದನು. ಮಳೆಗಾಲವನ್ನು ಕಳೆಯುತ್ತಲೇ ಮೊಗಲರ ಸೈನ್ಯವು ಕಮಲಮೇರುವಿಗೆ ಮುತ್ತಿಗೆಯನ್ನು ಹಾಕಿತು. ಪ್ರಬಲವಾದ ಮೊಗಲರ ಸೇನೆಯೊಡನೆ ಅಲ್ಪಸೇನೆಯ ಪ್ರತಾಪನು ಹೇಗೆ ಎದೆಗೊಟ್ಟು ನಿಲ್ಲಲಾದೀತು ? ಈ ನ್ಯೂನತೆಯ ಜೊತೆಗೆ ದುರ್ದೈವಬಾಧೆಯೊಂದು. ಕಮಲಮೇರುನಲ್ಲಿ ಬೇಸಿಗೆಯಲ್ಲಿ ಕುಡಿಯುವ ನೀರಿಲ್ಲ. ಅಲ್ಲಿ ಕೂಡಿಹಾಕಿದ್ದ ಮದ್ದುಗುಂಡುಗಳಿಗೆ

ಹೇಗೋ ಬೆಂಕಿಹತ್ತಿ ಎಲ್ಲವೂ ಬೂದಿಯಾಗಿ ಹೋದವು. ಹೀಗೆ ಎಲ್ಲಾ ವಿಧದಲ್ಲಿಯೂ ಅನರ್ಥಗಳು ಸಂಭವಿಸಿದರೂ ಪ್ರತಾಪನು ಇನ್ನೂ ಎದೆಗೆಡದೆ ಮರೆಯಲ್ಲಿದ್ದೇ ಅವರ ಸೊಕ್ಕನ್ನಿಳಿಸಬೇಕೆಂದು ಗುಪ್ತಮಾರ್ಗದಿಂದ ಕಮಲಮೇರುವನ್ನು ಬಿಟ್ಟು ಹೊರಟನು. ಸಿಂಹವು ಹೊರಟು ಹೋದ ಆ ಗುಹೆಯನ್ನು ಹಿಡಿದುಕೊಂಡು ಮೊಗಲರು ಅಷ್ಟಕ್ಕೆ ಆನಂದಪಟ್ಟರು.

## ವನವಾಸದ ದುಃಖ

ಅಲ್ಲಿಂದ ಹೊರಟ ಪ್ರತಾಪನು ಹೆಂಡತಿಮಕ್ಕಳೊಡನೆ ಮುಂದೆ ಮುಂದೆ ಹೋದ ಹಾಗೆಲ್ಲಾ ಹಿಂದೆ ಮೊಗಲ ಸೈನಿಕರು ಬೆನ್ನು ಹತ್ತಿಯೇ ಇದ್ದರು. ಅವರ ಕಣ್ಣಿಗೆ ಮರೆಯಾಗಿರುವದು ಅವನಿಗೆ ಎಷ್ಟೋ ವೇಳೆ ಬಹು ಕಠಿನವಾಗುತ್ತಿತ್ತು. ಈ ಸಮಯದಲ್ಲಿ ಅವನ ಹೆಂಡತಿಮಕ್ಕಳ ಸ್ಥಿತಿಗತಿಯಂತೂ ದೇವರಿಗೇ ಗೊತ್ತು. ಆ ಗುಡ್ಡಗಾಡಿನ ಹೃದಯದೊಳಹೊಕ್ಕು ಪರಮೇಶ್ವರನೇ ಅವರ ಯೋಗಕ್ಷೇಮವನ್ನು ನೋಡುತ್ತಿದ್ದನೆಂದು ಹೇಳಬೇಕಾಗಿದೆ. ಒಂದೊಂದು ವೇಳೆ ಆ ಕಾಡಿನಲ್ಲಿ ಪ್ರತಾಪನಿಗೆ ಎಂಟು ಹತ್ತು ದಿವಸಗಳಾದರೂ ಹೆಂಡತಿಮಕ್ಕಳ ಸಮಾಗಮವೇ ಇರುತ್ತಿರಲಿಲ್ಲ. ಪ್ರತಾಪನು ಅಲ್ಲಲ್ಲಿ ವೇಷಾಂತರದಲ್ಲಿದ್ದು ಭಾಷಾಂತರದಿಂದ ತನ್ನವರನ್ನು ಒಟ್ಟುಗೂಡಿಸಿಕೊಳ್ಳುತ್ತ ಹೊಂಚುಹಾಕಿಕೊಂಡಿದ್ದು ಮೊಗಲ ಸೈನಿಕರನ್ನು "ಅರವಲ್ಲೀ" ಪರ್ವತಾಭಿಮಾನದೇವತೆಗೆ ಬಲೀಕೊಡುತ್ತ ಆ ಕಾಡಿನಲ್ಲಿ ಸಿಂಹದಂತೆ ಗುಡುಗಾಡುತ್ತಿದ್ದನು. ಷಡ್ರಸೋಪೇತವಾದ ಭಕ್ಷ್ಯಭೋಜನಗಳನ್ನು ಸೇವಿಸಿ ಹಂಸತೂಲಿಕಾತಲ್ಪದ ಮೇಲೆ ಮಲಗುತ್ತಿದ್ದ ಅವನ ಹೆಂಡತಿ ಮಕ್ಕಳಿಗೆ ಆ ಕಾಡಿನ ಹಣ್ಣುಹಂಪಲಗಳ ಆಹಾರವೂ ಬಂಡೆಗಳ ಹಾಸಿಗೆಯೂ ಕೂಡ ದುರ್ಲಭವಾಗಿದ್ದವು ಒಂದುದಿನ ಒಂದುಕಡೆ ಪ್ರತಾಪನು ಹೆಂಡತಿಮಕ್ಕಳೊಡನೆ ಉಣ್ಣಬೇಕೆಂದು ಅಡಿಗೆ ಮಾಡಿಸಿ ಊಟಕ್ಕೆ ಕೂಡುವ ಸಮಯದಲ್ಲಿ ಹಿಂದಿನಿಂದಲೇ ಮೊಗಲರ ಧಾಂ ಧೂಂ ಎಂಬ ಶಬ್ದ. ಈ ರೀತಿಯಲ್ಲಿ ಐದುಕಡೆ ಆಗಿ ಕೊನೆಗೆ ಒಂದು ಕಡೆ ಯಾವದೋ ಒಂದು ಹಿಟ್ಟನಿಂದ ತಲೆಗೊಂದುರೊಟ್ಟಿಬರುವಂತೆ

ಮಾಡಿಸಿ ಅರ್ಧವನ್ನು ಮುಂದಿನ ಆಹಾರಕ್ಕಿಟ್ಟುಕೊಂಡು ಉಳಿದರ್ಧ ವನ್ನು ತಿನ್ನಬೇಕೆಂದಿರುವಾಗ ದುರ್ದೈವವಿಲಾಸದಿಂದ ಒಂದು ಕಾಡು ಬೆಕ್ಕು ಬಂದು ಅದನ್ನು ಕಚ್ಚಿಕೊಂಡು ಹೋಯಿತು. ಆಗ ತನ್ನ ಮಗು ಕಣ್ಣಲ್ಲಿ ನೀರುಸುರಿಸುತ್ತ ಬಾಯಿಬಿಟ್ಟು ಅಳುವದಕ್ಕಾರಂಭಿ ಸುತ್ತಲೇ ಇಂದ್ರನ ವಜ್ರಾಯುಧಕ್ಕಾದರೂ ಅಭೇದ್ಯವಾದಷ್ಟು ಕಠಿನವಾದ ಪ್ರತಾಪನ ಹೃದಯವು ಇಬ್ಭಾಗವಾಗಿ ಬಿರಿದುಹೋಯಿತು. ಶತ್ರುಗಳ ತೀಕ್ಷ್ಣವಾದ ಇರಿತದಿಂದ ಮೈಯೆಲ್ಲಾ ತಾತಾ ತೂತಾದರೂ ಕೂಡ ಲಕ್ಷ್ಯಮಾಡದಂಥ ಧೀರನ ಮನಸ್ಸು ಮಗುವಿನ ಅಳುವಿಕೆ ಯಿಂದ ದುರ್ಬಲವಾಗಿ ಥರಥರ ಕಂಪಿಸುವದಕ್ಕಾರಂಭವಾಯಿತು. ಮನಸ್ಸಿನ ಸ್ಥೈರ್ಯವಿರುವವರೆಗೇ ಮನುಷ್ಯನ ಸಾಮರ್ಥ್ಯ. ಈಗ ದೌರ್ಬಲ್ಯವು ಮನಸ್ಸನ್ನಾಕ್ರಮಿಸುತ್ತಲೇ ಅದಕ್ಕನುರೂಪವಾದ ವಿಚಾರತರಂಗಗಳು ಏಳುವದಕ್ಕಾರಂಭವಾದವು. ಹೆಂಡತಿಮಕ್ಕಳಿಗೆ ಈ ಪರಿಯಾದ ದುಃಖವನ್ನು ಕೊಡುವ ಬಾಳಿಗಿಂತಲೂ ಅಕಬರನಿಗೆ ಶರಣೆನ್ನುವದು ಅಯೋಗ್ಯವಲ್ಲವೆಂದೆನ್ನಿಸಿತು. ಒಡನೆ ಅವನು ಆ ದುರ್ವಿಧಿಯ ಪ್ರೇರಣೆಯನ್ನು ತಡೆಯಲಾರದೆ ಆ ಆಪತ್ಕಾಲದಲ್ಲಿ ಅಕಬರನ ಮಿತ್ರತ್ವವನ್ನು ಬಯಸಿ ಒಂದುಪತ್ರವನ್ನು ಬರೆದು ಕಳುಹಿಸಿದನು. ಇದನ್ನು ನೋಡಿ ಅಕಬರನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಆದರೆ ಪ್ರತಾಪನು ಶರಣುಬರುವದು ಅಲ್ಲಿದ್ದ ಪೃಥ್ವೀರಾಜನಿಗೆ ಸರಿಯಾಗಿ ಕಾಣಲಿಲ್ಲ. ಪೃಥ್ವೀರಾಜನು ತನ್ನ ಕ್ಷಾತ್ರತೇಜಸ್ಸನ್ನು ಅಕಬರನಿಗೆ ಕಾಣಿಕೆಯಾಗಿ ಕೊಟ್ಟಿದ್ದರೂ ಅವನ ಹೃದಯದಲ್ಲಿ ರಾಜಪುತ್ರತ್ವದ ಜ್ಯೋತಿಯು ಇನ್ನೂ ಸ್ವಲ್ಪ ಮಿಣು ಗುಟ್ಟುತ್ತಿದ್ದದರಿಂದ ತಾನು ಕೆಟ್ಟರೂ ಪ್ರತಾಪನು ಕೆಡಬಾರದೆಂದೂ ತಮ್ಮ ಕುಲಕ್ಕೆ ಮಾದರಿಯಾಗಿ ಪ್ರತಾಪನುಳಿಯಬೇಕೆಂದೂ ಬಯಸಿ ಪ್ರತಾಪನ ಹೃದಯದ ದೌರ್ಬಲ್ಯವು ಕಿತ್ತುಹೋಗುವಂತೆ ಉತ್ತೇಜಕ ವಾದ ಒಂದುತ್ತರವನ್ನು ಬರೆದು ಕಳುಹಿಸಿದನು. ಅಕಬರನಿಗೆ ಪತ್ರ ವನ್ನು ಕಳುಹಿಸಿದಂದಿನಿಂದ ಪ್ರತಾಪನಿಗೆ ನೊಣವನ್ನು ತಿಂದಂತೆ ಹೊಟ್ಟೆ ಯಲ್ಲಿ ತೊಳೆಸುತ್ತಿತ್ತು. ಪೃಥ್ವೀರಾಜನ ಉತ್ತರವು ಬರುತ್ತಲೇ ಅವನು ಚತುರ್ಭುಜನಾದನು. ಮನಸ್ಸಿನ ಸಾಮರ್ಥ್ಯವೇ ಮನುಷ್ಯನ

ಸಾಮರ್ಥ್ಯವಷ್ಟೆ. ಆಗ ಅವನು ಸರ್ವವಿಧದಲ್ಲಿಯೂ ಸ್ವಾಭಿಮಾನ ವನ್ನು ಕಾಪಾಡುವದೇ ತನ್ನ ಕರ್ತವ್ಯವೆಂದು ನಿಶ್ಚಯಿಸಿದನು. ಆದರೇನು ಪ್ರಯೋಜನ ? ಸೈನಿಕರಿಗೆ ಹೊಟ್ಟೆಗೆ ಕೊಡುವದಕ್ಕೆ ಕೂಡ ಏನೂ ಇಲ್ಲ. ಈ ಸ್ಥಿತಿಯಲ್ಲಿ ಅವನು ಚಿಂತಾಪರವಶನಾದನು.

## ಸುದೈವದ ಆವಿರ್ಭಾವ

ಆಗ ಅವನು ಮೇವಾಡವನ್ನು ಬಿಟ್ಟು ಎಲ್ಲಿಯಾದರೂ ಮರು ಪ್ರದೇಶದಲ್ಲ ಮುಂದಿನ ಕಾಲವನ್ನು ಕಳೆಯಬೇಕೆಂದು ಮನಸ್ಸು ಮಾಡಿದ್ದನು. ಇವನ ಸ್ಥಿರಚಿತ್ತವನ್ನು ನೋಡಿ ಪರಮಾತ್ಮನು ಈಗ ಸಣ್ಣದೊಂದು ಅನುಕೂಲವನ್ನು ಕಲ್ಪಿಸಿದನು. ಇವನ ರಾಜ್ಯದಲ್ಲಿ ಹಿಂದೆ ಮಂತ್ರಿಯಾಗಿದ್ದು ಇವನ ಉಪ್ಪನ್ನು ಉಂಡಿದ್ದ ಭೀಮಸಿಂಹ ನೆಂಬವನು ಪ್ರತಾಪನನ್ನು ಕಂಡು ಅವನಿಗೆ ಒತ್ತಾಸೆಯನ್ನು ಕೊಟ್ಟು ತನ್ನ ಸರ್ವಧನವನ್ನೂ ಅವನಿಗೆ ಅರ್ಪಣೆಮಾಡಿದನು. ಅದರ ಸಹಾಯದಿಂದ ಪ್ರತಾಪನು ತಕ್ಕಷ್ಟು ದಂಡುಕೂಡಿಸಿದನು. ಯುದ್ಧದ ಸಿದ್ಧತೆಯೆಲ್ಲಾ ಆಯಿತು. ಮೊಗಲರ ಸೇನಾಪತಿಯು ಅರವಲ್ಲಿಯ ಒಂದುನ್ನತ ಪ್ರದೇಶದಲ್ಲಿ ಬೀಡುಬಿಟ್ಟನು. ಪ್ರತಾಪನ ಸೇನೆಯು ಅವನನ್ನು ಮುತ್ತಿ ಸ್ವಪರಾಕ್ರಮದಿಂದ ಧ್ವಂಸಮಾಡಿತು. ಅಳಿದುಳಿದ ಸೈನಿಕರು ಕಾಲಿಗೆ ಬುದ್ಧಿಹೇಳಿದರು. ಪ್ರತಾಪನು ಕಮಲ ಮೇರುವನ್ನೂ ಇನ್ನೂ ಇಪ್ಪತ್ತೆರಡು ಕೋಟೆಗಳನ್ನೂ ಸ್ವಬಾಹು ಬಲದಿಂದ ಆಕ್ರಮಿಸಿಕೊಂಡು ತನ್ನ ಧ್ವಜಪಟವನ್ನು ನಿಲ್ಲಿಸಿದನು.

## ಕೊನೆಯ ಸ್ಥಿತಿ

ಈರೀತಿ ಮೊಗಲರಿಗೂ ಪ್ರತಾಪನಿಗೂ ಮೂವತ್ತುವರ್ಷಗಳಾದರೂ ಆ ಅಪಾರವಾದ ಮೊಗಲರ ಸೇನೆಗೆ ಕ್ಷುದ್ರಸೇನಾಪರಿವೃತನಾದ ಮತ್ತು ಎಷ್ಟೋ ವೇಳೆ ಅಸಹಾಯನಾದ ಪ್ರತಾಪನನ್ನು ಮಣಿಸುವದಾಗಲಿಲ್ಲ. ಅವನ ಸಂಗಡ ಹೋರಾಡುವದು ವ್ಯರ್ಥವೆಂದು ಮತ್ತೆ ಮೊಗಲರು ಅವನ ಮೇಲೆ ದಂಡೆತ್ತಿ ಬರಲಿಲ್ಲ. ಪ್ರತಾಪನು ಉದಯಪುರದಲ್ಲಿದ್ದು ಕೊಂಡು ರಾಜ್ಯಭಾರ ಮಾಡುತ್ತಿದ್ದನು. ಆದರೂ ಹೊರಗೆ ಬಂದಾಗ

ಆ ಉನ್ನತವಾದ ಚಿತ್ತೂರಕೋಟೆಯ ಗುರ್ತು ಕಣ್ಣಿಗೆ ಬಿತ್ತೆಂದರೆ ಅವನ ಕಣ್ಣುಗಳಿಂದ ನೀರಿಳಿಯುತ್ತಿತ್ತು. ಅವನಿಗೆ ಇದೇ ಒಂದು ಮನೋರೋಗವಾಗಿ ಮೈಯೆಲ್ಲಾ ಬಿಳುಪೇರಿ ಕ್ಷೀಣತೆ ಪ್ರಾಪ್ತ ವಾಯಿತು. ಪ್ರತಾಪಸಿಂಹನಿಗೆ ಪ್ರತಾಪಸಿಂಹನೆಂದು ಹೆಸರಿಟ್ಟದ್ದು ಕೇವಲ ರೂಢಿಯ ಮೇಲಾಗಿದ್ದರೂ ಅವನು ಅದನ್ನು ಸ್ವಸಾಹಸ ದಿಂದ ಅನ್ವರ್ಥವಾಗಿ ಮಾಡಿಕೊಂಡು ಶತ್ರುಗಳೂ ಕೂಡ ಗುಣಗಾನ ವನ್ನು ಮಾಡುವಂಥ ತನ್ನ ಯಶಶ್ಚಂದ್ರಿಕೆಯನ್ನು ಭೂಮಂಡಲ ದಲ್ಲಿ ಆಚಂದ್ರಾರ್ಕವಾಗಿ ಚಿರಸ್ಥಾಯಿಯಾಗಿರುವಂತೆ ಮಾಡಿ ಕೊನೆಗೆ ಒಂದು ಕುಟೀರದಲ್ಲಿಯೇ ಹುಲ್ಲಿನ ಹಾಸಿಗೆಯ ಮೇಲೆ ಮಲಗಿ ಚಿತ್ತೂರನ್ನು ನೆನೆಸಿಕೊಂಡು ನಿಟ್ಟುಸುರಿಟ್ಟು ತನ್ನವರನ್ನು ಕರೆದನು. ಅವರೆಲ್ಲರೂ ಬಂದು ಕುಳಿತಾಗ "ಯಾವನರಿಂದ ಮೇವಾಡ ವನ್ನು ರಕ್ಷಿಸುವೆವೆಂದು ಮಾತುಕೊಟ್ಟರೆ ಮತ್ತು ಚಿತ್ತೂರನ್ನು ಪಡೆಯದೆ ಅರಮನೆ ಮೊದಲಾದ ಸುಖೋಪಭೋಗಗಳನ್ನು ಅನುಭವಿಸುವದಿಲ್ಲ ವೆಂದು ಅಭಿವಚನವನ್ನಿತ್ತರೆ ಶಾಂತಚಿತ್ತನಾಗಿ ದೇಹತ್ಯಾಗವನ್ನು ಮಾಡುವೆ"ನೆಂದನು. ಆ ವ್ರತವನ್ನು ಪಾಲಿಸುವೆವೆಂದು ಎಲ್ಲರೂ ಶಪಥವನ್ನು ತೊಟ್ಟರು- ಪ್ರತಾಪನು ಅಕಬರನಿಗೆ ಸಾಮ್ರಾಜ್ಯಮಾತ್ರದಲ್ಲಿ ಶರಣೆಂದಿದ್ದರೂ ಅವನು ಚಿತ್ತೂರಿನ ಸರ್ವಸ್ವಾಮಿತ್ವವನ್ನು ಪಡೆಯ ಬಹುದಾಗಿತ್ತು. ಆದರೆ ಕ್ಷತ್ರಿಯೋತ್ತಮನು ಭಿಕ್ಷಾನ್ನಭೋಜನದಿಂದ ಬಾಯಿಚಪ್ಪರಿಸಬಾರದೆಂದು ಅವನ ದೃಢವ್ರತ ಈ ವ್ರತವನ್ನು ಸಾಂಗಮಾಡುವದರಲ್ಲಿಯೇ ಐವತ್ತು ವರ್ಷಗಳನ್ನು ಕಳೆದು ಪ್ರತಾಪ ಸಿಂಹನು ಕೊನೆಗೆ ವ್ರತಸ್ಥನಾಗಿಯೇ ತನ್ನ ಐಹಿಕಯಾತ್ರೆಯನ್ನು ಮುಗಿಸಿದನು.



# ಮೀರಾಬಾಯಿ

## ಪೀಠಿಕೆ

ಯಾವ ಕಲೆಯೇ ಆಗಲಿ ಅದು ಪರಮಾತ್ಮಪ್ರಾಪ್ತಿಗೆ ಸಾಧನ ವಾದರೆ ಮಾತ್ರ ಸಾರ್ಥಕವಾಯಿತೆಂದು ಭರತಖಂಡದವರ ಸಿದ್ಧಾಂತ. ಪ್ರಚಾರದಲ್ಲಿರುವ ಕಲೆಗಳಲ್ಲಿಯೂ ಕವಿತೆ ಮತ್ತು ಗಾನ—ಈ ವಿದ್ಯೆಗಳಿಗೆ ಶೃಂಗಾರದ ಒಲವು ಬೀಳುವದು ಹೆಚ್ಚು. ಸ್ವಭಾವ ಪರಿಸ್ಥಿತಿ ಹೀಗಿರು ವಾಗ ಭಾರತಮಾತೆಯು ಆ ಎರಡೂ ಕಲೆಗಳನ್ನೂ ಪರಮಾತ್ಮ ಪ್ರಾಪ್ತಿಗೆ ಪೂರ್ಣಸಾಧಕವಾಗಿ ಮಾಡಿಕೊಂಡೆಂಥ ಒಂದು ಪರಮ ಪೂಜ್ಯ ವ್ಯಕ್ತಿಯನ್ನು ಹಡೆದು ತನ್ನ ಯೌವನವನ್ನು ಸಾರ್ಥಕ ಮಾಡಿಕೊಂಡಿರುವಳು. ಕವಿತೆಯನ್ನೂ ಗಾನವನ್ನೂ ಅಷ್ಟಿಷ್ಟಾಗಲಿ ಅಥವಾ ಎಷ್ಟೋಮಟ್ಟಿಗಾಗಲಿ ಸದುಪಯೋಗ ಮಾಡಿಕೊಂಡವರೂ ಅನೇಕರಿರಬಹುದು. ಆದರೆ ಆ ಬಗೆಯ ಉಪಯೋಗದ ತುಟ್ಟತುದಿ ಯನ್ನು ಮುಟ್ಟಿರುವ ಉದಾಹರಣೆ ಬೇಕಾದರೆ ಈಗ ನಾವು ಹೇಳ ಹೋಗುವ ಚರಿತ್ರೆಯೊಂದೇ ಸರಿ. ಇದರ ಜೋಡಿಯೊಂದನ್ನು ಹುಡುಕಿ ಹೇಳಬೇಕೆಂದರೆ ಭರತಖಂಡದಲ್ಲಿ ಮಾತ್ರವೇ ಅಲ್ಲ, ಅಖಂಡ ಭೂಮಂಡಲದಲ್ಲಿಯೇ ಸಿಕ್ಕಲಾರದೆಂದು ಎದೆಯ ಮೇಲೆ ಕೈ ಇಟ್ಟು ಕೊಂಡು ಹೇಳಬಹುದು.

## ಬಾಲ್ಯ

ಅಂಥ ಪವಿತ್ರವಾದ ಉದಾಹರಣೆಯು ನಮ್ಮ ಮೀರಾಬಾಯಿಯ ಚರಿತ್ರೆ. ಆಕೆಯು ಹುಟ್ಟಿರುವ ದೇಶವನ್ನೂ ಆಕೆಯ ಸ್ವಭಾವವನ್ನೂ ನೋಡಿದರೆ ಸಿಂಹಗಳ ನಡುವೆ ಗೋಮಾತೆಯುತ್ಪನ್ನವಾಗಿರುವಂತೆ ಭಾಸವಾಗುವದು. ಏಕೆಂದರೆ ಬೆಣ್ಣೆಯಂತೆ ಪ್ರತಿಕ್ಷಣದಲ್ಲಿಯೂ ತನಗೆ ತಾನೇ ಕರಗುವ ಹೃದಯವುಳ್ಳ ಈಕೆಯು ಹುಟ್ಟಿರುವದು ಪರ್ವತ ದಂಥ ಕೋಟೆಗಳನ್ನು ಧೂಳಿಬ್ಬಿಸಿ ಶತ್ರುರಾಜರ ಮಗ್ಗಲಮೂಳೆ ಗಳನ್ನು ನುಚ್ಚುನುರಿ ಮಾಡುವಂಥ ವಜ್ರಹೃದಯರ ತವರುಮನೆ

ಯಾದ ರಾಜಪುತ್ರಸ್ತ್ರೀ. ಇದು ನಿಜವಾಗಿ ಪರಮಾತ್ಮನ ವಿಲಕ್ಷಣ ಘಟನೆ! ಮೀರಾಬಾಯಿಯ ತಂದೆಯು ಮೇರಟಾ ಎಂಬ ಸ್ಥಲದ ರತಿಯಾರಾಣಾ ಎಂಬ ಸಾಮಂತರಾಜನು. ಇವನು ಪ್ರಸಿದ್ಧವಾದ ರಾಠೋರ ಮನೆತನದವನು.

ಮೀರಾಬಾಯಿಯ ಜನ್ಮವು ಸುಮಾರು ಹದಿನೈದನೆಯ ಶತಮಾನದ ಮಧ್ಯಭಾಗ. ಪ್ರತಿಪಕ್ಷದವರಿಗೆ ಸಂತಾಪವನ್ನುಂಟು ಮಾಡುವಂಥ ಶೂರಾಗ್ರಣಿಗಳು ತಮ್ಮ ಪ್ರಖರವಾದ ಕ್ಷಾತ್ರತೇಜಸ್ಸೆಂಬ ನಡುಹಗಲಿನ ಬಿರುಬಿಸಿಲನ್ನು ಬೀರುತ್ತಿದ್ದ ಪ್ರಾಂತದಲ್ಲಿ ಮೀರಾಬಾಯಿಯು ಸರ್ವರ ಹೃದಯವೆಂಬ ಕಲ್ಲುಗಳನ್ನೂ ಕೂಡ ಕರಗಿಸಿ ಮರುಭೂಮಿಯಂಥ ಮನೋಭೂಮಿಯನ್ನು ಮಧುರವಾದ ಜಲದಿಂದ ಮೃದುವಾಗಿ ಮಾಡುವಂಥ ಷೋಡಶಕಲಾಪರಿಪೂರ್ಣನಾದ ಚಂದ್ರನ ಅಪರಾವತಾರವಾಗಿ ಅಲ್ಲಿ ಆವಿರ್ಭವಿಸಿದಳು. ಆಕೆಗೆ ಚಿಕ್ಕಂದಿನಲ್ಲಿ ವಿದ್ಯಾಭ್ಯಾಸವೂ ನಡೆಯಿತು. ಆದರೆ ಆಕೆಯು ಎಲ್ಲರಂಥ ಹುಡುಗಿಯಾಗಿರಲಿಲ್ಲ. ಹುಟ್ಟಿದಂದಿನಿಂದ ಆಕೆಯಲ್ಲಿ ಗಾಯನದ ಅಭಿರುಚಿಯೆಂಬುದು ಬಹು ಪ್ರಬಲವಾಗಿ ತೋರುತ್ತಿತ್ತು. ಆ ಗಾಯನವಾದರೂ ಒಣ ಆಲಾಪವಾಗಿರದೆ ಪರಮಾತ್ಮನ ಕೀರ್ತಿಯನ್ನು ಹಾಡುವದರಲ್ಲಿಯೇ ಆಕೆಯನ್ನು ತನ್ಮಯಳಾಗಿ ಮಾಡುತ್ತಿತ್ತು.

## ವಿವಾಹ

ಪ್ರಾಪಂಚಿಕವಾದ ವೈಭವಗಳ ಕಡೆಯ ಲಕ್ಷವೇ ಇಲ್ಲದೆ ಇದ್ದ ಆಕೆಯ ಆ ಪರಿಸ್ಥಿತಿಯನ್ನು ಲಕ್ಷ್ಯಕ್ಕೆ ತೆಗೆದುಕೊಂಡ ಯಾವ ರಾಜಪುತ್ರನೂ ಆಕೆಯನ್ನು ಮೋಹಿಸುವದಕ್ಕೆ ಮುಂದೆ ಬರುತ್ತಿರಲಿಲ್ಲ. ಆದರೆ ಆಕೆಯ ಸೌಂದರ್ಯವು ಸಮಸ್ತ ಯುವಕರಿಗೂ ಬಹು ಮನೋವೇಧಕವಾಗಿತ್ತು. ಹೇಗೆ ಆಕೆಯು ಗಾಯನದಲ್ಲಿ ಅಪ್ರತಿಮಳಾಗಿದ್ದಳೋ ಹಾಗೆ ಆಕೆ ಸೌಂದರ್ಯದಲ್ಲಿಯೂ ಎಲ್ಲರನ್ನೂ ಮೀರಿದ್ದಳು. ಆದ್ದರಿಂದ ಮಾಂಸಮಯ ದೇಹಕ್ಕೆ ಮರುಳಾಗುವ ಮುಗ್ಧಶಿರೋಮಣಿಗಳಾದ ರಾಜಪುತ್ರರು ಮೀರಾಬಾಯಿಯ ಹಸ್ತಸ್ಪರ್ಶವನ್ನು

ಪಡೆಯುವದಕ್ಕೆ ನಾನು ಮುಂದು ತಾನು ಮುಂದೆಂದು ಬರುವದಕ್ಕಾರಂಭಿಸಿದರು. ಪ್ರಾಪಂಚಿಕಸುಖಾಭಿಲಾಷೆಯ ವಾಸನೆಯನ್ನು ಕನಸಿನಲ್ಲಿಯೂ ಕೂಡ ಅರಿಯದ ಮೀರಾಬಾಯಿಗೆ ಆ ರಾಜಪುತ್ರಪಶುಗಳು ತನಗಾಗಿ ಏಕೆ ಈ ರೀತಿ ಬಾಯಿನೀರುಸುರಿಸುತ್ತಾರೆಂಬುದು ಕೂಡ ತಿಳಿಯಲಿಲ್ಲ. ಇಂಥ ವಿಶುದ್ಧ ಹೃದಯದ ವಿದಗ್ಧಳನ್ನು ಮಹಾವಿಲಾಸಿಯಾದ ಚಿತ್ತೂರಿನ ಕುಂಭನು ಕ್ರಿ. ೧೪೭೬ ರಲ್ಲಿ ಅತ್ಯಾದರದಿಂದ ಪಾಣಿಗ್ರಹಣ ಮಾಡಿಕೊಂಡನು. ಆದರೆ ಆಕೆಯು ಸರ್ವಸೌಂದರ್ಯಗಳಿಗೂ ಜೀವನಸ್ವರೂಪನಾದ ಪರಮಾತ್ಮನ ಪಾದಾರವಿಂದದಲ್ಲಿ ನಟ್ಟ ಮನಸ್ಸುಳ್ಳವಳಾಗಿದ್ದಳು.

## ಗಂಡನ ಮನೆಯ ಒಗೆತನ

ಮೀರಾಬಾಯಿಯು ಯಾವಾಗಲೂ ನಾಲ್ಕು ಜನರೊಳಗೆ ಸೇರಿಕೊಂಡು ಪರಮಾತ್ಮಸಂಕೀರ್ತನದಿಂದ ಆನಂದವನ್ನು ಪಡೆಯುತ್ತಿದ್ದವಳು. ಇತ್ತ ಗಂಡನ ಮನೆಗೆ ಬಂದ ಮೇಲೆ ರಾಜಮರ್ಯಾದೆಗನುಗುಣವಾಗಿ ಆಕೆ ರಾಣಿವಾಸದಲ್ಲಿ ಯಾರೊಡನೆಯೂ ಸಲಿಗೆಯಾಗದೆ ಒಂದು ಬಗೆಯ ಮಹತ್ವವನ್ನು ಮೈಮೇಲೆ ಹಾಕಿಕೊಂಡಿರಬೇಕಾದ ಪ್ರಸಂಗ ಬಂತು. ಇದರಿಂದ ಆಕೆ ದಿನದಿನಕ್ಕೆ ಸೊರಗುವದಕ್ಕೆ ಮೊದಲಾದಳು. ಏಕೆಂದರೆ ನಾಲ್ವರೊಡನೆ ಸೇರಿ ನಗುತ್ತ ನಲಿಯುತ್ತ ಹಾಡುತ್ತ ಪಡೆಯುವ ಪರಮಾನಂದವೇ ಆಕೆಯ ಜೀವನಸರ್ವಸ್ವವಾಗಿತ್ತು. ಈ ಸಮಯದಲ್ಲಿ ಪರಮಾತ್ಮವಿಚಾರದ ಹೊರತು ತನ್ನ ಮನಸ್ಸನ್ನಿಟ್ಟುಕೊಳ್ಳಲಾರದೆ ರಸಗರ್ಭಿತವಾದ ಕವಿತೆಗಳನ್ನು ಮಾಡುವದಕ್ಕಾರಂಭಿಸಿದ ಆಕೆಯ ಹೃದಯದಿಂದ ರಾಗಗೋವಿಂದವೆಂಬ ಒಂದು ಭಕ್ತಿರಸಪ್ರಧಾನವಾನ ಕಾವ್ಯವೂ ಜಯದೇವಕವಿಯ ಗೀತಾಗೋವಿಂದದ ಟೀಕೆಯೂ ಹೊರಬಿದ್ದವು ಕವಿತೆಗಳು ತನ್ನಿಂದಾಗಿದ್ದರೂ ಆಕೆ ಅವುಗಳನ್ನು ಪತಿಗೆ ಸಮರ್ಪಣ ಮಾಡಿರುವದರಿಂದ ಎಷ್ಟೋ ಕೃತಿಗಳು ಆಕೆಯ ಗಂಡನ ಹೆಸರಿನ ಮೇಲೆ ಪ್ರಸಿದ್ಧವಾಗಿರುವವು. ಆ ಕಾವ್ಯರಚನೆಯಿಂದಲೂ ಅವಳ ಮನಸ್ಸಿಗೆ ತೃಪ್ತಿಯಾಗಲಿಲ್ಲ. ಆಕೆಯು ಈ ತನ್ನ ಮನೋರೋಗವನ್ನು ಪತಿಗೆ ವಿಜ್ಞಾಪನೆ

ಮಾಡಿದಳು. ಮೀರಾಬಾಯಿಯ ಸೌಂದರ್ಯದ ಮೇಲಿನ ಗೌರವದಿಂದ ಕುಂಭನು ಆ ಯುವತಿಯ ಕಾಲಕ್ಷೇಪಕ್ಕಾಗಿ ಅರಮನೆಯಲ್ಲಿಯೇ ಒಂದು ಗುಡಿಯನ್ನು ಕಟ್ಟಿಸಿದ್ದಲ್ಲದೆ ಅಲ್ಲಿಗೆ ಭಕ್ತಮಂಡಲಿಯವರಾದ ಇತರರೂ ಬರಬಹುದೆಂದು ಸಮ್ಮತಿಯನ್ನು ಕೊಟ್ಟನು. ಅಂದಿನಿಂದ ಮೀರಾಬಾಯಿಯು ಅಲ್ಲಿ ಭಕ್ತಮಂಡಲಿಗೆ ಪರಮಾತ್ಮಕಥಾಮೃತವನ್ನು ಗಾನರೂಪದಿಂದ ಪಾನಮಾಡಿಸುತ್ತ ತನ್ನ ಲಹರಿಯಲ್ಲಿ ತಾನಿದ್ದಳು, ಆಕೆಯ ಲಕ್ಷ್ಯವು ಪತಿಯ ಕಡೆಗೆ ತಿರುಗಲೇ ಇಲ್ಲ. ಆಗ ಕುಂಭನು ತಾನು ಬೇರೊಂದು ಲಗ್ನವನ್ನು ಮಾಡಿಕೊಳ್ಳುವೆನೆಂದು ಮೀರಾಬಾಯಿಗೆ ಹೇಳಿದನು. ಅವನು ಎಷ್ಟು ಲಗ್ನವನ್ನು ಮಾಡಿಕೊಂಡರೆ ತಾನೆ ಮೀರಾಬಾಯಿಗೆ ಆಗುವ ನಷ್ಟವೇನು ? ಆಕೆಯೂ ಸಮ್ಮತಿಸಿದಳು. ಕುಂಭನು ಮಂದಾರರಾಜಕುಮಾರನ ಮೇಲೆ ಮನಸ್ಸನ್ನಿಟ್ಟಿದ್ದ ಝಾಲವಾರದ ರಾಜಕುಮಾರಿಯನ್ನು ಕದ್ದು ತಂದುಕೊಂಡನು.

## ಮೊದಲನೇ ಸಲ ಹೊರಗೆಹಾಕಿದ್ದು

ಆ ಝಾಲವಾರದ ರಾಜಕುಮಾರಿಯನ್ನು ನೋಡಿ ಕಣ್ಣುಗಳಿಗೆ ಹಬ್ಬವನ್ನು ಮಾಡಿಕೊಳ್ಳಬೇಕೆಂಬ ಹೇತುವಿನಿಂದ ಮಂದಾರರಾಜಕುಮಾರನು ತಾನೊಬ್ಬ ಸಾಮಾನ್ಯನಾದ ಭಕ್ತನ ವೇಷವನ್ನು ಹಾಕಿಕೊಂಡು ಒಂದು ದಿನ ಅರಮನೆಯ ದೇವಸ್ಥಾನಕ್ಕೆ ನಾಮಸಂಕೀರ್ತನದ ನೆವದಿಂದ ಬಂದನು. ಆ ದಿನದ ಕಾಲಕ್ಷೇಪವು ಮುಗಿದು ಎಲ್ಲರಿಗೂ ಪ್ರಸಾದವು ಮುಟ್ಟಿತು. ಪ್ರಸಾದವನ್ನು ಅಲ್ಲಿಯೇ ಎಲ್ಲರೂ ಭಕ್ಷಣ ಮಾಡುವ ಪದ್ಧತಿಇತ್ತು. ಆದರೆ ಮಂದಾರರಾಜಕುಮಾರನು ಅಲ್ಲೊಂದು ಗುಟುಕು ನೀರನ್ನು ಕೂಡ ಕುಡಿಯಲಿಲ್ಲ. ಅದರ ಕಾರಣವನ್ನು ಕೇಳಿದಾಗ ಆ ಮಂದಾರರಾಜಕುಮಾರನು ತನ್ನದೊಂದು ಇಚ್ಛೆ ಪೂರ್ಣವಾದರೆ ಪ್ರಸಾದಸ್ವೀಕಾರ ಮಾಡುವೆನೆಂದನು. ನಿಷ್ಕಲ್ಮಷಹೃದಯಳಾದ ಮೀರಾಬಾಯಿಯು ಆಗಲೆಂದು ಒಪ್ಪಿದಳು. ಝಾಲವಾರದ ರಾಜಕುಮಾರಿಯ ಮುಖವನ್ನು ನೋಡಬೇಕೆಂದು ಅವನು ದೈನ್ಯದಿಂದ ಕೇಳಿದನು. ಅಗತ್ಯವಾಗಿ ಆಗಲೆಂದು ಮೀರಾಬಾಯಿಯು ಆ ಝಾಲವಾರದ ರಾಜಕುಮಾರಿಯು ಮಲಗುವ ಮನೆಯ ಬಾಗಿಲನ್ನು ತೆಗೆದುಬಿಟ್ಟಳು.

ದುರ್ದೈವದಿಂದ ಕುಂಭನೂ ಅಲ್ಲಿಯೇ ಇದ್ದನು. ಇಷ್ಟೇ ಅಲ್ಲ, ಅವನು ಈ ಮಂದಾರರಾಜಕುಮಾರನ ಗುರ್ತನ್ನು ಹಿಡಿದನು. ಮಂದಾರ ರಾಜಕುಮಾರನಿಗೆ ಝಾಲವಾರದ ರಾಣಿಯ ಮುಖದ ದರ್ಶನಕ್ಕೆ ಬದಲಾಗಿ ಕುಂಭರಾಜನ ದರ್ಶನವಾಗಿ ಜಂಗಾಲಬಲವೇ ಹೋಯಿತು. ಅದು ಹಾಗಿರಲಿ, ಇತ್ತ ಕುಂಭನು ಇಷ್ಟೆಲ್ಲಾ ಅನರ್ಥಕ್ಕೆ ಮೀರಾ ಬಾಯಿಯೇ ಕಾರಣಳೆಂದು ಆಕೆಯನ್ನು ಅರಮನೆಯಿಂದ ಹೊರಕ್ಕೆ ಹಾಕಿ ಬಿಟ್ಟನು. ಆದರೂ ಅದು ಆಕೆಯ ಮನಸ್ಸಿಗೆ ನೋವನ್ನುಂಟುಮಾಡಲೇ ಇಲ್ಲ. ಆಕೆ ಹಾಯಾಗಿ ಹಾಡುತ್ತ ಹಾದಿಯನ್ನು ಹಿಡಿದಳು. ಆದರೆ ಊರ ಜನರೇ ಆಕೆಯ ಮೇಲಿನ ಪ್ರೇಮದಿಂದ ಕುಂಭನ ಮನಸ್ಸನ್ನು ತಿದ್ದಿದರು. ಕುಂಭನು ಆಕೆಯನ್ನು ಮತ್ತೆ ಕರೆಯಕಳುಹಿಸಿದನು. ತಾನು ಯಾವಾಗಲೂ ಚಿತ್ತೂರ ರಾಜನ ಚರಣದಾಸಿಯಾದ್ದರಿಂದ ಎಲ್ಲಾ ಅಪ್ಪಣೆಯೂ ತನಗೆ ಮಾನ್ಯವೆಂದು ಆಕೆ ಮತ್ತೆ ಬಂದಳು. ಆದರೆ ಆಕೆಯು ಈ ಸಲ ವಿಶೇಷವಾಗಿ ಅರಮನೆಯಲ್ಲಿ ನಿಲ್ಲಲಿಲ್ಲ.

## ಎರಡನೇ ಸಲ ಹೊರಗೆಹಾಕಿದ್ದು

ಕುಂಭನಿಂದ ಅಪ್ಪಣೆಯನ್ನು ಪಡೆದು ಮೀರಾಬಾಯಿಯು ಸಾರ್ವಜನಿಕ ಸ್ಥಲಗಳಲ್ಲಿ ನಿಂತು ತನ್ನ ಮೃದು-ಮಧುರಸ್ವರದಿಂದ ಸಮಸ್ತರ ಮನಸ್ಸನ್ನೂ ಸೆಳೆದು ಪ್ರತಿಯೊಬ್ಬರ ಹೃದಯದಲ್ಲಿಯೂ ಭಕ್ತಿರಸವು ಉಕ್ಕೇರುವಂತೆ ನಾಮಸಂಕೀರ್ತನೆಯನ್ನು ಮಾಡುವ ಉದ್ಯೋಗವನ್ನು ನಡೆಸಿದಳು. ವಿಧಾತನು ಆಕೆಗೆ ಈ ಸ್ಥಿತಿಯಲ್ಲಿಯೂ ಬಹುಕಾಲ ಇರಗೊಡಲಿಲ್ಲ. ಒಬ್ಬ ಶ್ರೀಮಂತನು ಮೀರಾಬಾಯಿ ಗೇನೋ ಒಂದು ಅಮೂಲ್ಯವಾದ ವಸ್ತುವನ್ನು ಸಮರ್ಪಿಸಿದನೆಂದು ಕೇಳಿ ಕ್ಷುದ್ರಕಲ್ಪನೆಯನ್ನು ತಂದುಕೊಂಡು ಕುಂಭನು ಆಕೆ ತನ್ನ ದೇಶವನ್ನು ಬಿಟ್ಟು ಹೋಗುವಂತೆ ಮತ್ತೊಮ್ಮೆ ಆಜ್ಞೆ ಮಾಡಿದನು. ಆಗ ಆಕೆ ವೃಂದಾವನಕ್ಕೆ ಹೊರಟಳು. ಮತ್ತು ಅಲ್ಲಿ ಶ್ರೀಕೃಷ್ಣನ ಚರಣಾರವಿಂದಗಳ ಸೇವೆ ಮಾಡಿಕೊಂಡಿದ್ದು ಜನಮಂಡಲಿಗೆಲ್ಲಾ ಧರ್ಮಾಮೃತವನ್ನು ಪಾನ ಮಾಡಿಸುತ್ತ ಅನೇಕ ಶಿಷ್ಯಸಂಪತ್ತನ್ನು ಪಡೆದಳು.

## ಅಂತಿಮಾವಸ್ಥೆ

ಕುಂಭನಿಗೆ ಪಶ್ಚಾತ್ತಾಪವಾಗಿ ಅವನು ಮತ್ತೊಮ್ಮೆಯೂ ಮೀರಾಬಾಯಿಯನ್ನು ಕರೆದುಕೊಂಡು ಬಂದನು. ಆದರೂ ಆಕೆಯ ಮನಸ್ಸು ಚಿತ್ತೂರಲ್ಲಿ ನಿಲ್ಲದೆ ತೀರ್ಥಯಾತ್ರೆಯ ಕಡೆಗೆ ಹರಿಯಿತು. ಆಕೆಗೆ ಪರಮಾತ್ಮವಿಷಯಕವಾದ ಪ್ರೇಮಾವೇಶದ ಭರದಲ್ಲಿ ಒಮ್ಮೊಮ್ಮೆ ದೇಹಭಾನವೇ ತಪ್ಪಿಹೋಗುತ್ತಿತ್ತು. ಕೊನೆಯ ಸಲ ಆಕೆ ಶ್ರೀಕೃಷ್ಣನ ಯಶಸ್ಸನ್ನು ಗಾನ ಮಾಡುತ್ತ ಮಾಡುತ್ತ ಹಾಗೆಯೇ ಎಚ್ಚರದಪ್ಪಿ ಒಂದುಕಡೆಗೆ ಬಿದ್ದವಳು ಅದೇ ಸ್ಥಿತಿಯಲ್ಲಿಯೇ ಬಿದ್ದುಬಿಟ್ಟಳು.

## ಗುಣಾನುವಾದ

ಮೀರಾಬಾಯಿಯ ಹೃದಯವು ಸ್ವಭಾವವಾಗಿ ಭಕ್ತಿರಸದ ಉಗಮಸ್ಥಾನವಾಗಿದ್ದದರಿಂದ ಆ ಹೃದಯದಿಂದ ಬರುವ ಕವಿತೆಗಳು ಕೂಡ ಶಬ್ದರೂಪವನ್ನು ಪಡೆದ ಭಕ್ತಿರಸದಂತೆ ಪರಿಣಮಿಸುತ್ತಿದ್ದವು. ಸ್ವಭಾವವಾಗಿಯೇ ಅಮೃತತುಲ್ಯವಾಗಿದ್ದ ಆ ವಿಚಾರಗಳಿಗೆ ಖಂಡ ಸಕ್ಕರೆಯಂತೆ ಗಾನಮಾಧುರ್ಯವೂ ಸೇರುತ್ತಿದ್ದದರಿಂದ ಅದನ್ನು ಕೇಳುತ್ತಿದ್ದ ಶ್ರೋತೃವೃಂದವೆಲ್ಲಾ ಚಿತ್ರದ ಗೊಂಬೆಗಳಂತೆ ಆಗುತ್ತಿದ್ದದ್ದೇನೂ ಅದ್ಭುತವಲ್ಲ. ಬಡವನ ಕಣ್ಣಿಗೆ ಬಿದ್ದ ಭಾಗ್ಯಲಕ್ಷ್ಮಿಯಂತೆ ಸಂಸಾರದಲ್ಲಿ ಪರಿತಪ್ತರಾದವರ ಭಾಗಕ್ಕೆ ಮೀರಾಬಾಯಿಯ ನಾಮಸಂಕೀರ್ತನವು ಶಾಂತರಸದ ಝರಿಯಂತೆ ಇಳಿದುಬರುತ್ತಿತ್ತು. ಆಕೆಯ ಹಾಡುಗಳನ್ನು ರಾಜಪುತ್ರಸ್ಥಾನದಲ್ಲಿ ಈಗಲೂ ಎಲ್ಲೆಲ್ಲಿಯೂ ಅತ್ಯುತ್ಸಾಹದಿಂದ ಹಾಡುತ್ತಿದ್ದಾರೆ. ಗುಜರಾತಿನಲ್ಲಿ ಮಾಂಗತ ಎಂಬ ಸ್ಥಲದಲ್ಲಿರುವ ಸಿಕ್ಕರ ಆದಿಗ್ರಂಥದಲ್ಲಿ ಆಕೆಯ ಹಾಡುಗಳೂ ಎಷ್ಟೋ ಸೇರಿವೆ. ಆಕೆಯಿಂದ ಮೀರಾಸಂಪ್ರದಾಯವೆಂಬ ಒಂದು ಧರ್ಮ ಪಂಥವೇ ಏರ್ಪಟ್ಟಿರುವದು. ಮೀರಾಬಾಯಿಯು ಚಿತ್ತೂರಿನ ಅರಮನೆಯಲ್ಲಿರುವ ದೇವಾಲಯದಲ್ಲಿ ಈಗಲೂ ಪೂಜೆಯನ್ನು ಪಡೆಯುತ್ತಿರುವಳು. ನಾಮಸ್ಮರಣೆಯ ಆವೇಶವನ್ನು ಪಡೆದವರು ಬಹುಮಂದಿ ಇರಬಹುದು. ಆ ಆವೇಶವು ಮರಣಪರ್ಯಂತರವಾಗಿ ಪರಿಪುಷ್ಟಿಗೊಳ್ಳುವಷ್ಟು ಮೈದುಂಬಿಸಿಕೊಂಡವರು ಮತ್ತೆ ಯಾರಿದ್ದಾರೆ? ಹುಡುಕಬೇಡ; ತಡಕಬೇಡ; ಯಾರೂ ಇಲ್ಲ.

# ಕಬೀರ

## ಹುಟ್ಟು

ಒಂದು ಮತದವರು ಇನ್ನೊಂದು ಮತದವರೊಡನೆ ಹಾಗೂ ಹೀಗೂ ಬಳಕೆಯನ್ನು ಮಾಡುತ್ತ ಬಂದರೂ ಕಾಲಾನುಕಾಲಕ್ಕಾದರೂ ಆ ಎರಡು ಮತದವರ ದುರಭಿಮಾನಗಳು ಹೋಗಿ ಐಕ್ಯದಲ್ಲಿಯೇ ಪರಿಣಮಿಸುವದೆಂಬದನ್ನು ತೋರಿಸುವದಕ್ಕೆ ಕಬೀರನ ಇತಿಹಾಸವು ಒಳ್ಳೇಸಾಧನವಾಗಿದೆ. ಮಹಮ್ಮದೀಯರು ಈ ದೇಶಕ್ಕೆ ಬಂದು ವಾಸಮಾಡಿದ ಮೇಲೆ ಹಿಂದುಗಳು ಅವರೊಡನೆ ಬಳಕೆಯನ್ನಿಟ್ಟು ಕೊಳ್ಳಬೇಕಾದ ಆಗತ್ಯವುಂಟಾಗಿ ಧಾರ್ಮಿಕ ಕಲ್ಪನೆಗಳೂ ಒಬ್ಬರಿಂದೊಬ್ಬರಿಗೆ ಬಂದು ಹೋಗುವದಕ್ಕಾರಂಭವಾಯಿತು. ಇದರ ಪರಿಣಾಮವಾಗಿ ಮುಹಮ್ಮದೀಯಮತಕ್ಕೂ ಹಿಂದುಮತಕ್ಕೂ ಮಧ್ಯಸ್ಥವಾಗಿ ಮೊಳಕೆಯೊಡೆದ ಒಂದು ಪಂಥದ ಮೂಲಪುರುಷನೇ ಈ ನಮ್ಮ ಕಥಾನಾಯಕನು. ಕಬೀರನು ಎಂದು ಎಲ್ಲಿ ಯಾರ ಹೊಟ್ಟೆಯಲ್ಲಿ ಹುಟ್ಟಿದನೆಂಬುದು ನಿಶ್ಚಯವಾಗಿಲ್ಲ. ಇತಿಹಾಸಸಂಶೋಧಕರು ಕಬೀರನ ಜನ್ಮವನ್ನು ಸುಮಾರು ಕ್ರಿ. ೧೪೪೦ ಎಂದು ಊಹಿಸುತ್ತಾರೆ. ಇನ್ನು ತಾಯಿಯ ವಿಷಯದಲ್ಲಿ ನೋಡಿದರೆ ಅವನು ಕಾಶಿಯಲ್ಲಿ ಒಬ್ಬ ಬ್ರಾಹ್ಮಣವಿಧವೆಯ ಗರ್ಭದಲ್ಲಿ ಹುಟ್ಟಿದವನೆಂದು ಕೆಲವರ ಅಭಿಪ್ರಾಯ. ಮಗನ ಮುಂದಿನ ಮಹಿಮೆಯನ್ನು ನೋಡುವ ಯೋಗವಿಲ್ಲದ ದುರ್ದೈವಿಯಾದ ಆಕೆಯು ತನ್ನ ಅತ್ಯಾಚಾರವನ್ನು ಮುಚ್ಚಿಕೊಳ್ಳುವದಕ್ಕಾಗಿ ಆ ಮುದ್ದುಕೂಸನ್ನು 'ಲಾಹರತಲಾವ' ಎಂಬ ಜಲಾಶಯದ ದಡದಮೇಲೆ ಮೃದುವಾದ ನೈದಿಲೆಯ ಹಾಸಿಗೆಯಲ್ಲಿ ಮಲಗಿಸಿ ಹೋಗಿರಬೇಕೆಂದು ತೋರುತ್ತದೆ. ಮಗುವನ್ನು ಮುಗಿಸಿಬಿಟ್ಟರೆ ಶಿಶುಹತ್ಯವೊಂದು ಹೆಚ್ಚಾಗಿ ಬಂದು ಗಂಟು

ಬೀಳುವದೆಂಬ ಆಕೆಯ ಪಾಪಭೀತಿಯಿಂದಲೂ ಹಿಂದುಮುಸಲ್ಮಾನರ ಧರ್ಮದ ನಡುವೆ ಐಕ್ಯವು ಬೆಳೆಯಬೇಕೆಂಬ ಈಶ್ವರೇಚ್ಛೆಯಿಂದಲೂ ಅಂತು ಕಬೀರನು ಜೀವವನ್ನು ಹಿಡಿದುಕೊಂಡಿದ್ದನು. ಆಗ ಕಾರ್ಯಾಂತರದಿಂದ ಅಲ್ಲಿಗೆ ಬಂದಿದ್ದ ನೀಮಾ ಎಂಬ ಮಹಮ್ಮದೀಯ ಸ್ತ್ರೀಯು ಪ್ರಫುಲ್ಲವಾದ ಮಗುವಿನ ಮುಖವನ್ನು ನೋಡಿದಳು. ಮಕ್ಕಳಿಲ್ಲದೆ ನಲುಗುತ್ತಿರುವ ತನಗೆ ದೇವರು ತಾನಾಗಿಯೇ ಕೊಟ್ಟ ನೆಂದು ಆಕೆಯು ಆ ಶಿಶುವನ್ನೆತ್ತಿಕೊಂಡು ಮನೆಗೆ ಹೋಗಿ ತನ್ನ ಗಂಡನಾದ ನೂರಿಗೆ ತೋರಿಸಿದಳು. ಅದನ್ನು ಹೇಗಾದರೂ ಸಾಕ ಬೇಕೆಂದು ಅವರಿಬ್ಬರೂ ನಿಶ್ಚಯಿಸಿಕೊಂಡರು. ಮಗುವು ಅವರ ಮಡಿಲಲ್ಲಿ ಬೆಳೆಯುವದಕ್ಕಾರಂಭವಾಯಿತು. ದಿನದಿನಕ್ಕೆ ಅದರ ಮುಖದ ಮೇಲೆ ಉತ್ಸಾಹದ ಕಳೆಯುಕ್ಕುತ್ತಲೇ, ಅದರಿಂದ ಸಂತೋಷ ಭರಿತರಾದ ಆ ಮಹಮ್ಮದೀಯಮಾತಾಪಿತೃಗಳು ಆ ಮಗುವಿಗೆ ಒಳ್ಳೇ ಹೆಸರನ್ನಾರಿಸಿಡಬೇಕೆಂದು ತಮ್ಮ ಕಾಜಿಯ ಮೂಲಕ ಕುರಾನಿನಲ್ಲಿ ನೋಡಿಸಿ ಕಬೀರನೆಂದು ನಾಮಕರಣ ಮಾಡಿದರು. ಕಬೀರನೆಂದರೆ ದೊಡ್ಡವನೆಂದರ್ಥ.

## ಗುರೂಪದೇಶ

ಕಬೀರನು ದೊಡ್ಡವನಾಗುತ್ತ ಬಂದಹಾಗೆಲ್ಲ ಅವನ ಮನಸ್ಸಿನಲ್ಲಿ ವಿಲಕ್ಷಣವಾದ ಕಲ್ಪನೆಗಳು ಬರಲಾರಂಭವಾದವು. ಉಳಿದ ಹುಡುಗರೆಲ್ಲ ಬಗೆಬಗೆಯ ಆಟದಲ್ಲಿ ತೊಡಗಿರುವಾಗ ಕಬೀರನು ಅವರಿಗೆ ಮಂಕಾಗಿ ಕಾಣಿಸಿಕೊಂಡು ಈ ಜಗತ್ತಿನ ಸೃಷ್ಟಿಕರ್ತನ ವಿಚಾರವಾಗಿ ಮನಸ್ಸಿನಲ್ಲಿ ಗುಣಾಕಾರವನ್ನು ಹಾಕಿದ್ದನು. ಎಲ್ಲಿ ಯಾದರೂ ಸಾಧುಸತ್ಪುರುಷರಿದ್ದಾರೆಂದರೆ ಹಿಂದುಗಳೆಂದು ಅಥವಾ ಮುಸಲ್ಮಾನರೆಂದು ಭೇದಭಾವನೆಯನ್ನಿಡದೆ ಅವನು ನೆಟ್ಟಗೆ ಅವರ ಬಳಿಗೆ ಹೋಗಿ ಅವರ ಮಾತುಗಳನ್ನು ಕಿವಿಗೊಟ್ಟು ಕೇಳುತ್ತಿದ್ದನು. ಹೀಗೆ ಅವನು ಸಾಧುಸಂತರ ವಿಚಾರಗಳನ್ನು ನಡೆಸಿರುವಾಗ ರಾಮಾನಂದಸ್ವಾಮಿಗಳೆಂಬವರ ಹೆಸರು ಅವನ ಕಿವಿಗೆ ಬಿತ್ತು. ಆಗಿನ ಕಾಲದಲ್ಲಿ ಅವರು ಆ ಪ್ರಾಂತದಲ್ಲಿ ಒಳ್ಳೇ ಪ್ರಸಿದ್ಧಿಯನ್ನು ಪಡೆದಿ

ದ್ದರು. ಅವರು ಶ್ರೀರಾಮಾನುಜಾಚಾರ್ಯರ ಶಿಷ್ಯರಾಗಿದ್ದು ಉತ್ತರ ದೇಶದಲ್ಲೆಲ್ಲಾ ಸಂಚಾರಮಾಡಿ ದಕ್ಷಿಣದೇಶದ ಸಾಮಾಜಿಕಾಚಾರದ ಕೆಲವು ಕಗ್ಗಂಟುಗಳನ್ನು ಕಿತ್ತುಹಾಕಿ ಉದಾರಬುದ್ಧಿಯನ್ನು ಹೊಂದಿದ್ದರು. ಬ್ರಾಹ್ಮಣರಾಗಿದ್ದ ಅವರು ಮುಸಲ್ಮಾನನಾದ ತನ್ನನ್ನು ಕೈ ಹಿಡಿಯಲಾರರೆಂದು ಕಬೀರನಿಗೆ ಮನಸ್ಸಿನಲ್ಲಿ ಕಳವಳವುಂಟಾಯಿತು. ಆಗ ಅವನೊಂದು ಯುಕ್ತಿಯನ್ನು ಹೂಡಿದನು. ಉಷಃಕಾಲದಲ್ಲಿ ಅವರು ಗಂಗಾಸ್ನಾನಕ್ಕಾಗಿ ಹೊರಬೀಳುವದರೊಳಗೆ ತಾನು ಹೋಗಿ ಅವರ ಮನೆಯ ಮುಂದಿನ ಸೋಪಾನದಮೇಲೆ ಮುದುರಿಕೊಂಡನು. ರಾಮಾನಂದರು ಕದವನ್ನು ತೆಗೆದು ಹೊರಕ್ಕೆ ಕಾಲಿಡುತ್ತಲೇ ಆ ಕಾಲು ಕಬೀರನ ಮೇಲೆ ಕೂತಿತು. ಯಾವದೋ ಒಂದು ಪ್ರಾಣಿಯ ಮೇಲೆ ಕಾಲಿಟ್ಟಂತೆ ಭಾಸವಾಗಿ ಅವರು ತಮ್ಮ ಪದ್ಧತಿಯ ಪ್ರಕಾರ "ರಾಮ ರಾಮ" ಎಂದರು. ಕಬೀರನು ಒಡನೆ ಎದ್ದು ತನ್ನ ದಾರಿಯನ್ನು ಹಿಡಿದು ಹೋಗಿ ತಾನೇ ವೈಷ್ಣವಮತದ್ಯೋತಕವಾದ ನಾಮವನ್ನು ಹಾಕಿಕೊಂಡು ತುಲಸೀಮಣಿಯನ್ನು ಹಿಡಿದು ಆ ರಾಮ ರಾಮ ಶಬ್ದವನ್ನೇ ಅಖಂಡವಾಗಿ ಜಪಿಸುವದಕ್ಕಾರಂಭಿಸಿದನು. ಇತ್ತ ರಾಮಾನಂದರು ಯಾವನೋ ಒಬ್ಬನು ಮಲಗಿದ್ದನೆಂದಂದುಕೊಂಡು ತಮ್ಮ ಮುಂದಿನ ಕೆಲಸಕ್ಕೆ ತಾವು ಹೋದರು. ಕಬೀರನು ವೈಷ್ಣವ ಮಂತ್ರವನ್ನು ಪುನಶ್ಚರಣಮಾಡುವದಕ್ಕೆ ಹಿಡಿದದ್ದು ಯಾರಿಗೂ ಸರಿಬೀಳಲಿಲ್ಲ. ಹಿಂದುಗಳ ದೇವರ ಹೆಸರನ್ನು ತೆಗೆದುಕೊಂಡನೆಂದು ಮಹಮ್ಮದೀಯರಿಗೆ ಕಣ್ಣು ಕೆಂಪಾಯಿತು. ತಮ್ಮ ದೇವರ ಪವಿತ್ರವಾದ ಮಂತ್ರವು ಮಹಮ್ಮದೀಯನ ಮುಖದಿಂದ ಅಪವಿತ್ರವಾಯಿತೆಂದು ಹಿಂದುಗಳಿಗೆ ತಲೆನೋವು ತೋರಿತು. ಎಲ್ಲರೂ ಸೇರಿ ಕಬೀರನನ್ನು ಕೇಳಿದಾಗ ಅವನು ತನಗೆ ಅದು ರಾಮಾನಂದಸ್ವಾಮಿಗಳಿಂದ ಉಪದೇಶವಾಗಿರುವದೆಂದು ಹೇಳಿ ಇತರರ ಬೆದರಿಕೆಗೆ ಸೊಪ್ಪುಹಾಕದೆ ತನ್ನ ಕೆಲಸವನ್ನು ತಾನು ನಡೆಸುತ್ತಿದ್ದನು. ಆಮೇಲೆ ಎಲ್ಲರೂ ರಾಮಾನಂದರ ಬಳಿಗೆ ಬಂದರು. ರಾಮಾನಂದರು ಆಶ್ಚರ್ಯಚಕಿತರಾಗಿ ಕಬೀರನನ್ನು ಕರೆಸಿ ಕೇಳಿದರು. ಕಬೀರನು ತನಗೆ ಉಪದೇಶವನ್ನಿತ್ತ ಸಂದರ್ಭವನ್ನು ನೆನಪುಗೊಡಲು ರಾಮಾನಂದರು ಅವನ ಉತ್ಕಟಶ್ರದ್ಧೆಗೆ ಸಂತುಷ್ಟರಾಗಿ ಅವನನ್ನು ಅಂದಿನಿಂದ ತಮ್ಮ ಶಿಷ್ಯಕೋಟಿಯಲ್ಲಿ ಸೇರಿಸಿಕೊಂಡರು.

## ನಡೆ-ನುಡಿಗಳು

ಕಬೀರನ ನಡೆನುಡಿಗಳು ಎಲ್ಲರ ದೃಷ್ಟಿಗಳನ್ನೂ ಸೆಳೆಯುತ್ತಿದ್ದವು. ಹೊರಗೆ ಅವನು ಹಾಗೂ ಹೀಗೂ ವ್ಯವಹಾರವನ್ನು ಮಾಡುವವನ ಹಾಗೆ ಕಂಡರೂ ಒಳಗೆ ಅವನ ಮನಸ್ಸೆಲ್ಲಾ ಭಗವದ್ವಿಚಾರದಲ್ಲಿಯೇ ಮುಳುಗಿದ್ದದರಿಂದ ಪ್ರಾಪಂಚಿಕರಿಗೆ ಅವನ ರೀತಿಯೇ ಬೇರೆಯಾಗಿ ಕಾಣುತ್ತಿತ್ತು. ಅವನ ಮಾತುಕಥೆಗಳಲ್ಲೆಲ್ಲಾ ಏನೋ ಒಂದು ಗೂಢಾರ್ಥವಿರುವಂತೆ ಕಾಣುತ್ತಿತ್ತು. ಒಂದುದಿನ ಬೀಸುವ ಕಲ್ಲಿನಲ್ಲಿ ಬೀಸುತ್ತಿರುವವರನ್ನು ನೋಡಿ "ಅಯ್ಯೋ ಈ ಎರಡು ಹೋಳುಗಳ ನಡುವೆ ಸಿಕ್ಕಿದ ಕಾಳುಗಳು ಹಿಟ್ಟಾಗದೆ ಹೇಗೆ ಉಳಿದುಕೊಂಡಾವು?" ಎಂದು ನಿಟ್ಟುಸುರಿಟ್ಟು ಮೇಲಿನ ಹೋಳನ್ನೆತ್ತಿ ನೋಡಿ ಹಸನ್ಮುಖನಾಗಿ "ಚಿಂತೆ ಇಲ್ಲ; ನಡುವಿನ ಗೂಟದ ಹತ್ತಿರಕ್ಕೆ ಸೇರಿದ ಕಾಳುಗಳನ್ನು ಈ ಹೋಳುಗಳೇನೂ ಮಾಡಲಾರವು" ಎಂದು ಹೇಳಿದನು. ಇದರಲ್ಲೇನು ವಿಶೇಷವೆಂದು ಆ ಮುಗ್ಧರಾದ ಜನರು ಕೇಳಲು, ಇಹ-ಪರಗಳೆಂಬ ಎರಡು ಹೋಳುಗಳ ನಡುವೆ ಸಿಕ್ಕಿದ ನರನು ದುಡಿದು ದುಡಿದು ಪುಡಿಪುಡಿಯಾಗುವದೇ ಸರಿ ಎಂದೂ ಈ ಎರಡು ಲೋಕಗಳಿಗೂ ಕೇಂದ್ರಸ್ಥಾನನಾದ ಭಗವಂತನಿಗೆ ಶರಣು ಹೊಕ್ಕರೆ ಮಾತ್ರ ಅವನು ಅವುಗಳ ಉಪಹತಿಯಿಂದ ಪಾರಾಗಬಹುದೆಂದೂ ಅದರ ಒಗಟನ್ನು ಒಡೆದು ಹೇಳಿದನು.

## ಪರಗರ್ವ ಖಂಡನ

ಕಬೀರನ ಈ ಬಗೆಯ ಸ್ಫೂರ್ತಿವಿಶೇಷಗಳನ್ನು ಕಂಡು ರಾಮಾನಂದರಿಗೆ ಬಹು ಸಂತೋಷವಾಗಿತ್ತು. ಹೀಗಿರುವಾಗ ಒಮ್ಮೆ ಸರ್ವಜಿತನೆಂಬ ಬ್ರಾಹ್ಮಣನೊಬ್ಬನು ವೇದಾಂತದಲ್ಲಿ ದಿಗ್ದಂತಿಯಾಗಿ ತಾನು ಅಜಯ್ಯನೆಂದು ಕೈಗೆ ಚಿನ್ನದ ಘಂಟೆಯನ್ನು ಹಾಕಿಕೊಂಡು ಬಂದನು. ಅವನ ಮುಂದೆ ಬಾಯೆತ್ತುವವರೇ ಇಲ್ಲವಾಗಿತ್ತು. ಕಬೀರನ ಹೃದಯ ಶುದ್ಧಿಯು ರಾಮಾನಂದರಿಗೆ ಗೊತ್ತಿತ್ತಾದ್ದರಿಂದ ಅವರು ಅವನನ್ನು ಆ ಬ್ರಾಹ್ಮಣನ ಮುಂದಕ್ಕೆ ತಂದರು. ಕಬೀರನನ್ನು ನೋಡಿದೊಡನೆಯೇ ಅವನು ಬ್ರಾಹ್ಮಣನಲ್ಲವೆಂಬ ತುಚ್ಛಬುದ್ಧಿಯಿಂದ ಮುಖವನ್ನು

ಸೊಟ್ಟವಮಾಡಿಕೊಂಡು ಆ ಬ್ರಾಹ್ಮಣನು "ನೀನು ಯಾರು ಮತ್ತು ಯಾವ ಜಾತಿಯವ" ನೆಂದು ಕೇಳಿದಾಗ ಕಬೀರನು ಕೊಟ್ಟ ಉತ್ತರವು ಪ್ರಶಂಸನೀಯವಾಗಿದೆ. ಅದರ ತಾತ್ಪರ್ಯವೇನೆಂದರೆ:—

**ಸೀಸಪದ್ಯ** ॥ ಪಾರವಿಲ್ಲದ ರೀತಿಯೊಳು ಹಾಸುಹೊಕ್ಕುಗಳ ಸೇರಿಸುತ
ತನ್ನಿಚ್ಛೆ ಬಂದ ತೆರದಿ ।
ತೋರುವೀ ಭೂಮಿಯಾಕಾಶಗಳ ನೇಯಿಗೆಯ
ಚಾರುಶಾಲೆಯನೆ ಮಾಡುತ್ತ ಮುದದಿ ।
ಬಾರಿಬಾರಿಗೆ ಚಂದ್ರಸೂರ್ಯರೆಂಬೆರಡನ್ನು ಮೇರೆ
ದಪ್ಪದ ಲಾಳಿ ಗೈದು ಜವದಿ ।
ಈರೇಳು ಲೋಕಂಗಳೆಂಬೆಂಬ ವಸ್ತ್ರವನು ಚಾರು
ಚಾತುರ್ಯದಿಂ ನೆಯ್ಯುಂದದಿ ।
ಭೂರಿಮಹಿಮೆಯನೆ ತೋರಿರ್ಪುದನ್ನು । ಧಾರಿಣಿಯ
ನರನಾವನರಿವನಿನ್ನು ॥
ವಾರಿಜಾಂಬಕನೆನಸಿದಾತನನ್ನು ಸಾರಿಸೇವಿಸುತಿಹ
ಕಬೀರನಿವನು ॥

ಈ ರೀತಿಯಾಗಿ ಹೇಳಿದ ಕಬೀರನ ಸ್ವಯಂಸ್ಫೂರ್ತಿಯ ಮಾತನ್ನು ಕೇಳಿ ಪಂಡಿತನು ಬಾಯಿ ಮುಚ್ಚಿಕೊಂಡನು.

## ನೇಯಿಗೆಯ ಕೆಲಸ

ಕಬೀರನ ಆ ಸಾಕುತಂದೆಯು ಹೊಟ್ಟೆಗಾಗಿ ನೇಯುವ ಉದ್ಯೋಗವನ್ನಿಟ್ಟುಕೊಂಡಿದ್ದನು ಕಬೀರನಿಗೂ ಆ ವಿದ್ಯೆಯಲ್ಲಿ ನೈಪುಣ್ಯವುಂಟಾಯಿತು. ಈ ಕೆಲಸದಲ್ಲಿ ಆವನು ದುಡಿಯುವಾಗಲೂ ಕೂಡ ತನ್ನ ಧ್ಯೇಯವನ್ನು ಬಿಟ್ಟು ಕದಲುತ್ತಿರಲಿಲ್ಲ. ಆ ಲಾಳಿಗಳ ಓಡಾಟದ ಸದ್ದನ್ನೇ ತಾಳವಾಗಿ ಮಾಡಿಕೊಂಡು ಕಬೀರನು ಪರಮಾತ್ಮನ ನಾಮಸಂಕೀರ್ತನೆಯನ್ನು ಮಾಡುತ್ತಿದ್ದನು. ಈ ಹರಿಭಕ್ತಿಯ ಜೊತೆಗೆ ಅವನಿಗೆ ಕವಿತಾಶಕ್ತಿಯೂ ಕಂಠಮಾಧುರ್ಯವೂ ದೊರೆತಿದ್ದದ್ದು ಹಾಲಿಗೆ ಸಕ್ಕರೆಯನ್ನು ಕೂಡಿಸಿದಂತಾಗಿತ್ತು. ಒಳ್ಳೇ ಸುಸ್ವರದಿಂದ ಪರಮಾತ್ಮನ ವಿಷಯಕವಾದ ಪ್ರೇಮರಸದ ಪ್ರವಾಹರೂಪವಾದ ಹಾಡುಗಳನ್ನು ಹಾಡುವದಕ್ಕೆ ಮೊದಲುಮಾಡಿದನೆಂದರೆ

ನೆರೆಹೊರೆಯುವರೆಲ್ಲಾ ತಮ್ಮ ತಮ್ಮ ಕೆಲಸವನ್ನು ಬಿಟ್ಟು ಈಕಡೆಗೆ ಮನಸ್ಸಿಟ್ಟು ಬರುತ್ತಿದ್ದರು. ಆ ಸಮಯದಲ್ಲಿ ಅವನು ಎಲ್ಲರ ಹೃದಯಕ್ಕೂ ಭಕ್ತಿರಸವನ್ನು ತುಂಬಿ ಎಲ್ಲರನ್ನೂ ತಲ್ಲೀನರನ್ನಾಗಿ ಮಾಡುತ್ತಿದ್ದನು. ಇದರ ರುಚಿಯನ್ನು ಕಂಡ ಜನರು ಅವನ ಸುತ್ತಲೂ ಸಂತೆಯಂತೆ ನೆರೆಯುತ್ತಿದ್ದರು. ಹೀಗಾಗಿ ಅವನ ಉಪದೇಶವು ಎಲ್ಲಾ ಕಡೆಗೂ ಹಬ್ಬಿ ಅವನೊಬ್ಬ ಸಾಧುಪುರುಷನೆಂದು ಪೂಜ್ಯತೆಯನ್ನು ಪಡೆದನು. ವೇದಶಾಸ್ತ್ರಗಳ ರಹಸ್ಯವೆಲ್ಲಾ ಕಬೀರನ ವಾಣಿಯ ಮೂಲಕವಾಗಿ ಸಾಮಾನ್ಯಜನ ಮಂಡಲಿಗೆ ಜೀರ್ಣವಾಗುವ ಸ್ಥಿತಿಯನ್ನು ಪಡೆದು ಎಲ್ಲರ ರಕ್ತದಲ್ಲಿಯೂ ವ್ಯಾಪಿಸಿತು.

## ಮಹಿಮೆ

ಲೋಕದಲ್ಲಿ ಮಹಾತ್ಮರಾದ ಸಾಧುಸಂತರ ಚರಿತ್ರೆಯಲ್ಲಿ ಮಹಿಮಾ ವಿಶೇಷಗಳಿರುವಂತೆ ಕಬೀರನ ಚರಿತ್ರೆಯಲ್ಲಿಯೂ ಎಷ್ಟೋ ಇವೆ.

(೧) ಒಂದು ದಿನ ಒಂದು ವಸ್ತ್ರವನ್ನು ನೆಯ್ದು ಮಾರಾಟಕ್ಕೆ ತೆಗೆದುಕೊಂಡು ಹೋಗುತ್ತಿರುವಾಗ ನಡುವೆ ಒಬ್ಬ ಯಾಚಕನು ಬಂದು ಅದನ್ನು ಬೇಡಿದನು. ಮಹಾ ಉದಾರಿಯಾದ ಕಬೀರನು ಅವನಿಗೆ ಅದನ್ನು ಕೊಟ್ಟುಬಿಟ್ಟನು. ಆದರೆ ಬರೀ ಕೈಯಿಂದ ಮನೆಗೆ ಹೋದರೆ ಹಸಿದಿರುವವರಿಗೆ ಹೇಳುವದಕ್ಕೆ ಉತ್ತರವಿರುವದಿಲ್ಲವೆಂದು ಮನೆಗೆ ಹೋಗುವದನ್ನೇ ಬಿಟ್ಟು ಒಂದುಕಡೆ ನಾಮಸ್ಮರಣೆಯನ್ನು ಮಾಡುತ್ತ ಕುಳಿತುಬಿಟ್ಟನು. ಆಗ ಯಾವನೋ ಒಬ್ಬನು ಮನೆಗೆ ಹಣವನ್ನು ತಂದುಕೊಟ್ಟನು. ಆಮೇಲೆ ಮನೆಯವರೇ ಹುಡುಕಿಕೊಂಡು ಬಂದು ಕಬೀರನನ್ನು ಕರೆದುಕೊಂಡು ಹೋದರು. ಆ ವಸ್ತ್ರವನ್ನು ತೆಗೆದುಕೊಂಡವನೂ ಮತ್ತು ಹಣವನ್ನು ತಂದುಕೊಟ್ಟವನೂ ದೇವರೇ ಇರಬೇಕೆಂದು ತಿಳಿದು ಕಬೀರನು ಆ ಹಣವನ್ನು ಮತ್ತೆ ದಾನಧರ್ಮಕ್ಕೇ ಹಾಕಿದನು. ಇಷ್ಟೇ ಅಲ್ಲ; ಹೀಗೆ ತನ್ನ ಯೋಗಕ್ಷೇಮವನ್ನು ದೇವರು ವಹಿಸಿರುವಾಗ ತಾನು ತನ್ನ ಹೊಟ್ಟೆಗಾಗಿ ದುಡಿಯುವದರಲ್ಲಿ ಕಾಲ

ವನ್ನು ಕಳೆಯುವದು ಯೋಗ್ಯವಲ್ಲವೆಂದು ಅಂದಿನಿಂದ ನೇಯಿಗೆಯ ಉದ್ಯೋಗಕ್ಕೆ ಶರಣುಹೊಡೆದನು.

(೨) ಈ ಸುದ್ದಿಯನ್ನು ಕೇಳಿದ ಬ್ರಾಹ್ಮಣರು ಕಬೀರನಿಂದ ದುಡ್ಡನ್ನು ಎತ್ತಿಹಾಕಬೇಕೆಂದು ಅನೇಕರು ಬಂದು ಮನೆಯಲ್ಲಿ ಕುಳಿತರು. ಅವರಿಗೆ ಕೊಡುವದಕ್ಕಿಲ್ಲದೆ ಕಬೀರನು ತಲೆತಪ್ಪಿಸಿ ಕೊಂಡಿರಲು ಆಗ ಭಕ್ತವತ್ಸಲನಾದ ದೇವರು ವೇಷಾಂತರದಿಂದ ಅಲ್ಲಿಗೆ ಬಂದು ಆ ಯಾಚಕರಿಗೆಲ್ಲಾ ಹಣವನ್ನು ಕೊಟ್ಟು ಕಳುಹಿಸಿದನು. ದಾನವನ್ನು ಪಡೆದ ಬ್ರಾಹ್ಮಣರೇ ಹಿಂದಿರುಗಿ ಬರುತ್ತ ದಾರಿಯಲ್ಲಿ ಕಬೀರನನ್ನು ಕಂಡು ತಮ್ಮ ಇಷ್ಟಪೂರ್ತಿಯಾಯಿತೆಂದು ಹೇಳಿ ಅವನನ್ನು ಮನೆಗೆ ಕಳುಹಿಸಿ ಹೋದರು.

(೩) ಒಂದು ವೇಳೆ ಇವನನ್ನು ಪರೀಕ್ಷೆ ಮಾಡಬೇಕೆಂದು ಕೆಲವರು ಕುಹಕಿಗಳು ಸೇರಿ ಅವನ ಮನೆಗೆ ಏಕಕಾಲದಲ್ಲಿ ಊಟಕ್ಕೆ ಅನೇಕ ಸಾಧುಗಳು ಬರುವಂತೆ ಮಾಡಿದರು. ಆಗ ಕಬೀರನು ಏನಾದರೂ ತರಬೇಕೆಂದು ಪೇಟೆಗೆ ಹೋದಾಗ ದೇವರು ರೂಪಾಂತರದಿಂದ ಬಂದು ಅವರಿಗೆ ತೃಪ್ತಿಯನ್ನುಂಟುಮಾಡಿ ಬಿಟ್ಟನು. ಕಬೀರನು ಮನೆಗೆ ಬಂದು ನೋಡಿ ಆಶ್ಚರ್ಯಪಟ್ಟು ಪ್ರಸಾದವನ್ನು ಸ್ವೀಕಾರಮಾಡಿದನು. ಹೀಗೆ ಎಷ್ಟೋ ಹೇಳಿಕೆಗಳುಂಟು.

## ಬ್ರಹ್ಮಚರ್ಯೆ

ಕಬೀರನು ಇತರ ಮುಮುಕ್ಷುಜನರಂತೆ ಜನಸಂಘಕ್ಕೆ ಬೆದರಿ ಕಾಡಿಗೆ ತಲೇತಪ್ಪಿಸಿಕೊಂಡು ಹೋಗುವವನಾಗಿರದೆ ಗೃಹಸ್ಥಾಶ್ರಮ ದಲ್ಲಿಯೇ ಪರಮಾತ್ಮನ ಲೀಲೆಯನ್ನು ನೋಡುವವನಾಗಿದ್ದನು. ಅವನಿಗೆ ಲಗ್ನವಾಗಿತ್ತು ಕಮಾಲನೆಂಬ ಒಬ್ಬ ಭಗವದ್ಭಕ್ತನಾದ ಪುತ್ರನೂ ಇದ್ದನು. ಆದರೂ ಕೂಡ ಅವನು ಎಷ್ಟು ಮಾತ್ರವೂ ಸ್ತ್ರೀಕಾಮುಕನಾಗಿರಲಿಲ್ಲ. ಅವನ ಮೇಲೆ ಅಸೂಯೆಯುಳ್ಳವರು ಕೆಲವರು ಅವನನ್ನು ಹಳ್ಳಕ್ಕೆ ನೂಕಿ ಆಳವನ್ನು ನೋಡಬೇಕೆಂದು ಒಬ್ಬ ಸೂಳೆಯನ್ನು ಪ್ರೇರಿಸಿ ಅವಳನ್ನು ಅವನ ಬಳಿಗೆ ಕಳುಹಿಸಿದರು.

ಆಕೆಯು ಬಂದು ಕಬೀರನ ಮುಂದೆ ನಿಂತು ತನ್ನ ಗಾಯನ ನರ್ತನಾದಿಗಳ ಸೇವೆಯನ್ನು ತೆಗೆದುಕೊಳ್ಳಬೇಕೆಂದು ಅವನನ್ನು ಮೋಹಗೊಳಿಸುವದಕ್ಕೆ ಹೋಗಲು ಅವನು ಆಕೆಗೆ "ಅವ್ವ, ನಾನು ಗಾಯನದ ಮತ್ತು ನರ್ತನದ ಕಲೆಗಳನ್ನರಿತವನಲ್ಲ. ಅವುಗಳನ್ನು ನೀನು ನನಗೆ ತೋರಿಸುವದರಿಂದೇನು ಪ್ರಯೋಜನ? ಇದಲ್ಲದೆ ನಾನು ದೇವರ ಸೇವಕನು; ನನ್ನಂಥವನ ಮುಂದೆ ವಿದ್ಯಾಪ್ರದರ್ಶನ ಮಾಡುವದು ನಿನ್ನ ಯೋಗ್ಯತೆಗೊಂದು ಕುಂದಾಗುವದು. ಇಗೋ ಇಲ್ಲಿ ರಾಮನಿರುವನು. ಅವನು ರಾಗಿಯೂ ಅಹುದು; ಭೋಗಿಯೂ ಅಹುದು. ಗಾಯನದ ಮತ್ತು ನರ್ತನದ ಕಲೆಯ ಆಳವು ಅವನಿಗೆ ಗೊತ್ತು. ಅವನು ಸರ್ವಸ್ವಾಮಿ. ಅವನ ಮುಂದೆ ನಿನ್ನಾಟ ಸಾಗಲಿ" ಎಂದು ಹೇಳಿ ಆಕೆಯ ಮನಸ್ಸನ್ನೇ ತನ್ನ ಉಪದೇಶಪ್ರಭಾವ ದಿಂದ ಭಕ್ತಿಮಾರ್ಗಕ್ಕೆ ಹೊರಳಿಸಿದನು.

## ಕಾಶಿಯಿಂದ ಹೊರಗಾದದ್ದು

ಹೀಗೆ ತಮ್ಮ ಯುಕ್ತಿಯು ನಡೆಯದೆ ಇರುವದನ್ನು ನೋಡಿ ಆ ದುರ್ಜನರು ತಮ್ಮಲ್ಲಿ ತಾವೇ ಕುದ್ದುಕೊಂಡು ಆಗ ರಾಜನಾಗಿದ್ದ ಸಿಕಂದರಲೋಡಿಯ ಬಳಿಗೆ ಹೋಗಿ ವೇಷಧಾರಿಯಾದ ಕಬೀರನು ಜನರಿಗೆ ಮೋಸ ಮಾಡುತ್ತಿರುವನೆಂದು ಮುಂತಾಗಿ ದೂರು ಹೇಳಿದರು ಆ ಅರಸನು ಕರೆಯಕಳುಹಲು ಕಬೀರನು ಬಂದನು. ಆದರೆ ರಾಜನಿಗೆ ವಂದನೆಯನ್ನು ಕೂಡ ಮಾಡಲಿಲ್ಲ. ವಂದಿಸೆಂದು ಅಧಿಕಾರಿಗಳು ಹೇಳಲು ತುಚ್ಛವಾಗಿ ಕಾಣಿಸುವ ವಸ್ತುವಿಗೆ ವಂದಿಸುವದು ಹೇಗಾದೀತೆಂದು ಉತ್ತರವನ್ನಿತ್ತನು. ಆಗ ಇವನೊಬ್ಬ ಹುಚ್ಚನಾಗಿರಬೇಕೆಂದು ಎಲ್ಲರೂ ಸೇರಿ ಇವನನ್ನು ಊರಿನಿಂದ ಹೊರಕ್ಕೆ ಹಾಕಿದರು.

## ಅಂತ್ಯಕಾಲ

ಅಲ್ಲಿಂದ ಹೊರಬಿದ್ದು ಕಬೀರನು ಉತ್ತರದೇಶದಲ್ಲಿ ಜನರಿಗೆ ತನ್ನ ಧರ್ಮಾಮೃತವನ್ನು ಪಾನಮಾಡಿಸುತ್ತ ನಡೆದನು. ಕೊನೆಗೆ

ಕ್ರಿ. ೧೫೧೮ ರಲ್ಲಿ ಗೋರಖಪುರದಲ್ಲಿ ಹತ್ತಿರ ಮಗಾರ ಎಂಬೂರಲ್ಲಿರುವಾಗ ವೃದ್ಧಾಪ್ಯ ಮೊದಲಾದ ಕಾರಣಗಳಿಂದ ಇವನಿಗೆ ದೇಹದಲ್ಲಿ ಆಲಸ್ಯ ಉಂಟಾಯಿತು. ಮಹಾಜ್ಞಾನಿಯಾದ ಕಬೀರನು ತಾನು ಬ್ರಹ್ಮಲೋಕಕ್ಕೆ ಹೋಗುವೆನೆಂದು ಹೇಳಿ ಮುಂದಾಗಿಯೇ ಊರಿಗೆಲ್ಲಾ ಸುದ್ದಿಯನ್ನು ಕಳುಹಿಸಿಬಿಟ್ಟನು. ಇದೇನು ವಿಚಿತ್ರವೆಂದು ಅನೇಕರು ಬಂದು ಸೇರಿದರು. ಮತ್ತು ಕಬೀರನು ಮೃತನಾದರೆ ಅವನ ದೇಹವನ್ನು ಸುಡಬೇಕೆಂದು ಹಿಂದುಗಳೂ ಹೂಳಬೇಕೆಂದು ಮುಸಲ್ಮಾನರೂ ಬಡಿದಾಡುವದಕ್ಕಾರಂಭಿಸಿದರು. ಕಬೀರನು ಯಾವ ಜಾತಿಯ ಹೊಟ್ಟೆಯಲ್ಲಿ ಹುಟ್ಟಿದ್ದರೂ ಮುಸಲ್ಮಾನನಾಗಿ ಬೆಳೆದವನು. ಆದರೂ ಅವನಲ್ಲಿ ಸಮತ್ವಬುದ್ಧಿಯೂ ಭಗವದ್ವಿಭೂತಿಯೂ ಎದ್ದು ಕಾಣುತ್ತಿದ್ದುದರಿಂದ ಮಹಾಕರ್ಮಜಡರಾದ ಹಿಂದುಗಳು ಕೂಡ ಕಬೀರನ ಯಶಸ್ಸು ತಮ್ಮ ಜಾತಿಗಿರಬೇಕೆಂದು ಹೋರಾಡಿದರು. ಮಹಮ್ಮದೀಯರಿಗಂತೂ ಅವನು ಬಾಹ್ಯದೃಷ್ಟಿಯಿಂದ ಸೇರಿದವನೇ ಆಗಿದ್ದನು. ಇದನ್ನು ನೋಡಿ ಆಗ ಕಬೀರನು ಚೇತರಿಸಿಕೊಂಡು ಅವರೆಲ್ಲರನ್ನೂ ಸಂಬೋಧಿಸಿ " ಲೋಕದಲ್ಲಿ ಮನುಷ್ಯನು ಈ ದೇಹವನ್ನು ಶಾಶ್ವತವೆಂದು ನಂಬಿ, ಇಲ್ಲದ ಕಷ್ಟಗಳ ಗೂಲೆಗೆ ಬೀಳುತ್ತಾನೆ. ದೇಹವು ಮಾಯಾಮಯವಾದದ್ದೆಂದು ತಿಳಿದರೆ ಅವನು ಪಾರಾಗುವನು. ಆದ್ದರಿಂದ ಇದುವರಿಗೆ ನಾನು ಜನರಿಗೆ ಹೇಳಿದ ದೇಹದ ನಶ್ವರತ್ವವನ್ನು ಮನಗಾಣಿಸುವದಕ್ಕಾಗಿ ಈ ದಿನ ನಾನು ನನ್ನ ದೇಹವನ್ನು ಪಂಚಭೂತಗಳಲ್ಲಿ ಲಯ ಮಾಡಿ ತೋರಿಸುತ್ತೇನೆ ಇನ್ನೆರಡು ಗಳಿಗೆಯ ಮೇಲೆ ನನ್ನ ಮೇಲಮುಸಕನ್ನು ತೆಗೆದು ನೋಡಿರಿ " ಎಂದು ಹೇಳಿ ಹೊದ್ದುಕೊಂಡು ಮಲಗಿದನು. ಎರಡು ಗಳಿಗೆಯ ಮೇಲೆ ತೆಗೆದು ನೋಡಲು ಹಾಸಿಗೆಯ ಮೇಲೆ ಬರೀ ಹೂವಿನ ರಾಶಿ ಇತ್ತು. ಎಲ್ಲರಿಗೂ ಅತ್ಯಾಶ್ಚರ್ಯವಾಯಿತು. ಭಗವಂತನ ಚರಿತ್ರೆಯು ಹೇಗೆ ಆಶ್ಚರ್ಯಕರವೋ ಭಗವದ್ಭಕ್ತರ ಚರಿತ್ರೆಗಳೂ ಹಾಗೆಯೇ ಆಶ್ಚರ್ಯಕರ. ಆ ಹೂಗಳಲ್ಲಿ ಒಂದು ಭಾಗವನ್ನು ಮುಸಲ್ಮಾನರು ತೆಗೆದುಕೊಂಡು ಹೋಗಿ ಗೋರಖಪುರದಲ್ಲಿ ಸಮಾಧಿಯನ್ನು ಮಾಡಿದರು. ಇನ್ನೊಂದ ಭಾಗವನ್ನು ಹಿಂದುಗಳು ತೆಗೆದುಕೊಂಡು ಹೋಗಿ ಕಾಶಿಯಲ್ಲಿ ದಹನ ಮಾಡಿ ಒಂದು ಮಠವನ್ನು ಸ್ಥಾಪಿಸಿದರು.

## ಪಂಥ

ತನ್ನದೊಂದು ಪಂಥವನ್ನು ಮಾಡಬೇಕೆಂದು ಅವನಿಗೆ ಇಚ್ಛೆ ಇರಲಿಲ್ಲ. ಅವನ ಅನುಯಾಯಿಗಳು ತಮ್ಮದೊಂದು ಪಂಥವನ್ನಾಗಿ ಮಾಡಿಕೊಂಡರು. ಅವನ ಮತವು ಶ್ರೀರಾಮಾನುಜಮತಕ್ಕೂ ಮತ್ತು ಕ್ರೈಸ್ತಮತಕ್ಕೂ ಎಡಬಲದಲ್ಲಿರುವದು. ದೇವರು ನಿರ್ಗುಣ ನಿರಾಕಾರ ನೆಂಬ ಅದ್ವೈತಿಗಳ ಮಾತು ಅವನ ಮನಸಿಗೆ ರುಚಿಸುತ್ತಿರಲಿಲ್ಲ. ಆದರೆ ಜೀವವು ಈಶ್ವರನಿಗಿಂತ ಭಿನ್ನವೆಂಬ ದ್ವೈತಿಗಳ ಮಾತಿಗೂ ಅವನ ಒಪ್ಪಿಗೆ ಇರಲಿಲ್ಲ. ರಾಮೋಪಾಸನೆಯ ಮೂಲಕ ಜೀವೇಶ್ವರರ ಐಕ್ಯವನ್ನು ಅನುಭವಿಸುವದು ಅವನ ಧ್ಯೇಯ. ಮಸೀದಿ ದೇವಸ್ಥಾನ ಇವುಗಳಿಗೆ ಹೋಗುವದೇ ಒಂದುಸಾಧನವಲ್ಲವೆಂದು ಅವನ ಅಭಿಪ್ರಾಯ. ಈ ಅರ್ಥವನ್ನು ಪರಮಾತ್ಮನು ತನಗೆ ಉಪದೇಶಮಾಡಿದಂತೆ ಒಂದು ಕವಿತೆಯಲ್ಲಿ ಹೇಳಿದ್ದಾನೆ. ಅದರ ತಾತ್ಪರ್ಯವೇನೆಂದರೆ:—

## ದೇವರ ವಾಕ್ಯ

**ಲಲಿತ ರಗಳೆ ||** ಎಲೆ ಮನುಷ್ಯನೆ ನನ್ನನ್ನೆಲ್ಲಿ ಹುಡುಕುವೆ ನೀನು |
ಬೆಳಗುತಿಹೆ ನಿನ್ನ ಹೃದಯದೊಳು ನಿತ್ಯವು ನಾನು ||
ಕೈಲಾಸದೊಳು *ಕಾಬದೊಳು ನೋಡೆ ನಾಸಿಲ್ಲ |
ಕೇಳು ಗುಡಿಯೊಳು ಮಸೀದಿಯೊಳಗಡಗಿಹನಲ್ಲ ||
ಕರ್ಮದೊಳಗಿಲ್ಲವಾಚಾರವರ್ಗದೊಳಿಲ್ಲ |
ಪೇರ್ಕ್ರಿಯಾ ಯೋಗಾಂಗಳಿಗೆ ದಕ್ಕುವನಲ್ಲ ||
ಎಲೆ ಕಬೀರಾ ಹುಡುಕಿದವರಿಗೊಲಿವಂಥವನು |
ತಿಳಿ ನೀನು ಪ್ರಾಣಕ್ಕೆ ಪ್ರಾಣನಾಗಿಹ ನಾನು ||

ಇನ್ನು ತೀರ್ಥಕ್ಷೇತ್ರ ಸಂಚಾರವೂ ವಿಗ್ರಹಾರಾಧನೆಯೂ ಕೂಡ ಅವನಿಗೆ ಬೇಡವಾದವುಗಳಾಗಿದ್ದವು. ನೋಡಿರಿ ಕಬೀರನ ಮಾತಿನರ್ಥವನ್ನು:—

* ಮಕ್ಕಾದಲ್ಲಿರುವ ಕಾಬಾ ಮಸೀದಿಯಲ್ಲಿ

**ದ್ವಿಪದಿ ॥** ತೀರ್ಥಂಗಳೆಲ್ಲ ಬರಿನೀರಲ್ಲದಿಲ್ಲ ।
ತೀರ್ಥಂಗಳೊಳು ಮಿಂದು ನೋಡಿರ್ಪೆನೆಲ್ಲ ॥
ವಿಗ್ರಹವು ನಿರ್ಜೀವವಲ್ಲದಿನ್ನೇನು ? ।
ವಿಗ್ರಹಕ್ಕೊರಲಿ ಬೇಸತ್ತಿಹೆನು ನಾನು ॥
ಕೋರಾನ್ ಪುರಾಣವಿವು ಮಾತಿನರಮನೆಯು ।
ಬೇರೇನು ತೆರೆದು ನೋಡಿದರದರ ಪರಿಯು ॥
ಅನುಭವದ ಬಲದಿಂ ಕಬೀರ ಪೇಳುವನು ।
ಮನದಿ ತಿಳಿದೆಲ್ಲವುಂ ಸುಳ್ಳೆಂಬುದನ್ನು ॥

ಮುಖ್ಯವಾಗಿ ಅವನು ಉಪದೇಶ ಮಾಡುತ್ತಿದ್ದದ್ದೇನೆಂದರೆ:—

**ಮಂದಾನಿಲ ॥** ಸುರಪುರವೆಂದಾನಂದಿಸಬೇಡ ।
ನರಕವೆಂದು ನೀ ಭಯಪಡಬೇಡ ।
ಏಳಿಗೆಯಾಗಲು ಹಿಗ್ಗಲುಬೇಡ ।
ಬಾಳುಕೆಡಲು ನೀ ತಗ್ಗಲುಬೇಡ ।
ಪರಮಮಂಗಳಾತ್ಮಕನನು ಬೇಗ ।
ಸ್ಮರಿಸಿ ಹಾಡು ಭಗವಂತನನೀಗ ।
ಭಕ್ತಿಯಿಲ್ಲದಿಹ ಯೋಗವು ಸಾಕೆ ? ।
ಭಕ್ತಿರಹಿತಗುಪವಾಸವದೇಕೆ ? ।
ಹೃದಯಮೊಳಗೆ ದೇವನನಿಟ್ಟವನು ।
ಪದುಳದಿ ಪೂಜೆಯ ಗೈದವನಹನು ।
ಮಾನವನಾಟವು ದೇವನಧೀನ ।
ಜ್ಞಾನಿ ಕಬೀರನ ಮಾತಿದು ಮಾನ ॥

ಈ ಪ್ರಕಾರವಾಗಿ ಅನೇಕ ಬಗೆಯಲ್ಲಿ ಉಪದೇಶ ಮಾಡಿರುವದರಲ್ಲೆಲ್ಲಾ ಹಿಂದೂ—ಮುಸಲ್ಮಾನರ ಐಕ್ಯದ ಇಚ್ಛೆಯು ಸೂಜಿಯೊಳಗಣ ಸೂತ್ರದಂತೆ ಎಲ್ಲೆಲ್ಲಿಯೂ ತೂರಿಕೊಂಡಿರುವದು. ಉದಾಹರಣಾರ್ಥವಾಗಿ ಸ್ಪಷ್ಟವಾಗಿರುವ ಒಂದು ಕವಿತೆಯ ತಾತ್ಪರ್ಯವನ್ನು ಇಲ್ಲಿ ಕೊಡುತ್ತೇವೆ.

**ತ್ರಿಪುಡೆ** ॥ ದೇವನಿರಲು ಮಸೀದಿಯೊಳಗಿನ್ನೀ ವಸುಧೆಯಿನ್ನಾರದ್ದೈ ।
ಭಾವಿಸಲು ವಿಗ್ರಹದಿ ದೇವರನಾವಿಧದೊಳದುಬಾರದ್ದೈ ॥
ದೇವನೇ ನೀನಲ್ಲನೋ ಮೇಣ್ರಾಮನೋ ನಾನರಿಯೆನು ।
ಭಾವಿಸುತ ನಿನ್ನನ್ನು ನಿನ್ನಯ ನಾಮದಿಂ ಜೀವಿಸುವೆನು ।
ಹರಿಯು ದಕ್ಷಿಣದಲ್ಲಿಹನು ಪಶ್ಚಿಮದಿ ನೆಲಸಿಹನಲ್ಲನು ।
ತೆರೆದು ನೋಡಲು ಹೃದಯವನು ಪರಮಾತ್ಮನೇ ನೆಲಸಿರ್ಪನು ॥

ಈ ಅರ್ಥದ ಕಬೀರನ ಹಾಡುಗಳು ಭರತಖಂಡದ ಸರ್ವ ದಿಗಂತಗಳಲ್ಲಿಯೂ ವ್ಯಾಪಿಸಿಯೇ ಇರುವುದರಿಂದ ಅವುಗಳನ್ನು ಇಲ್ಲಿ ವಿಶೇಷವಾಗಿ ಹೇಳತಕ್ಕ ಅವಶ್ಯವೇ ಇಲ್ಲ.

## ವಿಶೇಷ ವಿಚಾರ

ಕಾಶಿಯಲ್ಲಿರುವ ಮಠದಲ್ಲಿ ಕಬೀರನ ಕವಿತೆಗಳೆಲ್ಲಾ ಇರುವವು. ಅಲ್ಲಿ ಕಬೀರನ ಮೂರು ಚಿತ್ರಗಳಿವೆ. ಒಂದರಲ್ಲಿ ಧರ್ಮದಾಸ ಮತ್ತು ಶ್ರುತಪಾಲ ಎಂಬ ಇಬ್ಬರು ಶಿಷ್ಯರು ಕಬೀರನ ಅನುಗ್ರಹವನ್ನು ಬೇಡುತ್ತಿರುತ್ತಾರೆ; ಕಮಾಲನು ಗಾಳಿಯನ್ನು ಬೀಸುತ್ತಿರುತ್ತಾನೆ. ಇನ್ನೊಂದರಲ್ಲಿ ಕಬೀರನು ತನ್ನ ಜೊತೆಯಲ್ಲಿ ಶಿಷ್ಯನಾಗಿದ್ದು ಜಪಮಾಲೆಯನ್ನು ಹಿಡಿದಿರುವ ರವಿದಾಸನ ಸಂಗಡ ಇರುತ್ತಾನೆ. ಮತ್ತೊಂದರಲ್ಲಿ ದಿವ್ಯ ವಸ್ತ್ರಾಭರಣಗಳಿಂದ ಶೋಭಿಸುವ ಚಿತ್ತೂರು ರಾಣಿಯಾದ ಝಾಲಿಯು ಕಬೀರನಿಗೆ ಒಂದು ತಟ್ಟೆಯಲ್ಲಿ ಆಹಾರವನ್ನು ತಂದಿರುವಂತೆ ಇದೆ. ಇವು ಮೂರಲ್ಲದೆ ಸಮಸ್ತ ಭಕ್ತಮಂಡಲಿಯ ಹೃದಯದಲ್ಲಿಯೂ ಕಬೀರನ ಚಿತ್ರವಿದ್ದೇ ಇರುವದು. ಒಂದು ನಾವೆಯಲ್ಲಿ ಸೇರಿದ ವಿವಿಧ ಜನಾಂಗದಂತೆ ಭರತಖಂಡದಲ್ಲಿಯೇ ಒಗೆತನವನ್ನು ಮಾಡುವ ಯೋಗ ವಿಶೇಷವನ್ನು ಪಡೆದಿರುವ ಪರಸ್ಪರ ವಿರುದ್ಧಾಚಾರವುಳ್ಳ ಹಿಂದೂಗಳೂ ಮುಸಲ್ಮಾನರೂ ದೂರದೃಷ್ಟಿಯಿಲ್ಲದೆ ಕ್ಷುದ್ರವಿಚಾರಗಳಿಗಾಗಿ ಸುಮ್ಮನೆ ಹೊಡೆದಾಡುತ್ತಿರುವದನ್ನು ನೋಡಿ ಮರುಕದಿಂದ ಆ ವಾದವಿವಾದಕ್ಕೆ ಶಾಂತಿಯನ್ನುಂಟುಮಾಡುವದಕ್ಕಾಗಿ ಪರಮಾತ್ಮನೇ ನಮ್ಮ ನಡುವೆ ಕಬೀರನೆಂಬ ಮಹಾತ್ಮನ ಆವಿರ್ಭಾವವನ್ನು ಮಾಡಿದನೆಂದು ತೋರು

ತ್ತದೆ. ಹಿಂದೂ ಮತಕ್ಕೂ ಮುಹಮ್ಮದೀಯ ಮತಕ್ಕೂ ಸ್ವಭಾವ ದಲ್ಲೇನೂ ವಿರೋಧವಿಲ್ಲ. ಆದರೆ ಆ ಪರಿಸ್ಥಿತಿಯನ್ನು ನೋಡುವದಕ್ಕೆ ಕಬೀರನ ಮನಸ್ಸಿನಂಥ ಮನಸ್ಸು ಬೇಕು. ಸರ್ವಜನಸಹೋದರತ್ವವೇ ಆ ಮನಸ್ಸಿನ ವಿಶೇಷ ಲಕ್ಷಣ. ಈ ಲಕ್ಷಣವನ್ನು ಪ್ರತಿಯೊಬ್ಬನೂ ಆಗತ್ಯವಾಗಿ ವೈಗೂಡಿಸಿಕೊಂಡರೆ ಕಬೀರನ ಉದ್ದೇಶವು ಸಾರ್ಥಕ ವಾಗುವದು.



# ಚೈತನ್ಯ

ಲೋಕದಲ್ಲಿ ವಿಷಯಾಸಕ್ತಿ, ದುರಭಿಮಾನ, ಸಂಕುಚಿತಬುದ್ಧಿ- ಮೊದಲಾದ ಗುಣಗಳು ಮನುಷ್ಯನ ಅಭ್ಯುದಯಕ್ಕೆ ಪ್ರಬಲವಾದ ಪ್ರತಿಬಂಧಕಗಳಾಗಿರುವವು. ಇವುಗಳು ಎಲ್ಲೆಲ್ಲಿಯೂ ತಾಂಡವ ಮಾಡುತ್ತಿರುವಾಗ ಇವುಗಳನ್ನು ಭಕ್ತಿಯ ಆವೇಶದಿಂದ ಹಿಮ್ಮೆಟ್ಟಿಸ ಬಹುದೆಂದು ಮೇಲುಪಙ್ಕ್ತಿಯನ್ನು ಹಾಕಿಕೊಟ್ಟ ಯಶಸ್ಸು ಶ್ರೀಕೃಷ್ಣ ಚೈತನ್ಯನೆಂಬ ಮಹಾತ್ಮನಿಗೆ ಬಂದಿರುವದು, ಶ್ರೀಕೃಷ್ಣಚೈತನ್ಯನಿಗೆ ಮೊದಲು ವಿಶ್ವಂಭರನೆಂಬ ಹೆಸರಿತ್ತು. ವಿಶ್ವಂಭರನು ಗಂಗಾತೀರದಲ್ಲಿ ನದ್ಯಜಿಲ್ಲೆಯಲ್ಲಿರುವ ನವದ್ವೀಪವೆಂಬ ಸ್ಥಲದಲ್ಲಿದ್ದ ಅದ್ವೈತ ಸಾಂಪ್ರ ದಾಯದವನಾದ ಜಗನ್ನಾಥಮಿಶ್ರನೆಂಬ ವೈದಿಕ ಬ್ರಾಹ್ಮಣನ ಮಗನು. ನೀಲಾಂಬರ ಚಕ್ರವರ್ತಿಯೆಂಬ ಮಹಾಪಂಡಿತನ ಮಗಳಾದ ಶಚಿ

ಯೆಂಬಾಕೆಯು ಜಗನ್ನಾಥಮಿಶ್ರನ ಪತ್ನಿಯಾಗಿ ಕ್ರಿ. ಶ. ೧೪೮೫ ರಲ್ಲಿ ಈ ನಮ್ಮ ಕಥಾನಾಯಕನಾದ ವಿಶ್ವಂಭರನನ್ನು ಹಡೆದಳು. ಆ ದಿನ ಚಂದ್ರಗ್ರಹಣವಿದ್ದು ಎಲ್ಲೆಲ್ಲಿಯೂ ಹರಿನಾಮ ಸಂಕೀರ್ತನೆ ನಡೆಯುತ್ತಿದ್ದುದರಿಂದ ವಿಶ್ವಂಭರನ ಕಿವಿಯೊಳಗೆ ಹರಿನಾಮ ಘೋಷದ್ದೇ ಪ್ರಥಮ ಪ್ರವೇಶವಾಯಿತು. ಹುಟ್ಟಿದ ಮಗು ಬಹು ಅಂದವಾಗಿದ್ದರಿಂದ ನೋಡಿದ ಜನರು ಮುದ್ದಿನಿಂದ ಅದನ್ನು ಗೌರಯೆಂದೂ, ಗೌರಾಂಗಯೆಂದೂ ಕರೆಯುತ್ತಿದ್ದರು.

## ವಿದ್ಯಾಭ್ಯಾಸ ಮತ್ತು ಸಂಸಾರಬಂಧನ

ಆಗ ನವದ್ವೀಪವು ಸಂಸ್ಕೃತಪಾಂಡಿತ್ಯಕ್ಕೆ ತೌರುಮನೆಯಾಗಿತ್ತು. ಅಲ್ಲಿಯ ವಾತಾವರಣವೆಲ್ಲ ತರ್ಕವ್ಯಾಕರಣ ವೇದಾಂತ ವಿಚಾರಗಳಿಂದ ತುಂಬಿ ಹೋಗಿತ್ತು. ಜಗನ್ನಾಥಮಿಶ್ರನು ವಿಶ್ವಂಭರನಿಗೂ ಆ ಪಾಠಗಳ ಅಭ್ಯಾಸಕ್ಕೆ ತಕ್ಕ ಅನುಕೂಲತೆಗಳನ್ನು ಕಲ್ಪಿಸಿದನು. ವಿಶ್ವಂಭರನು ಬಹು ತೀವ್ರವಾದ ಬುದ್ಧಿಯುವನಾಗಿದ್ದು ಬಹು ಬೇಗ ಎಲ್ಲವನ್ನೂ ಗ್ರಹಿಸಿದನು. ಅವನು ವಿದ್ಯಾರ್ಥಿಯಾಗಿರುವಾಗಲೇ ಜಗನ್ನಾಥನು ಲೋಕಾಂತರವನ್ನು ಪಡೆದನು. ಮಗನ ಯೋಗಕ್ಷೇಮದ ಭಾರವನ್ನು ಹೊತ್ತ ತಾಯಿಯು ಆದಷ್ಟು ಬೇಗ ಆ ಹುಡುಗನ ಕೊರಳೊಳಗೆ ಒಂದು ಕನ್ಯೆಯನ್ನು ಕಟ್ಟಬೇಕೆಂದು ಅವಸರಗೊಂಡಳು. ಏಕೆಂದರೆ ಮೊದಮೊದಲು ಹುಟ್ಟಿದ ಎಂಟು ಹೆಣ್ಣುಮಕ್ಕಳೂ ಸತ್ತು ಹೋಗಿ ಒಂಬತ್ತನೆಯವನಾದ ಮಗನು ಸಂಸ್ಕೃತವನ್ನು ಚನ್ನಾಗಿ ಕಲಿತು ವೈರಾಗ್ಯದಿಂದ ತನ್ನ ಕೈಬಿಟ್ಟು ಹೋಗಿದ್ದನು. ಈ ನಷ್ಟವನ್ನೆಲ್ಲ ವಿಶ್ವಂಭರನ ಗೃಹಸ್ಥಾಶ್ರಮದಿಂದ ಪೂರ್ಣಮಾಡಿಕೊಳ್ಳಬೇಕೆಂದು ಆಕೆಗೆ ಕುತೂಹಲ. ಅಂತೂ ವಿಶ್ವಂಭರನಿಗೆ ವಲ್ಲಭಾಚಾರ್ಯರ ಮಗಳಾದ ಲಕ್ಷ್ಮಿಯೆಂಬಾಕೆಯೊಡನೆ ವಿವಾಹವಾಯಿತು. ಪಂಡಿತನಾದ ವಿಶ್ವಂಭರನು ಒಮ್ಮೆ ದಿಗ್ವಿಜಯಕ್ಕಾಗಿ ಪರಸ್ಥಲಕ್ಕೆ ಹೋಗಿದ್ದಾಗ ಆ ಹೆಂಡತಿಯು ಸರ್ಪದಷ್ಟಳಾಗಿ ಮೃತಳಾದಳು. ಆಗ ಅವನು ವಿಷ್ಣುಪ್ರಿಯಾಯೆಂಬ ಮತ್ತೊಬ್ಬಾಕೆಯನ್ನು ಲಗ್ನಮಾಡಿಕೊಂಡು ಆಕ್ಕರೆಯಿಂದ ಗೃಹಕೃತ್ಯಗಳನ್ನು ಸಾಗಿಸುತ್ತಿದ್ದನು. ಇವನ

ಪಾಂಡಿತ್ಯವೇ ಇವನ ಆದಾಯದ ಆಧಾರವಾಗಿತ್ತು. ವಾಗ್ಧೋರಣೆಯು ಬಹು ಚೆನ್ನಾಗಿದ್ದದರಿಂದ ಎಲ್ಲಿ ಹೋದರೂ ಇವನಿಗೆ ಜಯಪತ್ರವು ಸಿಕ್ಕಿ ಭಾಗ್ಯಲಕ್ಷ್ಮಿಯು ತಾನಾಗಿ ಹುಡುಕಿಕೊಂಡು ಬರುವಂತೆ ಆಯಿತು. ಇದರ ಪಿತ್ತವು ತಲೆಗೇರಿ ಅವನು ಸ್ವಲ್ಪಕಾಲದಲ್ಲಿಯೇ ಪೂರ್ವಬಂಗಾಲದಲ್ಲೆಲ್ಲ ತನ್ನ ಧ್ವಜಪಟವನ್ನೇರಿಸಿಟ್ಟು ಬೇಕಾದಷ್ಟು ಐಶ್ವರ್ಯವನ್ನು ಸಂಪಾದನೆ ಮಾಡಿದನು.

## ವೈರಾಗ್ಯದ ಅಂಕುರಾರ್ಪಣ

ಪಾಂಡಿತ್ಯದ ಮದದಿಂದ ಎದೆಯುಬ್ಬಿದ ವಿಶ್ವಂಭರನು ಒಮ್ಮೆ ತನ್ನ ತಂದೆಯ ಶ್ರಾದ್ಧಕ್ಕಾಗಿ ಗಯಾಕ್ಕೆ ಹೋದಾಗ ಅಲ್ಲಿ ಅವನಿಗೆ ಈಶ್ವರಪುರಿಯೆಂಬ ಮಹಾಪುರುಷರ ದರ್ಶನವಾಯಿತು. ಈಶ್ವರಪುರಿ ಎಂಬವರು ಶ್ರೀಮಧ್ವಾಚಾರ್ಯರ ಅನುಯಾಯಿಗಳಾಗಿದ್ದು ಒಳ್ಳೇ ಭಕ್ತರಾಗಿ ವಿಷ್ಣುಭಕ್ತಿಯನ್ನು ಪ್ರಸಾರ ಮಾಡುವ ಉದ್ಯೋಗವನ್ನು ಕೈಕೊಂಡಿದ್ದರು. ಅವರು ವಿಶ್ವಂಭರನಿಗೆ ವಿಷ್ಣುಭಕ್ತಿಯ ಸವಿಯನ್ನು ಹಚ್ಚಿದರು. ಹುಟ್ಟಿದ ದಿವಸವೇ ಕಿವಿಯ ಮೂಲಕ ಹರಿನಾಮಾಮೃತ ವನ್ನು ಪ್ರಾಶನ ಮಾಡಿದ್ದ ವಿಶ್ವಂಭರನ ಹೃದಯವು ಈಶ್ವರಪುರಿಗಳ ಕೃಷ್ಣಭಕ್ತಿಯ ಉಪದೇಶವನ್ನು ಕಚ್ಚಿ ಹಿಡಿದುಕೊಂಡುಬಿಟ್ಟಿತು. ಅಂದಿ ನಿಂದಲೇ ಅವನು ಕೃಷ್ಣನಿಗೆ ಆನಂದವನ್ನುಂಟುಮಾಡಿದ ಸಂಗತಿಗಳನ್ನು ನೆನೆದು ಆನಂದಗೊಳ್ಳುತ್ತಲೂ ದುಃಖವನ್ನುಂಟುಮಾಡಿದ ಸಂಗತಿ ಗಳನ್ನು ನೆನೆದು ದುಃಖಗೊಳ್ಳುತ್ತಲೂ ಒಮ್ಮೊಮ್ಮೆ ನಗುತ್ತ, ಒಮ್ಮೊಮ್ಮೆ ಅಳುತ್ತ, ಒಮ್ಮೊಮ್ಮೆ ಕುಣಿಯುತ್ತ, ಒಮ್ಮೊಮ್ಮೆ ನಿಟ್ಟಿಸಿ ನೋಡುತ್ತ, ಒಮ್ಮೊಮ್ಮೆ ನಿಟ್ಟುಸುರುಬಿಡುತ್ತ, ಒಮ್ಮೊಮ್ಮೆ ಬೆರಗಾಗುತ್ತ ಒಮ್ಮೊಮ್ಮೆ ಬೆಚ್ಚಿಬೀಳುತ್ತ, ರೋಮಾಂಚಗಳನ್ನು ಪಡೆಯುತ್ತ, ಆನಂದಾಶ್ರುಗಳನ್ನು ಸುರಿಸುತ್ತ ಗದ್ಗದಸ್ವರದಿಂದ ಹಾಡುತ್ತ, ತನ್ನನ್ನು ತಾನು ಮರೆಯುತ್ತ ಪ್ರೇಮಾತಿಶಯದಿಂದ ತನ್ಮಯನಾಗುತ್ತಿದ್ದನು. ಪಾಂಡಿತ್ಯದ ಘನತೆಯನ್ನು ಬಿಟ್ಟು ವಿಶ್ವಂಭರನು ಹೀಗೆ ಹುಚ್ಚನಂತೆ ಆಡುತ್ತಿರುವದನ್ನು ನೋಡಿ ಊರಿನ ಜನರು ಅಸಹ್ಯಪಡುವದಕ್ಕಾರಂಭಿ ಸಿದರು. ಸುಮ್ಮನೆ ತಮ್ಮಲ್ಲಿ ಅಸಹ್ಯಪಟ್ಟುಕೊಂಡದ್ದಿಷ್ಟೇ ಅಲ್ಲ;

ವಾದ್ಯಘೋಷದಿಂದ ಯುಕ್ತವಾದ ಅವನ ಕುಣಿದಾಟಗಳಿಂದ ಜನರಿಗೆ ತ್ರಾಸವಾಗುವದೆಂದು ಅಲ್ಲಿಯ ಮುಹಮ್ಮದೀಯಾಧಿಕಾರಿಗೆ ಹೇಳಿ ಅವನ ಆ ನಡವಳಿಕೆಗೆ ಪ್ರತಿಬಂಧಕವನ್ನು ಕಲ್ಪಿಸಿದರು. ಆಗ ವಿಶ್ವಂಭರನು ತನ್ನ ಪರಿವಾರದೊಡನೆ ತಾನೇ ಆ ಅಧಿಕಾರಿಯ ಮನೆಗೆ ಹೋಗಿ ತನ್ನ ಪ್ರೇಮಪ್ರಧಾನವಾದ ಮಾತುಕಥೆಗಳಿಂದ ಅವನನ್ನು ತನ್ನ ವಶಮಾಡಿಕೊಂಡು ತನ್ನ ಉದ್ಯೋಗವನ್ನು ಎಂದಿನಂತೆ ಸಾಗಿಸಿದನು.

## ಸನ್ಯಾಸ ಸ್ವೀಕಾರ

ತನ್ನ ಪ್ರೇಮಾವೇಶವು ಜನರಿಗೆ ಅಸಹ್ಯವಾದದ್ದನ್ನು ಕಂಡು ವಿಶ್ವಂಭರನಿಗೆ ಆಶ್ಚರ್ಯವಾಯಿತು. ಆಗ ಭಕ್ತಿಯ ವಿಷಯಕ್ಕೆ ಜನರಲ್ಲೆಲ್ಲ ಬಹು ಕೀಳಾದ ಭಾವನೆಯಿತ್ತು. ಪ್ರತಿಯೊಬ್ಬರೂ ಪಂಡಿತರಾಗಿದ್ದು ವಾಗ್ವಾದದಿಂದ ಮತ್ತೊಬ್ಬರ ಮತವನ್ನು ಖಂಡಿಸುತ್ತ ವೇದಾಂತದ ಮಾತುಗಳನ್ನು ಗಾಳಿಗೆ ಹಾರಿಬಿಡುತ್ತ ಬುದ್ಧಿಶಕ್ತಿಯ ಚಾತುರ್ಯವನ್ನು ಪ್ರದರ್ಶನ ಮಾಡುವದರಲ್ಲಿದ್ದರು. ಇದರ ಜೊತೆಗೆ ಶಾಕ್ತರ ಪ್ರಾಬಲ್ಯವಿದ್ದು ದೇವತಾಪ್ರೀತ್ಯರ್ಥವೆಂಬ ಹೆಸರಿನಿಂದ ಪಶುವಧೆಯೂ ನಡೆಯುತ್ತಿತ್ತು. ನಾಗರಿಕರೆಲ್ಲಾ ಬುದ್ಧಿಶಕ್ತಿಯಿಂದ ಹಣವನ್ನು ಸಂಪಾದಿಸಿ ಮೆದುಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟು ಪ್ರೇಮಪ್ರಧಾನವಾದ ಹೃದಯವನ್ನು ಪೊಳ್ಳುಮಾಡಿ ಬಿಟ್ಟಿದ್ದರು. ಇದನ್ನೆಲ್ಲ ನೋಡಿ ತಡೆಯಲಾರದೆ ವಿಶ್ವಂಭರನು ತಾನು ಅದರ ಪರಿಹಾರೋಪಾಯಕ್ಕೆ ದೀಕ್ಷಿತನಾಗಬೇಕೆಂದು ಸಂಕಲ್ಪಮಾಡಿ ಕ್ರಿ. ೧೫೦೯ ರಲ್ಲಿ ಕೇಶವಭಾರತಿಗಳೆಂಬವರಿಂದ ಸನ್ಯಾಸವನ್ನು ಸ್ವೀಕರಿಸಿ ಅಂದಿನಿಂದ ಕೃಷ್ಣಚೈತನ್ಯನೆಂಬ ಹೆಸರನ್ನು ಪಡೆದನು. ನಾವು ಈಗ ಚೈತನ್ಯನೆಂದು ಕರೆಯುವದು ಆ ಹೆಸರಿನ ಸಂಕ್ಷಿಪ್ತರೂಪ.

## ಪುರಿಯನ್ನು ಮುಖ್ಯ ಸ್ಥಾನವಾಗಿ ಮಾಡಿದ್ದು

ಬಹುಬೇಗ ಮನಸ್ಸು ಕರಗುವ ಸ್ವಭಾವದವನಾದ ಚೈತನ್ಯನು ಪೂರ್ವಸಮುದ್ರ ತೀರದಲ್ಲಿರುವ ಜಗನ್ನಾಥ ದೇವರ ಕ್ಷೇತ್ರವಾದ ಪುರಿಗೆ ಬಂದನು. ಅಲ್ಲಿ ಕೆಲವು ದಿವಸ ತನ್ನ ಪ್ರೇಮಭಜನೆಯಿಂದ ಜನ

ಮಂಡಲಿಯನ್ನು ಆಕರ್ಷಣೆ ಮಾಡುತ್ತಿರುವಾಗ ಅಲ್ಲಿಯ ಅರಸನಾದ ಪ್ರತಾಪರುದ್ರನ ಮಂತ್ರಿಯಾದ ಭಟ್ಟಾಚಾರ್ಯ ಸಾರ್ವಭೌಮನೆಂಬವನೂ ಇವನ ಸೆಳೆತಕ್ಕೆ ಸಿಕ್ಕಿದನು. ಭಟ್ಟಾಚಾರ್ಯನು ಕಟ್ಟ ದ್ವೈತಿಯಾಗಿದ್ದು ಚೈತನ್ಯನ ಮುಂದೆ ತನ್ನ ಪುರಾಣವನ್ನೆಲ್ಲಾ ಬಿಚ್ಚಿದನು. ಮುಗಿಯುವವರೆಗೂ ಕೇಳಿ ಚೈತನ್ಯನು ಅವನ ಅಭಿಪ್ರಾಯಗಳೆಲ್ಲ ಸಾಧನ ಮಾರ್ಗಕ್ಕೆ ಅನುಪಯುಕ್ತವಾದವುಗಳೆಂದು ತೋರಿಸಿ ದ್ವೈತಭಕ್ತಿಯನ್ನು ಮನಗಾಣಿಸಿ ಅವನನ್ನು ತನ್ನ ಅನುಯಾಯಿಯಾಗಿ ಮಾಡಿಕೊಂಡನು.

## ತೀರ್ಥಯಾತ್ರೆ

ಚೈತನ್ಯನು ಒಮ್ಮೆ ದಕ್ಷಿಣದೇಶಕ್ಕೆ ಯಾತ್ರೆಗೆ ಹೊರಟು ದಾರಿಯಲ್ಲಿ ಒಬ್ಬ ಮಹಾಕುಷ್ಟರೋಗಿಯನ್ನು ತನ್ನ ಸ್ಪರ್ಶಮಾತ್ರದಿಂದ ಆರೋಗಿಯಾಗಿ ಮಾಡಿ ರಾಜಮಹೇಂದ್ರ, ತಿರುಪತಿ, ಕಂಚಿ, ಶ್ರೀರಂಗ, ಮಧುರಾ– ಈ ಮಾರ್ಗವಾಗಿ ಕನ್ಯಾಕುಮಾರಿಯನ್ನು ದರ್ಶನಮಾಡಿ ಅಲ್ಲಿಂದ ತಿರುಗಿ ಉಡುಪಿ, ಪಂಢರಪುರ, ನಾಸಿಕ ಮೊದಲಾದ ಉತ್ತರ ದೇಶದಲ್ಲಿಯೂ ಸಂಚಾರ ಮಾಡಿ ಪುರಿಗೆ ಬಂದು ಸೇರಿದನು. ಈ ಸಂಚಾರದಲ್ಲಿ ಅವನಿಗೆ ಅನೇಕ ಅನುಯಾಯಿಗಳಾದರು. ಆಗ ಅವನು ತನ್ನ ಶಿಷ್ಯರಲ್ಲಿ ನಿತ್ಯಾನಂದನೆಂಬುವನನ್ನೂ ಅದ್ವೈತಾಚಾರ್ಯನೆಂಬುವನನ್ನೂ ಧರ್ಮಪ್ರಚಾರಕರನ್ನಾಗಿ ಗೊತ್ತುಮಾಡಿ ಭಗವದ್ಭಕ್ತಿಯ ಪ್ರವಾಹವು ಚಂಡಾಲರ ಗುಡಿಸಲುಗಳನ್ನು ಕೂಡ ಹೊಕ್ಕು ಹೊರಡುವಂತೆ ಸನ್ನಾಹವನ್ನು ಮಾಡಿದನು. ಆಮೇಲೆ ಚೈತನ್ಯನು ಒಬ್ಬ ಶಿಷ್ಯನನ್ನು ಮಾತ್ರವೇ ಸಂಗಡ ಕರೆದುಕೊಂಡು ಕೃಷ್ಣಲೀಲೆ ನಡೆದ ವೃಂದಾವನಕ್ಕೆ ಹೋಗಿ ಯಮುನಾತೀರದಲ್ಲೆಲ್ಲ ಸಂಚಾರ ಮಾಡಿಕೊಂಡು ಕೃಷ್ಣಭಕ್ತಿಯನ್ನು ಮೈದುಂಬಿಸಿಕೊಂಡು ಕಾಶಿಯ ಮಾರ್ಗವಾಗಿ ಪುರಿಗೆ ಬಂದನು.

## ಮಹಮ್ಮದೀಯರನ್ನು ಶಿಷ್ಯರನ್ನಾಗಿ ಮಾಡಿಕೊಂಡದ್ದು

ಚೈತನ್ಯನು ಕಾಶಿಯಿಂದ ಪುರಿಗೆ ಬರುವಾಗ ಒಂದು ಕಡೆ ದಾರಿಯಲ್ಲಿ ಅವನು ಒಮ್ಮೆ ಕೃಷ್ಣಪ್ರೇಮದ ಆವೇಶದ ಭರದಲ್ಲಿ ಮೈಮರೆತು

ಮಲಗಿದನು. ಅವನ ಹತ್ತಿರ ಶಿಷ್ಯರು ಇರುವದನ್ನು ನೋಡಿ ಅಲ್ಲಿ ಮಾರ್ಗಸ್ಥರಾಗಿ ಹೋಗುತ್ತಿದ್ದ ಪಠಾಣ ಸಿಪಾಯಿಗಳು ಆ ಶಿಷ್ಯರನ್ನು ಕಳ್ಳರೆಂದೂ ಚೈತನ್ಯನನ್ನು ಕಳ್ಳರ ಕೈಗೆ ಸಿಕ್ಕುಬಿದ್ದ ಗೃಹಸ್ಥನೆಂದೂ ತಿಳಿದು ಅವರ ಮೇಲೆ ತಮ್ಮ ಕೈಮಾಡುವ ಯೋಚನೆಯನ್ನು ಮಾಡಿದರು. ಇಷ್ಟರಲ್ಲಿ ಚೈತನ್ಯನು ಎಚ್ಚತ್ತು ಆ ಆಳುಗಳಿಗೆ ನಿಜಸ್ಥಿತಿಯನ್ನು ಹೇಳಿದನು. ಆಗ ಆ ಆಳುಗಳಲ್ಲೊಬ್ಬನು ಮಹಮ್ಮದೀಯಮತವನ್ನು ಚನ್ನಾಗಿ ತಿಳಿದವನಿದ್ದನು. ಪ್ರಕಾಶಮಯವಾದ ಕಣ್ಣುಗಳುಳ್ಳ ತೇಜಃಪುಂಜವಾದ ಚೈತನ್ಯನ ಮುಖವನ್ನು ನೋಡುತ್ತಲೇ ಅವನು ಚೈತನ್ಯನೊಂದಿಗೆ ಮೆಲ್ಲಗೆ ದೇವರ ವಿಷಯಕವಾದ ಮಾತು ತೆಗೆದನು. ಆಗ ಚೈತನ್ಯನು ಮಹಮ್ಮದೀಯ ಮತದಲ್ಲಿರುವ ಕೊರತೆಗಳನ್ನು ತೋರಿಸಿ ಕೃಷ್ಣಭಕ್ತಿಯ ಪ್ರಭಾವವನ್ನು ಹೇಳಿದನು. ಅವರೆಲ್ಲರೂ ಅಂದಿನಿಂದ ಅವನ ಶಿಷ್ಯರೇ ಆದರು.

ಚೈತನ್ಯನು ಪುರಿಯಲ್ಲಿ ಪ್ರತಿನಿತ್ಯ ಬೆಳಗಾಗುತ್ತಲೇ ಸ್ನಾನಮಾಡಿ ಜಗನ್ನಾಥನ ಮುಂದೆ ಸ್ತೋತ್ರಮಾಡುತ್ತ ನಿಂತನೆಂದರೆ ಶಿಷ್ಯರು ಹಗಲು ಮೀರಿತೆಂದು ಎಚ್ಚರಿಸಿದಾಗಲೇ ಅವನಿಗೆ ಎಚ್ಚರ. ಆಮೇಲೆ ಯಾರಾದರೂ ಕರೆದರೆ ಅವರ ಮನೆಯಲ್ಲಿ– ಇಲ್ಲದಿದ್ದರೆ ದೇವಸ್ಥಾನದಲ್ಲಿಯೇ– ಪ್ರಸಾದ ಸ್ವೀಕಾರ; ಊಟವಾದಮೇಲೆ ಭಾಗವತ, ಭಗವದ್ಗೀತೆ, ಬ್ರಹ್ಮಸೂತ್ರ–ಮೊದಲಾದ ಯಾವದಾದರೊಂದು ಗ್ರಂಥವನ್ನು ಹಿಡಿದು ಸರಸವಾದ ಸಂಭಾಷಣೆ; ಸಾಯಂಕಾಲ ತಾಳಮೇಳಗಳೊಡನೆ ಹೃದಯಂಗಮವಾದ ಭಜನೆ– ಇವೇ ಇವನ ದಿನಚರ್ಯೆಗಳು. ಕೃಷ್ಣ ರಾಧೆಯರ ಮೇಲೆ ಅವನ ಪ್ರೀತಿ ಬಹಳ. ಗೋಪಿಕಾಸ್ತ್ರೀಯರ ಪ್ರೇಮದಂಥ ಮಾಧುರ್ಯ ಭಕ್ತಿಯ ಮೇಲೆ ಇವನಿಗೆ ಆದರ. ಅವನ ಭಜನಗೋಷ್ಟಿಯಲ್ಲಿ ಜಾತಿಭೇದದ ದುರಭಿಮಾನವೇನೂ ಇರಲಿಲ್ಲ. ಅಲ್ಲಿಯ ಅರಸನಾದ ಪ್ರತಾಪರುದ್ರನೂ ಭಟ್ಟಾಚಾರ್ಯನೂ ಹರಿದಾಸ ಠಾಕೂರನೆಂಬ ಅಸ್ಪೃಶ್ಯ ಜಾತಿಯವನೂ ಕೂಡ ಪರಸ್ಪರ ಭಿನ್ನ ಭಾವಗಳನ್ನು ಬಿಟ್ಟು ಕಲೆಯುತ್ತಿದ್ದರು. ಕರ್ಮಮಾರ್ಗದ ಮೇಲೆ ಅವನ ಶ್ರದ್ಧೆಯಿರಲಿಲ್ಲ. ಮನುಷ್ಯನ ನಿಜಾನಂದಕ್ಕೆ ಭಗವದ್ಭಕ್ತಿಯೇ ಮುಖ್ಯವೆಂದೂ ಅದಕ್ಕೆ ನಾಮಸ್ಮರಣೆಯೇ ಸಾಧನವೆಂದೂ ಅವನ ಮತ.

ಅವನ ಮಠಗಳು ಈಗಲೂ ಅಲ್ಲಲ್ಲಿ ಇವೆ. ಈ ಪ್ರಕಾರವಾಗಿ ತನ್ನ ವೈದುಷ್ಯದಿಂದಲೂ ಪ್ರೇಮದಿಂದಲೂ ಜನರ ಮನಸ್ಸುಗಳನ್ನೆಲ್ಲ ತಿದ್ದಿ ಎಲ್ಲರ ಹೃದಯಕ್ಕೂ ತನ್ನ ಹೃದಯದಿಂದ ಪ್ರೇಮವೆಂಬ ನಳದ ಮೂಲಕ ಭಕ್ತಿರಸದ ಪ್ರವಾಹವನ್ನು ಹಾಯಿಸಿ ಚೆನ್ನಾಗಿ ಗರಗಾಗಿದ್ದ ಮನಸ್ಸುಗಳನ್ನು ತಂಪುಗೊಳಿಸಿದಂಥ ಚೈತನ್ಯನು ಅವಿಚ್ಛಿನ್ನವಾದ ಶ್ರಮದಿಂದ ಅಸ್ವಸ್ಥನಾಗಿ ಕ್ರಿ. ೧೫೩೨ ರಲ್ಲಿ ಶ್ರೀಕೃಷ್ಣ ಸಾನ್ನಿಧ್ಯವನ್ನು ಪಡೆದನು.

---

# ನಾ ನ ಕ

## ಹುಟ್ಟು

ಲೋಕದಲ್ಲಿ ಏಕಮತ್ಯವನ್ನುಂಟುಮಾಡುವ ಸಾಮರ್ಥ್ಯವು ಧರ್ಮಪಂಥಕ್ಕಿರುವಷ್ಟು ಬೇರೆ ಯಾವದಕ್ಕೂ ಇಲ್ಲ. ಗುಡ್ಡಗಾಡಿನಲ್ಲಿ ಅಶಿಕ್ಷಿತರಾಗಿ ಒಬ್ಬೊಬ್ಬರ ದಾರಿ ಒಂದೊಂದಾಗಿ ನಿರುಪಯೋಗಿಗಳಾಗಿದ್ದ ಜನರು ಸಿಕ್‌ಯೆಂಬ ಒಂದು ಧರ್ಮಪಂಥದ ಕಟ್ಟಿಗೆ ಸಿಕ್ಕಿ ಹಿಂದುಸ್ಥಾನದಲ್ಲಿ ಅನ್ಯಾದೃಶವಾದ ಪ್ರತಿಷ್ಠೆಯನ್ನು ಪಡೆದಿರುವದು ನಮ್ಮ ಕಣ್ಣಿಗೆ ಕಟ್ಟಿದಂತೆ ಕಾಣುತ್ತದೆ. ಈ ಸಿಕ್ ಧರ್ಮಪಂಥದ ಸ್ಥಾಪಕನ ಹೆಸರು ನಾನಕ. ಇವನು ಹುಟ್ಟಿದ ಸ್ಥಳ ಪಂಜಾಬ ಇಲಾಖೆಯ ಲಾಹೋರ ಜಿಲ್ಹೆಯಲ್ಲಿರುವ ತಳವಂಡಿ; ಹುಟ್ಟಿದ ಕಾಲ

ಕ್ರಿ. ೧೪೬೯. ಇವನ ತಂದೆಯ ಹೆಸರು ಕಾಳು. ತಾಯಿಯ ಹೆಸರು ತ್ರಿಪ್ತಾ. ಇವನ ಮನೆತನದ ಉದ್ಯೋಗ ಗ್ರಾಮಾಧಿಕಾರ ಮತ್ತು ವ್ಯವಸಾಯ.

## ಬಾಲ್ಯ

ನಾನಕನಲ್ಲಿ ಚಿಕ್ಕಂದಿನಿಂದಲೂ ಏಕಾಂತವಾಸದ ಲಕ್ಷಣಗಳು ಕಂಡುಬರುತ್ತಿದ್ದವು. ಹುಡುಗರೊಡನೆ ಆಟಪಾಟಕ್ಕೆ ಸೇರದೆ ಎಲ್ಲಿಯಾದರೊಂದು ಕಡೆಗೆ ಮೌನದಿಂದ ಕೂಡುವದೇ ಅವನ ಚಟವಾಗಿತ್ತು. ತಂದೆಯು ಅವನನ್ನು ಸಾಲೆಗೆ ಕಳುಹಿಸಿದನು. ವಿದ್ಯಾಭ್ಯಾಸದಲ್ಲಿ ನಾನಕನೇನೂ ಹಿಂದಾಗಲಿಲ್ಲ. ಅವನ ಬುದ್ಧಿಯು ಬಹು ಚುರುಕಾಗಿತ್ತು. ಅವನು ಎಲ್ಲವನ್ನೂ ಗ್ರಹಿಸುತ್ತ ಬಂದನು. ಅಷ್ಟೇ ಅಲ್ಲ; ಎಷ್ಟೋ ಸಂದರ್ಭಗಳಲ್ಲಿ ಹಲವು ವಿಚಾರಗಳಲ್ಲಿ ಅವನು ತನ್ನ ಸ್ವತಂತ್ರವಾದ ಬೇರೆ ಅಭಿಪ್ರಾಯಗಳನ್ನು ಹೇಳುವದನ್ನು ಕೇಳಿ ಉಪಾಧ್ಯಾಯರು ಕಂಡು ಬೆರಗಾಗುವಹಾಗಿತ್ತು. ಆದರೂ ಮೌನದಿಂದ ವಿಚಾರನಿಷ್ಠನಾಗಿ ಕುಳಿತುಕೊಳ್ಳುವ ಚಟವೇನೂ ತಪ್ಪಲಿಲ್ಲ. ಇದನ್ನು ಹೇಗಾದರೂ ತಪ್ಪಿಸಬೇಕೆಂದು ತಂದೆಯು ಅವನನ್ನು ತನ್ನ ಉದ್ಯೋಗಕ್ಕೆ ನೆರವಾಗಿ ಮಾಡಿಕೊಂಡು ವ್ಯಾಪಾರವನ್ನೂ ವ್ಯವಸಾಯವನ್ನೂ ಬೆಳೆಸಿದನು. ಆದರೂ ಏಕಾಂತವಾಸವೇನೂ ಕಡಿಮೆಯಾಗಲಿಲ್ಲ. ನಾನಕನು ತನಗೆ ತಕ್ಕ ಮನಸ್ಸಿನವರನ್ನೆಲ್ಲ ಕೂಡಿಸಿಕೊಂಡು ಅವರ ನಡುವೆ ಹೊಸ ಹೊಸ ಕವಿತೆಗಳನ್ನು ಮಾಡಿ ಅವುಗಳನ್ನು ಮನೋಹರವಾಗಿ ಹಾಡುವ ಉದ್ಯೋಗವನ್ನು ನಡೆಸಿದನು. ಹೀಗಿರುವಾಗ ಅವಿಚ್ಛಿನ್ನವಾದ ಮಾನಸಿಕತ್ರಾಸದಿಂದ ಅವನ ದೇಹದಲ್ಲಿ ಅಸ್ವಸ್ಥತೆಯುಂಟಾಯಿತು. ಮಗನ ಮೇಲಿನ ಪ್ರೇಮದಿಂದ ತಂದೆಯು ಒಳ್ಳೇ ವೈದ್ಯನನ್ನು ಬರಮಾಡಿಕೊಂಡು ಅವರಿಗೆ ಮಗನ ವಿದ್ಯಮಾನವನ್ನು ತೋರಿಸಿದನು. ಆ ವೈದ್ಯನು ನಾನಕನ ಕೈಯ ನಾಡಿಯನ್ನು ಹಿಡಿದು ನೋಡಿ ಆಕಾಶವನ್ನು ನಿಟ್ಟಿಸುತ್ತ ರೋಗದ ಸ್ಥಿತಿಯನ್ನು ತಿಳಿಯುವ ವಿಚಾರದಲ್ಲಿರಲು ನಾನಕನು ಆಗ ತನ್ನ ಮನಸ್ಸಿನಲ್ಲಿ ಉಂಟಾದ ಕಲ್ಪನೆಯನ್ನು ಹಾಡುಕಟ್ಟಿ ಹಾಡುವದಕ್ಕಾರಂಭಿಸಿದನು. ಅದರ ತಾತ್ಪರ್ಯವೇನೆಂದರೆ:—

ಷ || ಬಿಡು ಬಿಡು ವೈದ್ಯನೆ |
ಹಿಡಿಯನು ನಾಡಿಯೊ |
ಳಡಗಿಲ್ಲವೊ ನನ್ನಯ ರೋಗ ||
ಬಿಡದಿಹುದದು ಮನ |
ದೆಡೆಯೊಳು ನೀನದ |
ನುಡುಗಿಸಲಾರೆಯೊ ಹೋಗೀಗ || ೧ ||
ನನ್ನಯ ದುಃಖವ |
ನಿನ್ನು ತಿಳಿಯೆ ನೀ |
ನಿನ್ನೇನೌಷಧವೀಯುವೆಯೊ ? ||
ಬಿನ್ನಣವೇಂ ನೋ |
ವನ್ನಿತ್ತವನೇ |
ಎನ್ನಯ ಕಷ್ಟವ ಬಿಡಿಸುವನೊ || ೨ ||
ದೇವನ ಕಾಣದ |
ನೋವೆನಗಾಗಿಹು |
ದೀವಿಧದಳಲನು ಕಳೆಯುವೆಯಾ ? ||
ಸಾವಿಗೆ ಹೆದರದೆ |
ಜೀವಿಯು ಸುಖಿಸಲು |
ದೇವನೆ ಗತಿಯಲ್ಲವೆ ವೈದ್ಯ ? || ೩ ||

ಇದನ್ನು ಕೇಳಿಕೊಂಡು ವೈದ್ಯನು ಬಂದ ದಾರಿಗೆ ಸುಂಕವಿಲ್ಲದೆ ಹೋಗಬೇಕಾಯಿತು.

## ವಿವಾಹ ಮತ್ತು ವ್ಯವಹಾರ

ಹೀಗಿರುವಾಗ ಗುರುದಾಸಪುರದ ಜಿಲ್ಲೆಗೆ ಸೇರಿದ ಬಾಟಾಲಾ ದಲ್ಲಿರುವ ಮುಲಾಯೆಂಬವನ ಮಗಳು ಸುಲಾಖಾನಿಯೆಂಬಾಕೆಯೊಡನೆ ನಾನಕನಿಗೆ ವಿವಾಹವಾಯಿತು. ಕೆಲವು ದಿವಸಗಳಲ್ಲಿಯೇ ಮಕ್ಕಳೂ ಆದವು. ಆದರೂ ನಾನಕನ ದಾರಿ ಬೇರೆ ಬದಲಾಗಲಿಲ್ಲ. ಅವನ ಹೆಚ್ಚು ಕಾಲವು ಏಕಾಂತದಲ್ಲಿಯೇ ಕಳೆದುಹೋಗುತ್ತಿತ್ತು. ಇವನ ತಂಗಿಯ ಗಂಡನಾದ ಜಯರಾಮನೆಂಬೊಬ್ಬನು ಆಗಾಗ ಬಂದು ನಾನಕನೊಡನೆ ಸೇರಿಕೊಳ್ಳುತ್ತಿದ್ದನು. ಅವರಿಬ್ಬರಿಗೂ ಬಹುಮಟ್ಟಿಗೆ ಕೂಡುತ್ತಿತ್ತು. ಜಯರಾಮನಿಗೆ ಸುಲ್ತಾನಪುರವೆಂಬ ಊರಲ್ಲಿ

ಮಹಮ್ಮದೀಯಾಧಿಕಾರಿಯ ಕೈಕೆಳಗೆ ಒಂದುದ್ಯೋಗವಿತ್ತು. ಇಲ್ಲಿ ಮನೆಯಲ್ಲಿ ನಾನಕನ ನಡುವಳಿಕೆಯು ಕಾಳುವಿಗೆ ಒಗ್ಗದೆ ಇರುವದನ್ನು ನೋಡಿ ಜಯರಾಮನು ನಾನಕನನ್ನು ತಮ್ಮೂರಿಗೆ ಕರೆದನು. ಇದು ಕಾಳುವಿಗೂ ಸಮ್ಮತವಾಯಿತು. ಏಕೆಂದರೆ ಜಯರಾಮನು ನಾನಕನನ್ನು ಏನಾದರೊಂದುದ್ಯೋಗಕ್ಕೆ ಅಂಟಿಸಬಹುದೆಂದು ಅವನಿಗೆ ತಿಳಿದಿತ್ತು. ನಾನಕನು ಜಯರಾಮನನ್ನು ಹಿಂಬಾಲಿಸುತ್ತ ಸುಲ್ತಾನಪುರಕ್ಕೆ ಹೋದನು. ಕಾಳು ನಿರೀಕ್ಷಣೆ ಮಾಡಿದಂತೆ ಜಯರಾಮನು ನಾನಕನಿಗೆ ದರ್ಬಾರಿನ ಉಗ್ರಾಣದ ಅಧಿಕಾರವನ್ನು ಕೊಡಿಸಿದನು. ನಾನಕನು ಉಗ್ರಾಣದಿಂದ ತನ್ನ ಜೀವನಕ್ಕೆ ಬೇಕಾದಷ್ಟು ತೆಗೆದುಕೊಳ್ಳುವದಕ್ಕೆ ಅವಕಾಶವಿತ್ತು. ಆದರೆ ಅವನು ಅತ್ಯಗತ್ಯವಾದಷ್ಟು ಮಾತ್ರ ತಾನು ಉಪಯೋಗಿಸಿಕೊಂಡು ಉಳಿದ ತನ್ನ ಭಾಗವನ್ನು ಬಡಬಗ್ಗರ ಮಡಲಿಗೆ ಹಾಕುತ್ತಿದ್ದನು. ಉಗ್ರಾಣದ ಅಧಿಕಾರವೊಂದು ಕೊರಳಿಗೆ ಬಿದ್ದರೂ ಅವನ ಏಕಾಂತವಾಸವೂ ಭಜನೆಯೂ ಬಿಡವಾಗಲಿಲ್ಲ.

## ವೈರಾಗ್ಯವೃತ್ತಿ

ಅವನ ಏಕಾಂತವಾಸವೂ ಭಜನೆಯೂ ಬೆಳೆಯುತ್ತ ಬಂದ ಹಾಗೆಲ್ಲ ಅವನ ಮನಸ್ಸಿನಲ್ಲಿ ವೈರಾಗ್ಯವೃತ್ತಿಯು ಉಬ್ಬಿದ್ದು ಕೊನೆಗೆ ಅವನು ಆ ಉಗ್ರಾಣದ ಅಧಿಕಾರಕ್ಕೆ ಶರಣು ಹೊಡೆದು ತನ್ನಲ್ಲಿದ್ದದ್ದನ್ನೆಲ್ಲ ಬಡಬಗ್ಗರಿಗೆ ದಾನಮಾಡಿ ತಾನು ಫಕೀರನಾಗಿ ನಿಂತನು. ಈ ಸಮಯದಲ್ಲಿ ಮರ್ದನನೆಂಬವನೊಬ್ಬನು ಇವನ ಶಿಷ್ಯನಾಗಿ ಬಂದು ಸೇರಿದನು. ಮರ್ದನನು ಸಾರಂಗಿಯನ್ನು ನುಡಿಸುತ್ತ ಬಹು ಚೆನ್ನಾಗಿ ಹಾಡುವವನಾಗಿದ್ದನು. ಅವನೊಡನೆ ಭಜನೆಯಲ್ಲಿ ತನ್ಮಯನಾಗುತ್ತಿದ್ದ ನಾನಕನು ತನ್ನ ಮನಸ್ಸಿನಲ್ಲಿ ಸ್ಫೂರ್ತಿಯಾಗಿರುವ ತತ್ವವನ್ನು ನಾಲ್ಕು ಜನರಿಗೆ ತಿಳಿಸಬೇಕೆಂದು ಮರ್ದನನೊಡನೆ ಸುಲ್ತಾನಪುರವನ್ನು ಬಿಟ್ಟು ಉತ್ತರ ಹಿಂದುಸ್ಥಾನದಲ್ಲೆಲ್ಲ ಸಂಚಾರ ಮಾಡಿದ್ದಲ್ಲದೆ ಪುರಿ ಮಾರ್ಗದಿಂದ ಸಿಲೋನದವರೆಗೆ ಹೋಗಿದ್ದನು. ಹೀಗೆ ಹಿಂದುಸ್ಥಾನದಲ್ಲಿಯೇ ಅಲ್ಲದೆ ನಾನಕನು ಮಕ್ಕಾ ಮೊದಲಾದ ಪಶ್ಚಿಮ ದೇಶಗಳಿಗೂ ಹೋಗಿ ಹನ್ನೆರಡು ವರ್ಷ ಸಂಚಾರದಲ್ಲಿ ಕಾಲವನ್ನು ಕಳೆದನು.

## ಸೈಯ್ಯದಪುರಕ್ಕೆ ಹೋಗಿದ್ದಾಗ ನಡೆದ ವಿಶೇಷ

ನಾನಕನು ಮೊದಲು ಗುಜರಣವಾಲಾ ಜಿಲ್ಲೆಯ ಸೈಯ್ಯದ ಪುರಕ್ಕೆ ಹೋದನು ಆಗ ಅಲ್ಲಿ ಬಾಬರನ ಮುತ್ತಿಗೆಯು ನಡೆದಿದ್ದು ಮೊಗಲರ ದಂಡಿನವರು ಇವರಿಬ್ಬರನ್ನೂ ಸೆರೆಹಿಡಿದು ನಾನಕನನ್ನು ಹೊರುವ ಕೆಲಸಕ್ಕೆ, ಮರ್ದನನನ್ನು ಕಸಗುಡಿಸುವ ಕೆಲಸಕ್ಕೆ—ಹೀಗೆ ಉಪಯೋಗ ಮಾಡಿಕೊಂಡರು. ಈ ಸಮಯದಲ್ಲಿ ದಂಡಾಳುಗಳಿಂದ ತಮಗಾದ ಹಿಂಸೆಯೇನೂ ನಾನಕನ ಮನಸ್ಸನ್ನು ನೋಯಿಸಲಿಲ್ಲ. ಒಳ್ಳೇ ಮನೆತನದ ಹೆಂಗಸರನ್ನು ಹಿಡಿದು ಮೊಗಲರು ಪರಿಪರಿಯಿಂದ ಅವರಿಂದ ದುಡಿಸಿಕೊಂಡದ್ದು ಅವನಿಗೆ ಅತ್ಯಂತ ವ್ಯಥೆಯನ್ನುಂಟು ಮಾಡಿತು. ಆಗ ಅವನು ಕರುಣಾರಸಪೂರ್ಣವಾದ ಕವಿತೆಯನ್ನು ರಚಿಸಿ ಹಾಡಿರುವನು. ಇದರಿಂದ ಅವನಿಗೆ ಪರರ ಸುಖದುಃಖಕ್ಕಿದ್ದ ಸಹಾನುಭೂತಿಯು ವ್ಯಕ್ತವಾಗುತ್ತದೆ.

## ಹರಿದ್ವಾರದ ವಿಶೇಷ

ನಾನಕನು ಹರಿದ್ವಾರಕ್ಕೆ ಹೋಗಿ ನೋಡಿದಾಗ ಅಲ್ಲಿ ಗಂಗಾ ನದಿಯ ತೀರದಲ್ಲಿ ಬ್ರಾಹ್ಮಣರೆಲ್ಲರೂ ಪೂರ್ವಕ್ಕೆ ಮುಖವನ್ನು ಮಾಡಿ ಕೊಂಡು ಒಂದೊಂದು ಸೌಟು ನೀರಿನಿಂದ ತರ್ಪಣವನ್ನು ಕೊಡು ತ್ತಿದ್ದರು. ಇದರ ರಹಸ್ಯವೇನೆಂದು ನಾನಕನು ಅವರನ್ನು ಕೇಳಿದನು. ಲಕ್ಷಾಂತರ ಮೈಲುಗಳ ಮೇಲೆ ಪರಲೋಕದಲ್ಲಿರುವ ತಮ್ಮ ಪೂರ್ವಿಕ ರಿಗೆ ಆಹಾರವೆಂದು ಆ ಬ್ರಾಹ್ಮಣರು ಹೇಳಿದರು. ಆಗ ನಾನಕನು ಪಶ್ಚಿಮಕ್ಕೆ ಇದಿರಾಗಿ ನಿಂತು ಒಂದು ಬೊಗಸೆ ನೀರು ಚೆಲ್ಲಿದನು. ಇದರ ರಹಸ್ಯವೇನೆಂದು ಬ್ರಾಹ್ಮಣರು ಕೇಳಲು ನೂರಾರು ಮೈಲು ಗಳಾಚೆಗೆ ಇರುವ ತನ್ನ ಹೊಲವು ತಾನು ಬರುವಾಗ ನೀರಿಲ್ಲದೆ ಒಣಗಿ ಬಾಯಿಬಿಡುತ್ತಿತ್ತಾದ್ದರಿಂದ ಆ ಹೊಲವು ತಂಪಾಗಿ ಬೆಳೆಯನ್ನು ಕೊಡಲು ನೀರನ್ನು ಚೆಲ್ಲಿದೆನೆಂದು ನಾನಕನು ಆ ಬ್ರಾಹ್ಮಣರಿಗೆ ಉತ್ತ ರವನ್ನು ಕೊಟ್ಟನು. ಇದನ್ನು ಕೇಳಿ ಅವರೆಲ್ಲರೂ ಪಕಪಕನೆ ನಕ್ಕರು. ನನ್ನ ಬೊಗಸೆಯ ನೀರು ನೂರಾರು ಮೈಲುಗಳಲ್ಲಿರುವ ಹೊಲಕ್ಕೆ

ಮುಟ್ಟದೆ ಹೋದ ಮೇಲೆ ನಿಮ್ಮ ಸೌಟಿನ ನೀರು ಲಕ್ಷಾಂತರ ಮೈಲು ಗಳ ಮೇಲಕ್ಕೆ ಮುಟ್ಟುವದು ಅಸಂಭವವಾದ್ದರಿಂದ ನಿಮ್ಮ ತರ್ಪಣವೂ ಹಾಗೆಯೇ ನಗೆಗೆ ಈಡಾದ್ದೆಂದು ಹೇಳಿ ನಾನಕನು ಇಂಥ ಕರ್ಮಗಳೆಲ್ಲ ವ್ಯರ್ಥವೆಂದು ಅವರ ಮುಂದೆ ಸಾಧಿಸಿದನು.

## ಸಿಕ್ ಧರ್ಮಪಂಥ

ನಾನಕನ ಮತವೇನಂದರೆ ಲೋಕಕ್ಕೆಲ್ಲ ಒಬ್ಬನೇ ದೇವರು. ಅವನು ಕಣ್ಣಿಗೆ ಕಾಣುವದಿಲ್ಲ. ಅವನಿಗೆ ಅಲ್ಲ- ಹರಿ- ರಾಮ—ಮೊದ ಲಾದ ಯಾವ ಹೆಸರೂ ಇಲ್ಲ, ಆ ದೇವರ ದೃಷ್ಟಿಯಿಂದ ಲೋಕದಲ್ಲಿ ಒಬ್ಬನು ಹೆಚ್ಚಿನವನೂ ಅಲ್ಲ, ಇನ್ನೊಬ್ಬನು ಕಡಿಮೆಯವನೂ ಅಲ್ಲ; ಎಲ್ಲರೂ ಒಂದೆ. ಯಾತ್ರೆ, ತೀರ್ಥ, ಕ್ಷೇತ್ರ, ದೇವಾಲಯ—ಇವೆಲ್ಲವೂ ವ್ಯರ್ಥ. ಇಷ್ಟೇ ಅಲ್ಲ; ದೇವರ ಅನುಗ್ರಹಕ್ಕೆ ಪ್ರತಿಬಂಧಕ. ಏಕೆಂದರೆ ದೇವರು ಸರ್ವವ್ಯಾಪಿಯಾಗಿ ಎಲ್ಲೆಲ್ಲಿಯೂ ಇರುವಾಗ ಅವನನ್ನು ಹುಡುಕಿಕೊಂಡು ಯಾತ್ರೆಗೆ, ತೀರ್ಥಕ್ಕೆ, ಕ್ಷೇತ್ರಕ್ಕೆ ಅಥವಾ ದೇವಾಲಯಕ್ಕೆ ಹೋಗುವದರಿಂದ ದೇವರು ಹಿಂದಿನ ಸ್ಥಲದಲ್ಲಿ ಇಲ್ಲವೆಂದ ಹಾಗಾಗುವದು. ಇದ್ದ ದೇವರನ್ನು ಇಲ್ಲವೆನ್ನುವದು ಪಾಪ. ಅದರಂತೆ ಸತ್ತವರ ವಿಗ್ರಹಗಳನ್ನು ಪೂಜೆಮಾಡುವದೂ ಅವನ ಮನಸ್ಸಿಗೆ ಬರುತ್ತಿರಲಿಲ್ಲ. ಆ ದೇವರನ್ನು ಒಲಿಸುವದಕ್ಕೆ ಹೇಗೆ ನಡೆಯಬೇಕೆಂಬ ಆಚಾರಕ್ಕೆ ಬೇರೆ ಶಾಸ್ತ್ರವನ್ನು ನೋಡಬೇಕಾ ಗಿಲ್ಲವೆಂದೂ ಸರ್ವಸಾಮಾನ್ಯವಾದ ನೀತಿಗಳನ್ನು ಸಮರ್ಪಕವಾಗಿ ಮಾಡಿದರಾಯಿತೆಂದೂ ಅವನ ಅಭಿಪ್ರಾಯ. ಇಂಥ ನೀತಿಗಳನ್ನು ಉಪದೇಶ ಮಾಡುವ ಗುರುಗಳ ವಿಷಯದಲ್ಲಿ ಮಾತ್ರ ಒಳ್ಳೇ ಪೂಜ್ಯ ಬುದ್ಧಿಯಿರಬೇಕೆಂದು ಅವನ ನಿಯಮ.

## ಗುಣಾನುವಾದ

ನಾನಕನಿಗೆ ಹಿಂದಿ ಮತ್ತು ಪರ್ಶಿಯನ್ ಈ ಎರಡು ಭಾಷೆ ಯಲ್ಲಿಯೂ ಜ್ಞಾನವಿತ್ತು. ನಾನಕನು ಸಾಲೆಗಿಂತಲೂ ಹೆಚ್ಚಾಗಿ

ಭಕ್ತಮಂಡಲಿಯ ಸಹವಾಸದಿಂದ ಕಲಿತವನಾಗಿದ್ದನು. ಅವನು ತನ್ನ ಉಪದೇಶದಿಂದ ಅನೇಕರನ್ನು ಶಿಷ್ಯರನ್ನಾಗಿ ಮಾಡಿಕೊಂಡನು. ಕಾಶಿಯಲ್ಲಿ ಛಾತುರದಾಸನೆಂಬ ಒಬ್ಬ ಬ್ರಾಹ್ಮಣನನ್ನೇ ಇವನು ತನ್ನ ಮತಕ್ಕೆ ತಿರುಗಿಸಿಕೊಂಡನು. ಇವನಿಗೆ ಅನೇಕರು ಅನೇಕ ವಸ್ತುಗಳನ್ನು ತಂದುಕೊಡುತ್ತಿದ್ದರೂ ಕೂಡ ಇವನು ಎಲ್ಲವನ್ನೂ ತನ್ನ ಉಪಯೋಗಕ್ಕೆ ಮಾಡಿಕೊಳ್ಳದೆ ಬಹುಭಾಗವನ್ನು ದೀನರಿಗೆ ದಾನ ಮಾಡಿಬಿಡುತ್ತಿದ್ದನು. ಇವನ ಜೀವಿತಕಾಲದಲ್ಲಿಯೇ ಇವನನ್ನು ನಾಲ್ಕು ದಿಕ್ಕುಗಳಲ್ಲಿಯೂ ಹೊಗಳಿದರೂ ಇವನು ಆದರ ಗರ್ವದಿಂದ ಉಬ್ಬಲಿಲ್ಲ. ಇವನ ಜನ್ಮಸ್ಥಾನವು ಆಗ ಹಿಂದುಗಳ ರಾಜ್ಯಕ್ಕೂ ಮಹಮ್ಮದೀಯ ರಾಜ್ಯಕ್ಕೂ ನಡುವೆಯಿದ್ದದರಿಂದ ಇವನ ಮನೋ ವೃತ್ತಿಯು ಮಹಮ್ಮದೀಯ ಮತಕ್ಕೂ ಹಿಂದೂ ಮತಕ್ಕೂ ಮಧ್ಯಸ್ಥ ವಾದ ಮತವನ್ನು ಕಾಣುವದಕ್ಕವಕಾಶವಾಯಿತು. ತನ್ನ ಸರ್ವ ಸಾಹಸದಿಂದಲೂ ಆ ತನ್ನ ಉದ್ದೇಶವನ್ನು ಸಾಧಿಸಿ ಭರತಪುರದಲ್ಲಿರು ವಾಗ ಮರ್ದನನ ಆಯುಷ್ಯವು ಮುಂದಾಗಿ ಮುಗಿಯಿತು. ಆಮೇಲೆ ಮರ್ದನನ ಮಗನೇ ಶಿಷ್ಯತ್ವಕ್ಕೆ ಬಂದನು. ಆದರೆ ನಾನಕನಿಗೆ ಮುಂದೆ ಬಹುದಿವಸ ಬದುಕಿರುವ ಯೋಗವಿರಲಿಲ್ಲ. ತನ್ನ ಧರ್ಮಪಂಥವನ್ನು ಸಾಗಿಸುವದಕ್ಕೆ ತನ್ನ ಮಗನು ಅಯೋಗ್ಯನಾಗಿದ್ದದ್ದನ್ನು ಕಂಡು ಆ ಪೂಜ್ಯ ಪದವಿಯನ್ನು ಅಂಗದನೆಂಬ ಮತ್ತೊಬ್ಬನಿಗೆ ಕೊಟ್ಟು ಕ್ರಿ. ಶ. ೧೫೩೮ ರಲ್ಲಿ ದೇಹತ್ಯಾಗ ಮಾಡಿದನು. ನಾನಕನ ಉಪದೇಶದ ಮಾತುಗಳೆಲ್ಲ ಈಗ ಸಿಕ್ ಜನರ ಧರ್ಮಗ್ರಂಥವಾಗಿದೆ. ಅವನ ಹಾಡುಗಳು ಈಗಲೂ ಎಲ್ಲರ ಬಾಯಲ್ಲಿಯೂ ನಲಿದಾಡುತ್ತಿವೆ. ನಾನಕನ ಉಪದೇಶಪ್ರಭಾವದಿಂದ ಸಿಕ್ ಜನರು ಹೆಚ್ಚಿನ ಶಿಕ್ಷಣವಿಲ್ಲದೆ ಸ್ವಾತಂತ್ರ್ಯಪ್ರಿಯರಾಗಿಯೂ ಶೂರರಾಗಿಯೂ ನೀತಿವಂತರಾಗಿಯೂ ಸಣ್ಣದೊಂದು ಜನಾಂಗದವರಾಗಿ ಒಂದೆರಡು ಶತಮಾನಗಳಲ್ಲಿಯೇ ತಮ್ಮ ಪ್ರಭಾವದಿಂದ ಬರೀ ಹಿಂದುಸ್ತಾನವನ್ನೇ ಏಕೆ? ಮೊನ್ನೆ ನಡೆದ ಮಹಾಯುದ್ಧದಲ್ಲಿ ಹಿಂದುಸ್ಥಾನದ ಶುಭೇಚ್ಛೆಯಿಂದ ಬ್ರಿಟಿಷರ ಪಕ್ಷದಲ್ಲಿ ತೋರಿಸಿದ ಸಾಹಸಗಳಿಂದ ಅಖಂಡ ಭೂಮಂಡಲವನ್ನೇರಿ ಬೆಳಗುತ್ತಿದ್ದಾರೆ.

# ಪುರಂದರದಾಸರು

## ಹುಟ್ಟು

ಸುಮಾರು ಹದಿನಾರನೇ ಶತಮಾನದ ಆರಂಭ ಕಾಲದಲ್ಲಿ ನಮ್ಮ ಕರ್ಣಾಟಕ ಭೂಮಾತೆಗೊಂದು ಸುಯೋಗವು ಫಲವನ್ನು ಕೊಡುವುದಕ್ಕೆ ಬಂತೆಂದು ಹೇಳಬಹುದು. ಆಗ ನಮ್ಮ ಪುರಂದರ ದಾಸರ ಜನ್ಮವಾಯಿತು. ಇವರು ಪುಣೆಜಿಲ್ಲೆಗೆ ಸೇರಿರುವ ಪುರಂದರಗಡವೆಂಬ ಊರಿನಲ್ಲಿ ಮಾಧ್ವರಲ್ಲಿ ಪ್ರಸಿದ್ಧ ಶ್ರೀಮಂತರಾದ ನಾಯಕರ ಮನೆತನದಲ್ಲಿ ಕೃಷ್ಣಪ್ಪನಾಯಕನೆಂಬ ಹೆಸರಿನಿಂದ ಹುಟ್ಟಿ ಕಾಲೋಚಿತವಾದ ವಿದ್ಯೆಗಳನ್ನು ಕಲಿತು ತಮ್ಮ ಹಿರಿಯರ ಕಾಲದಿಂದ ಬಂದಿದ್ದ ಚಿನ್ನಬೆಳ್ಳಿಯ ವ್ಯಾಪಾರದಲ್ಲಿ ತಲೆಯನ್ನು ಹಾಕಿಕೊಂಡು ಕಾಲವನ್ನು ಕಳೆಯುತ್ತಿದ್ದರು.

## ವಿರಕ್ತಿಯುಂಟಾದದ್ದು

ಕೃಷ್ಣಪ್ಪನಾಯಕನು ಬಹು ಜೀನನಾಗಿದ್ದನು. ಬೇಕಾದಷ್ಟು ಹಣವಿದ್ದರೂ ಅವನು ದಾನಧರ್ಮವನ್ನು ಮಾಡುವ ಮನಸ್ಸುಳ್ಳವ ನಾಗಿರಲಿಲ್ಲ. ಒಂದು ದಿನ ಒಬ್ಬ ಬ್ರಾಹ್ಮಣನು ಕೃಷ್ಣಪ್ಪನಾಯಕನ ಬಳಿಗೆ ಬಂದು ತನ್ನ ಮಗನ ಮದುವೆಗೇನಾದರೂ ಸಹಾಯ ಮಾಡ ಬೇಕೆಂದು ಯಾಚನೆಮಾಡಿದನು. ಲುಬ್ಧಶಿಖಾಮಣಿಯಾದ ಕೃಷ್ಣಪ್ಪ ನಾಯಕನು ಕೈಬಿಚ್ಚಲಾರದೆ ಅನೇಕ ವೇಳೆ ಅವನನ್ನು ಓಡಾಡಿಸಿ ಕೊನೆಗೆ ಅವನಿಗೆ ಒಂದು ಸಲ್ಲದ ಕಾಸನ್ನು ಕೊಡಹೋದನು. ಆಗ ಆ ಬ್ರಾಹ್ಮಣನು ಅದು ತನಗೆ ಬೇಡವೆಂದು ಅಲ್ಲಿಂದ ಹೊರಟು ಹಿತ್ತಲ ಬಾಗಿಲಿನಿಂದ ಅವನ ಹೆಂಡತಿಯ ಬಳಿಗೆ ಹೋಗಿ ಆಕೆಯ ಮುಂದೆ ತನ್ನ ದೈನ್ಯವನ್ನು ತೋರಿಸಿದನು. ಆಕೆ ಒಳ್ಳೇ ಉದಾರಗುಣವುಳ್ಳವ ಳಾಗಿದ್ದಳು. ತನ್ನ ಗಂಡನು ದಾನಮಾಡದಿದ್ದರೂ ತಾನಾದರೂ

ಮಾಡಬೇಕೆಂಬ ಮನಸ್ಸು ಆಕೆಗೆ ಬಂತು. ಆ ಭರದಲ್ಲಿ ಆಕೆಯು ತನ್ನ ಬೆಲೆಯುಳ್ಳ ವಜ್ರದ ಮೂಗುತಿಯನ್ನು ಆ ಬ್ರಾಹ್ಮಣನ ಕಯ್ಯಲ್ಲಿಟ್ಟು ಕೃಷ್ಣಾರ್ಪಣವೆಂದಳು. ಆ ಬ್ರಾಹ್ಮಣನು ನಾಡಾಡಿಯ ತಿರುಕನಾಗಿರಲಿಲ್ಲ. ಹಾಗಿದ್ದರೆ ಅದನ್ನು ತೆಗೆದುಕೊಂಡು ತನ್ನ ದಾರಿಯನ್ನು ತಾನು ಹಿಡಿಯುತ್ತಿದ್ದನು. ಅವನು ಹಾಗೆ ಮಾಡದೆ ಮತ್ತೆ ಕೃಷ್ಣಪ್ಪನಾಯಕನ ಬಳಿಗೆ ಹೋಗಿ "ಇದನ್ನು ನೀನು ಕೊಂಡು ಕೊಂಡಾದರೂ ನನಗೆ ಇದರ ಬೆಲೆಯಾಗಿ ಹಣವನ್ನು ಕೊಡು" ಎಂದು ಕೇಳಿದನು. ಆ ಮೂಗುತಿಯನ್ನು ನೋಡುತ್ತಲೇ ಕೃಷ್ಣಪ್ಪನಾಯಕನಿಗೆ ಕಣ್ಣು ತಿರುಗುವದಕ್ಕಾರಂಭವಾಯಿತು. ಏಕೆಂದರೆ ನಾಯಕನಿಗೆ ಆ ಮೂಗುತಿಯ ಗುರ್ತು ಸಿಕ್ಕಿತು. ಆಗ ಅವನು ಆ ಬ್ರಾಹ್ಮಣನನ್ನು ಹಣಕ್ಕಾಗಿ ಸಾಯಂಕಾಲಕ್ಕೆ ಬರಹೇಳಿ ಕಳುಹಿಸಿ ಮೂಗುತಿಯನ್ನು ಪೆಟ್ಟಿಗೆಯಲ್ಲಿಟ್ಟು ಒಡನೆ ಒಳ್ಳೇ ರಭಸದಿಂದ ಮನೆಗೆ ಬಂದು ಹೆಂಡತಿಯನ್ನು ಕರೆದು ಮೂಗುತಿಯನ್ನು ತರಹೇಳಿದನು. ಈಗ ಸತಿಗೆ ಏನು ಹೇಳುವದಕ್ಕೂ ಆಕೆಗೆ ತೋಚಲಿಲ್ಲ. ತರುತ್ತೇನೆಂದು ಹೇಳಿ ಆಕೆಯು ಒಳಗೆ ದುಃಖದಿಂದ ಕಣ್ಣೀರು ಸುರಿಸುತ್ತ ದೇವರ ಮೇಲೆ ಭಾರವನ್ನು ಹಾಕಿ ಕೂತಳು. ಹೊರಗೆ ನಾಯಕನ ಗರ್ಜನೆ ಬಲವಾಯಿತು. ನಡೆದ ಸಂಗತಿಯನ್ನು ಹೇಳುವದಕ್ಕೆ ಆಕೆಗೆ ಮನಸ್ಸಿನಲ್ಲಿ ಏನೋ ಅಳುಕು ಕಾಣಿಸಿಕೊಂಡಿತು. ಪತಿಯ ಮನಸ್ಸಿಗೆ ಸಂತಾಪವನ್ನುಂಟುಮಾಡಿ ತನ್ನ ಜೀವಿತವನ್ನಿಟ್ಟುಕೊಳ್ಳುವದಕ್ಕಿಂತಲೂ ಸಾಯುವದು ಸರ್ವೋತ್ತಮವೆಂದು ಆ ಸಾಧ್ವಿಯು ಒಂದು ಬಟ್ಟಲಲ್ಲಿ ವಿಷವನ್ನು ಕುಡಿಯಹೋದಳು. ಈ ಸಮಯದಲ್ಲಿ ಅತ್ಯಾಶ್ಚರ್ಯಕರವಾಗಿ ಆಕೆಗೆ ಆ ಬಟ್ಟಲಲ್ಲಿಯೇ ಮೂಗುತಿಯು ಕಂಡಿತು. ಇದೇನೋ ದೈವವಿಲಾಸವೆಂದು ಬಗೆದು ಆಕೆಯು ಅದನ್ನು ತೆಗೆದುಕೊಂಡು ಹೋಗಿ ಗಂಡನ ಮುಂದಿಟ್ಟಳು. ನಾಯಕನಿಗೆ ಆಶ್ಚರ್ಯದ ಮೇಲಾಶ್ಚರ್ಯವಾಯಿತು. ಒಡನೆ ಅವನು ಆ ಬ್ರಾಹ್ಮಣನಿಂದ ತನ್ನ ಕೈಗೆ ಬಂದಿದ್ದ ಮೂಗುತಿಯನ್ನು ನೋಡಹೋದನು. ಅಲ್ಲೇನಿದೆ? ಬರೀ ಬಯಲು. ಇದನ್ನು ನೋಡುತ್ತಲೇ ನಾಯಕನಿಗೆ ಎದೆಯೊಡೆಯಿತು ಇದರಿಂದ ಗಾಬರಿಗೊಂಡ ಪತಿಯನ್ನು ನೋಡಿ ಆ ಪತಿವ್ರತಾ ಶಿರೋಮಣಿಯು

ತನ್ನಲ್ಲಿ ನಡೆದ ವೃತ್ತಾಂತವನ್ನೆಲ್ಲಾ ಅವನಿಗೆ ಹೇಳಿದಳು. ತತ್‌ಕ್ಷಣದಲ್ಲಿಯೇ ನಾಯಕನ ಮನಸ್ಸಿನ ಪರಿಸ್ಥಿತಿಯೆಲ್ಲಾ ತಲೆಕೆಳಗಾಗಿ ಅವನ ಹೃದಯವೆಲ್ಲಾ ಉತ್ಕಟವಾದ ವೈರಾಗ್ಯವೃತ್ತಿಗಳಿಂದ ತುಂಬಿತುಳುಕುವಂತಾಯಿತು. ಇಂಥ ಭಗವದ್ವಿಲಾಸವನ್ನು ಮನಗಂಡ ಮೇಲೆ ಭಗವದ್ವಿಚಾರದಲ್ಲಿಯೇ ಈ ಜನ್ಮವನ್ನು ನೀಗಬೇಕೆಂದು ಕೃಷ್ಣಪ್ಪ ನಾಯಕನು ಆ ದಿನವೇ ತನ್ನ ಸರ್ವಸ್ವವನ್ನೂ ಬಡಬಗ್ಗರಿಗೆ ಸೂರೆ ಮಾಡಿ ತನ್ನ ಹೆಂಡತಿಯೊಡನೆ ಮನೆಯಿಂದ ಹೊರಬಿದ್ದನು. ಈ ಅಭಿಪ್ರಾಯವನ್ನು ಮುಂದೆ ಅವರ ಪಟ್ಟಶಿಷ್ಯರಾದ ವಿಜಯವಿಠಲ ದಾಸರು ಒಂದು ಹಾಡಿನಲ್ಲಿ ಹೇಳಿರುತ್ತಾರೆ.

### ರಾಗ— ಹಿಂದುಸ್ಥಾನಿಕಾಪಿ.

ಗುರುಪುರಂದರದಾಸರೆ, ನಿಮ್ಮ ಚರಣಕಮಲವ ನಂಬಿದೆ ‖ ಪ ‖
ಗರುವರಹಿತನ ಮಾಡಿಯೆನ್ನನು । ಪೊರೆವ ಭಾರವು ನಿಮ್ಮದೆ ‖ಅ. ಪ.‖

* * *

ಪುರಂದರಾಲಯ ಘಟ್ಟದೊಳು ನೀ । ನಿರುತ ಧನವನು ಘಳಿಸಲು ‖
ಪರಮಪುರುಷನೆ ವಿಪ್ರನಂದದಿ । ಕರವನೀಡಿ ಬೇಡಿದ ‖ ೩ ‖
ಪರಮನಿರ್ಗುಣ ಮನವನರಿತು । ಸರ್ವಸೂರೆಯಗೊಳಿಸಿದ ।
ಅರಿತು ಮನದಲಿ ಜರಿದು ಭವಗಳ । ತರುಣಿ ಸಹ ಹೊರಗ್ಹೊರಟನು ‖೪‖

ಪುರಂದರದಾಸರು ಎಷ್ಟು ಉತ್ಸಾಹದಿಂದ ಮನೆಯನ್ನು ಬಿಟ್ಟರೆಂಬದಕ್ಕೆ ಅವರ ಈ ಮೊದಲನೇ ಕವಿತೆಯೇ ಸಾಕ್ಷಿಯಾಗಿದೆ.

### ರಾಗ

ಆದದ್ದೆಲ್ಲಾ ಒಳಿತೇ ಆಯಿತು ‖ ಪ ‖ ನಮ್ಮ ।
ಶ್ರೀಧರನ ಸೇವೆಗೆ । ಸಾಧನಸಂಪತ್ತಾಯಿತು ‖ ಅ. ಪ. ‖
ದಂಡಿಗೆ ಬೆತ್ತ ಹಿಡಿಯುವದಕ್ಕೆ । ಮಂಡೇಮಾಚಿ ನಾಚುತಲಿದ್ದೆ ।
ಹೆಂಡತಿ ಸಂತತಿ ಸಾವಿರವಾಗಲು । ದಂಡಿಗೆ ಬೆತ್ತ ಹಿಡಿಸಿದಳಯ್ಯಾ ‖೧‖
ಗೋಪಾಲಬುಟ್ಟಿ ಹಿಡಿಯುವದಕ್ಕೆ । ಭೂಪತಿಯಂತೆ ಗರ್ವಿಸುತಿದ್ದೆ ‖
ಆಪತ್ನೀಕುಲ ಸಾವಿರವಾಗಲು । ಗೋಪಾಲಬುಟ್ಟಿ ಹಿಡಿಸಿದಳಯ್ಯಾ ‖ ೨ ‖
ತುಲಸೀಮಾಲೆಯ ಹಾಕುವದಕ್ಕೆ । ಅರಸನಾಗಿ ನಾಚುತ್ತಿದ್ದೆ ‖
ಸರಸಿಜಾಕ್ಷಪುರಂದರವಿಠಲನ । ದಾಸಗೆ ಮಾಲೆ ಹಾಕಿಸಿದಳು ‖ ೩ ‖

## ಕೃಷ್ಣಪ್ಪನಾಯಕನು ಪುರಂದರದಾಸರಾದದ್ದು

ಕೃಷ್ಣಪ್ಪನ ಮನಸ್ಸು ಮೊದಲು ಹಣದ ಮೇಲೆ ಎಷ್ಟರಮಟ್ಟಿಗೆ ಏಕಾಗ್ರವಾಗಿತ್ತೋ ಈಗ ದೇವರ ಮೇಲೆ ಅಷ್ಟು ಏಕಾಗ್ರವಾಯಿತು. ತಾನು ಭಗವದನುಗ್ರಹಕ್ಕೆ ಪಾತ್ರನಾಗಬೇಕೆಂಬ ಉತ್ಕಟವಾದ ಇಚ್ಛೆ ಆವನಿಗುದಿಸಿತು. ಆಗ ಆವನು ಆ ಕಾಲದಲ್ಲಿ ದಾಸಕೂಟಕ್ಕೆ ಶಿರೋಭೂಷಣರಾಗಿದ್ದ ಶ್ರೀವ್ಯಾಸರಾಯ ಸ್ವಾಮಿಗಳ ಅನುಗ್ರಹಕ್ಕೆ ಪಾತ್ರನಾಗಿ ಪರಮಭಾಗವತೋತ್ತಮತ್ವವನ್ನು ಪಡೆದನು. ಈ ವಿಷಯವನ್ನು ವಿಜಯವಿಠ್ಠಲರು ತಮ್ಮ ಹಾಡಿನಲ್ಲಿ ಹೇಳಿರುವ ದೇನೆಂದರೆ:—

ರಾಗ

ಬೇಸರಾದೆ ಭಜಿಸೀರೊ । ಪುರಂದರರಾಯರ ॥ ಪ ॥
ಲಕ್ಷ್ಮೀಪತಿಯ ಪಾದದಲ್ಲಿ । ಲಕ್ಷ್ಯವಿಟ್ಟು ವ್ಯಾಸರಾಯರ ।
ಶಿಕ್ಷೆಯಿಂದಂಕಿತವ ಕೈಗೊಳುತ । ಪದಗಳನು ಗೈದು ।
ಲಕ್ಷಪದಸುಳಾದಿ ಪೇಳುತ್ತ । ಪ್ರತಿದಿವಸದಲ್ಲಿ ।
ಪಕ್ಷಿವಾಹನನಾಟ್ಯವಾಡುತ್ತ । ಅಪರೋಕ್ಷ ಜ್ಞಾನಿಯ ।
ಮೋಕ್ಷಸ್ಥಾನಕೆ ಕರೆದು ಒಯ್ದು ಅಧೋಕ್ಷಜನುತಾ ರಕ್ಷಿಸಿದ ॥ ೮ ॥

ಈ ಪ್ರಕಾರ ಗುರ್ವನುಗ್ರಹಕ್ಕೆ ಪಾತ್ರರಾದ ಕೃಷ್ಣಪ್ಪನಾಯಕರು ತಾಲ ತಂಬೂರಿಗಳನ್ನು ಹಿಡಿದು ಭಗವನ್ನಾಮಾಮೃತವನ್ನು ಮನೆ ಮನೆಗೆ ಹಂಚುತ್ತ ಆಸ್ತಿಕರ ಮನವನ್ನು ಕರಗಿಸುತ್ತ ದ್ವೈತಧರ್ಮವನ್ನು ಹಬ್ಬಿಸುತ್ತ ಊರುಕೇರಿಗಳನ್ನು ತಿರುಗುತ್ತ ಹೊರಟರು. ಇವರು ಪುರಂದರಗಡದ ಸ್ಥಲದವರಾದ್ದರಿಂದ ಜನರೆಲ್ಲರೂ ಇವರನ್ನು ಪುರಂದರ ದಾಸರೆಂದು ಕರೆಯುವದಕ್ಕಾರಂಭಿಸಿದರು. ಇಲ್ಲಿಂದ ಹೊರಟ ಪುರಂದರದಾಸರು ದಕ್ಷಿಣದ ಕಾಶಿಯಾಗಿದ್ದ ಪಂಢರಾಪುರಕ್ಕೆ ಬಂದು ನೆಲಸಿ ತಮ್ಮ ಧ್ಯಾನಭಜನಾದಿಗಳಿಂದ ಕಾಲವನ್ನು ಕಳೆಯುತ್ತಿದ್ದರು.

## ಪುರಂದರದಾಸರು ವಿಜಯನಗರಕ್ಕೆ ಬಂದದ್ದು

ಪುರಂದರದಾಸರು ಬಹುಕಾಲ ಪಂಢರಿಯಲ್ಲಿಯೇ ಭಕ್ತಗೋಷ್ಠಿ ಯಲ್ಲಿದ್ದರು. ಹೀಗಿರುವಾಗ ಮುಸಲ್ಮಾನರ ಧಾಂಧೂಂ ಶಬ್ದಗಳಿಂದ ಎಲ್ಲರೂ ಎದೆಯೊಡೆದು ಗಾಬರಿಗೊಳ್ಳುತ್ತಿರುವಾಗ ಪುರಂದರದಾಸರು

ವಿಜಯನಗರಕ್ಕೆ ಹೋದರು. ರಾಜಧಾನಿಯಾಗಿದ್ದ ವಿಜಯನಗರವು ಪಂಢರಪುರಕ್ಕಿಂತಲೂ ಸುರಕ್ಷಿತವಾಗಿರುವದೆಂದೂ ಮತ್ತು ಆಗ ಅಲ್ಲಿ ವಿಷ್ಣುಭಕ್ತನಾದ ಅಚ್ಯುತರಾಯನು ಅರಸಾಗಿರುವನೆಂದೂ ಯೋಚಿಸಿ ದಾಸರು ಅಲ್ಲಿಗೆ ಹೊರಟಿರಬಹುದೆಂದೂ ಪಂಢರಪುರದಲ್ಲಿ ವಿಠ್ಠಲ ಮೂರ್ತಿಯು ವಿಗ್ರಹಭೇದಕರ ಕಯ್ಯಿಂದ ಭಗ್ನವಾಗಬಾರದೆಂದು ಅದನ್ನೂ ಆಗ ವಿಜಯನಗರಕ್ಕೆ ತೆಗೆದುಕೊಂಡು ಹೋಗಿರಬಹುದೆಂದೂ ಇಷ್ಟುಹೊತ್ತಿಗೆ ಪುರಂದರದಾಸರ ಖ್ಯಾತಿಯು ಎಲ್ಲೆಲ್ಲಿಯೂ ಹರಡಿಕೊಂಡಿದ್ದರಿಂದ ಮಹಾಭಗವದ್ಭಕ್ತರು ಬಂದರೆಂದು ಅಚ್ಯುತರಾಯನು ಅವರನ್ನು ಆದರಿಸಿರಬಹುದೆಂದೂ ತೋರುತ್ತದೆ. ಹಂಪೆಯಲ್ಲಿ ಈಗಲೂ ಆ ವಿಜಯವಿಠ್ಠಲನ ದೊಡ್ಡ ದೇವಸ್ಥಾನವಿದೆ. ಆದರೆ ಅಲ್ಲಿ ವಿಗ್ರಹವಿಲ್ಲ. ಆ ವಿಗ್ರಹವನ್ನು ಈಚೆಗೆ ಏಕನಾಥಸಾಧುಗಳ ಅಜ್ಜಂದಿರಾದ ಭಾನುದಾಸರು ವಿಜಯನಗರದಿಂದ ಪಂಢರಾಪುರಕ್ಕೆ ತೆಗೆದುಕೊಂಡು ಹೋದರೆಂದು ಮಹಾರಾಷ್ಟ್ರ ದೇಶದಲ್ಲಿ ವಾರ್ತೆಯಿದೆ. ಹಂಪೆಯಲ್ಲಿ ಪುರಂದರದಾಸರಿದ್ದ ಮನೆಯೆಂದು ಈಗಲೂ ಒಂದು ದೊಡ್ಡ ಮನೆಯನ್ನು ತೋರಿಸುತ್ತಾರ. ವಿಷ್ಣುಭಕ್ತನಾದ ಅರಸನ ಆಶ್ರಯದಲ್ಲಿ ವಿಷ್ಣುಭಕ್ತರು ಒಳ್ಳೇ ವೈಭವದಿಂದಿರುವದು ಸಹಜವಾಗಿದೆ. ಪುರಂದರದಾಸರು ವಿಜಯನಗರದಲ್ಲಿದ್ದರೂ ಅವರಿಗೆ ಪಂಢರಾಪುರದ ಮೇಲೆ ಬಹಳ ಪ್ರೇಮವಿತ್ತು. ಆದ್ದರಿಂದ ಅವರು ಆಗಾಗ ಅಲ್ಲಿಗೆ ಹೋಗಿಬರುತ್ತಲೇ ಇದ್ದರು.

## ಪುರಂದರದಾಸರ ಕಂಬ

ಪಂಢರಪುರದಲ್ಲಿ ದೇವಸ್ಥಾನದ ನಡುವೆ ಪುರಂದರದಾಸರ ಕಂಬವೆಂದು ಒಂದು ಕಂಬವಿದೆ. ಅದಕ್ಕೆ ಈಗ ಬೆಳ್ಳಿಯ ತಗಡನ್ನು ಹಾಕಿದ್ದಾರೆ. ಪ್ರತಿದಿನವೂ ಅದರ ಪೂಜೆ ನಡೆಯುತ್ತಿದೆ. ಭಕ್ತಾದಿಗಳೂ ಅದಕ್ಕೆ ನಡೆದುಕೊಳುತ್ತಿದ್ದಾರೆ. ಅದರ ವಿಚಾರವು ತಿಳಿದುಕೊಳ್ಳತಕ್ಕದ್ದಾಗಿದೆ. ಒಮ್ಮೆ ಅವರು ಪಂಢರಿಗೆ ಹೋಗಿದ್ದಾಗ ಒಂದು ರಾತ್ರೆ ಅವರಿಗೆ ನೀರು ಬೇಕಾಯಿತು. ಶಿಷ್ಯನು ಗಾಢನಿದ್ರೆಯಲ್ಲಿದ್ದದರಿಂದ ಎಷ್ಟು ಕೂಗಿದರೂ ಏಳಲೇ ಇಲ್ಲ. ಆದರೆ ಕೆಲವು ಹೊತ್ತಿನ ಮೇಲೆ

ಅವನೇ ನೀರನ್ನು ತಂದು ಮುಂದೆ ಹಿಡಿದುಕೊಂಡು ನಿಂತಂತೆ ಕಂಡಿತು. ಇಷ್ಟೇಕೆ ತಡಮಾಡಿದೆಯೆಂದು ದಾಸರು ಅವನ ಕೆನ್ನೆಗೆ ಹೊಡೆದು ತಮ್ಮ ಕೆಲಸವನ್ನು ತೀರಿಸಿಕೊಂಡು ಬಂದು ಮಲಗಿದರು. ಆ ನೀರು ತಂದಿದ್ದವನು ಆಮೇಲೆ ರುಕ್ಮಿಣೀ ದೇವಸ್ಥಾನಕ್ಕೆ ಹೋಗಿ ಆಕೆಯ ಎಡಗೈಯಲ್ಲಿದ್ದ ಕಂಕಣವನ್ನು ತೆಗೆದುಕೊಂಡು ಪುರಂದರದಾಸರ ವೇಷದಲ್ಲಿ ಒಬ್ಬ ವೇಶ್ಯೆಯ ಮನೆಗೆ ಹೋದನು. ದೊಡ್ಡವರು ಬಂದರೆಂದು ಆಕೆ ಸತ್ಕರಿಸಿದಾಗ ಅವನು ಆಶೀರ್ವಾದ ಮಾಡಿ ಆ ಕಂಕಣವನ್ನು ಕೊಟ್ಟುಹೋದನು. ಬೆಳಗಾಗುತ್ತಲೇ ಅರ್ಚಕರು ಬಂದು ನೋಡಿದರು. ದೇವಿಯ ಕೈಯಲ್ಲಿ ಕಂಕಣವಿರಲಿಲ್ಲ. ಒಡನೆ ಗಾಬರಿಗೊಂಡು ಅವರು ಆ ವಿಷಯವನ್ನು ರಾಜಾಸ್ಥಾನಕ್ಕೆ ತಿಳಿಸಿದರು. ಆಗ ಅದನ್ನು ಕಂಡುಹಿಡಿಯುವ ಗದ್ದಲ ನಡೆಯಿತು. ಕೊನೆಗೆ ಅದು ವೇಶ್ಯೆಯ ಬಳಿಯಲ್ಲಿ ಸಿಕ್ಕಿತು. ಆಕೆ ನಡೆದ ಸಂಗತಿಯನ್ನೆಲ್ಲಾ ಹೇಳಿ ತಾನು ಪಾರಾದಳು. ಆಗ ರಾಜಭಟರು ದಾಸರನ್ನು ಹುಡುಕಿಕೊಂಡು ಬಂದರು. ದಾಸರು ನಾಮಸಂಕೀರ್ತನದ ಆನಂದದಲ್ಲಿ ಮುಳುಗಿದ್ದರು. ಆಗ ಅವರನ್ನು ಅಲ್ಲೊಂದು ಕಂಬಕ್ಕೆ ಕಟ್ಟಿ ಭಟರು ಒಮ್ಮೆ ಚಾಟಿಯಿಂದ ಒಂದು ಹೊಡೆತವನ್ನು ಕೊಡುತ್ತಲೇ ಅವರಿಗೆ ಅದರ ನಿಜತ್ವವು ಒಳಗೇ ಸ್ಫೂರ್ತಿಯಾದಂತಾಗಿ ಒಡನೆ ಅವರು ಒಂದು ಪದವನ್ನು ಕಟ್ಟಿ ಹಾಡಿದರು ಅದೇನೆಂದರೆ—

ಮುಯ್ಯಕ್ಕೆ ಮುಯ್ಯ ತೀರಿತು । ಜಗ । ದಯ್ಯವಿಜಯ್ಯಸಾಹಯ್ಯ
ಪಂಢರಿರಾಯ ॥ ಪ ॥

ಸಣ್ಣವನೆಂದು ನಾ ನೀರು ತಾರೆಂದರೆ । ಬೆಣ್ಣೆಕಳ್ಳ ಕೃಷ್ಣ ಮರವುಮಾಡಿ ॥
ಚಿನ್ನದ ಗಿಂಡೀಲಿ ನೀರ ತಂದಿಟ್ಟರೆ । ಕಣ್ಣುಕಾಣದೆ ನಾ ಹಣಿದೆ
ಪಂಢರಿರಾಯ ॥ ೧ ॥

ಎನ್ನ ಪೆಸರು ಮಾಡಿ ಸೂಳೆಗೆ ಕಂಕಣ । ವನ್ನು ನೀನಿತ್ತೆ ನಿಜರೂಪದಿ ॥
ಎನ್ನ ಪರರೊಳಗೆ ಭಂಡನಮಾಡಿ ಈ । ಮಾನವರೊಳಗೆಲ್ಲ
ಮಾನವಕೊಂಡಿ ॥ ೨ ॥

ಭಕ್ತವತ್ಸಲನೆಂಬೊ ಬಿರುದು ಬೇಕಾದರೆ । ಭಕ್ತರಧೀನ ನೀನಿರಬೇಡವೆ ॥
ಯುಕ್ತಿಲಿ ನಿನ್ನಂಥ ದೇವರ ನಾ ಕಾಣೆ । ಮುಕ್ತೀಶ ಪುರಂದರವಿಠಲ
ಪಂಢರಿರಾಯ ॥ ೩ ॥

ಇದನ್ನು ಹಾಡುತ್ತಲೇ ಆ ಕಟ್ಟುಗಳು ಚಟಚಟನೆ ಹರಿದು ಕೊಂಡವು. ಆಳುಗಳು ಮತ್ತೆ ಕಟ್ಟಿದರು. ದಾಸರು ಮತ್ತೆ ಹಾಡಿದರು ಕಟ್ಟುಗಳು ಮತ್ತೆ ಹರಿದುಕೊಂಡವು. ಹೀಗಾಗಿ ಆಮೇಲೆ ಎಲ್ಲರಿಗೂ ನಿಜಸ್ಥಿತಿ ಗೊತ್ತಾಯಿತು.

## ಪರಿಶಿಷ್ಟ

ಪುರಂದರದಾಸರು ಮಧ್ವಮತದಲ್ಲಿ ಒಳ್ಳೇ ಅಭಿಮಾನಿಗಳಾಗಿ ಅದನ್ನು ಬಹು ಚೆನ್ನಾಗಿ ಪ್ರಸಾರಮಾಡಿದರು. ಅವರು ರಚಿಸಿರುವ ಸರಸವಾದ ಮತ್ತು ಭಕ್ತಿವೈರಾಗ್ಯಬೋಧಕಗಳಾದ ಕವಿತೆಗಳು ಕನ್ನಡಿಗರೆಲ್ಲರಿಗೂ ಪರಿಚಿತಗಳಾಗಿರುವವು. ಪುರಂದರದಾಸರ ಕೀರ್ತಿಯು ಕರ್ಣಾಟಕದ ದಶದಿಕ್ಕುಗಳನ್ನೂ ನುಗ್ಗಿ ನುಸುಳಿ ಹೋಗಿರುವದು. ಅವರ ಕವಿತೆಗಳೆಲ್ಲಾ ಕರ್ಣಾಟಕ ಭಾಷಾಭಾಂಡಾರಕ್ಕೆ ಉತ್ತಮವಾದ ಭೂಷಣಗಳಾಗಿರುವವು. ಅವರು ಹುಟ್ಟಿದ ಪುರಂದರಗಡವು ಈಗ ಮಹಾರಾಷ್ಟ್ರ ದೇಶವಾಗಿದ್ದರೂ ಹಿಂದಕ್ಕೆ ಕರ್ಣಾಟಕವು ಕಾವೇರಿಯಿಂದ ಗೋದಾವರಿಯ ವರೆಗೆ ಹಬ್ಬಿದ್ದ ಕಾಲಕ್ಕೆ ಕರ್ಣಾಟಕದ ಭಾಗವೇ ಆಗಿತ್ತು. ಈಗಲೂ ಕೂಡ ಆ ಪ್ರಾಂತದಲ್ಲಿ ಕನ್ನಡ ಭಾಷೆಯ ಚಿಲಿಪಿಲಿ ಶಬ್ದವು ಅಲ್ಲಲ್ಲಿ ಕೇಳಬರುತ್ತಿದೆ. ಇವರ ಕೃತಿಯಿಂದ ಜನರು ಇವರನ್ನು ನಾರದರ ಅಂಶವೆಂದು ಭಾವಿಸುತ್ತಾರೆ. ಈ ವಿಷಯಕ್ಕೆ ವಿಜಯವಿಠ್ಠಲರು ಬರೆದಿರುವದೇನಂದರೆ—

**ರಾಗ**

“ ಘೋರನರಕದಲ್ಲಿ ಬಿದ್ದು । ಅಪಾರ **ಜೀ**ವರು ಬೇಡುತಿರಲು । ಉದ್ಧಾರ ಮಾಡಿದ ನಾರದರವರು । ಶ್ರೀಹರಿಯ ಆಜ್ಞದಿ ಧರೆಯೋಳ್ । ಮತ್ತೆ ಬಂದರು । ಸರ್ವೋತ್ತಮನು ಶ್ರೀಹರಿ ನಾರಾಯಣನೇ ಯೆಂದು ಸಾರಿದರು । ಇವರನ್ನು ಭಜಿಸೆ । ಮಾರಜನಕ ವಿಜಯವಿಠಲ । ಆರಿಗಾದರೂ ಒಲಿವ ಕಾಣಿರೋ ॥ ”

ಭಕ್ತಿಮಾರ್ಗ ಪ್ರಸಾರಕ್ಕಾಗಿ ಭಗವಂತನು ನಾರದರನ್ನು ಕಳುಹಿಸಿದನೆಂದೂ ಅವರು ಕೃಷ್ಣಪ್ಪನಾಯಕರಾಗಿ ತಮ್ಮ ಕರ್ತವ್ಯವನ್ನು ಮರೆತಿರಲು ನಾರಾಯಣನೇ ಯಾಚಕನಾಗಿ ಬಂದು ಅವರನ್ನು

ಎಚ್ಚರಗೊಳಿಸಿದನೆಂದೂ ಹೇಳುತ್ತಾರೆ. ಈ ಕರ್ತವ್ಯವನ್ನು ತೀರಿಸಲು ಅವರು ದಕ್ಷಿಣದೇಶದ ಸಮಸ್ತ ಕ್ಷೇತ್ರಗಳನ್ನೂ ಸುತ್ತಿ ಜನರ ಮನಸ್ಸಿಗೆ ಧರ್ಮದ ಸವಿಯನ್ನು ಹಚ್ಚಿ ವೃದ್ಧಾಪ್ಯದ ವರೆಗೂ ಭಕ್ತಿಸುಧಾಸೇವನೆ ಯಲ್ಲಿದ್ದು ಕೊನೆಗೊಂದು ಪುಷ್ಯ ಬಹುಳ ಅಮಾವಾಸ್ಯೆಯ ದಿನ ಹೈದರಾಬಾದಿಗೆ ಸೇರಿದ ಗದ್ವಾಲಿನ ಹತ್ತರವಿರುವ ವನಪರ್ತಿಯೆಂಬ ಸಂಸ್ಥಾನದಲ್ಲಿ ದೈವಾಧೀನರಾದರು. ಈಗಲೂ ಅಲ್ಲಿ ಅವರ ಜ್ಞಾಪಕಾರ್ಥವಾಗಿ ಪುರಂದರಕಟ್ಟೆಯೆಂಬುವದಿದೆ. ಅಲ್ಲಿ ಶಿಷ್ಯವರ್ಗದವರು ಅವರ ಮೃತತಿಥಿಯನ್ನೂ ಉತ್ಸವವನ್ನೂ ಮಾಡುತ್ತಾರೆ.

---

# ಕನಕದಾಸ

## ಪೀಠಿಕೆ

ದೇವರು ಮನುಷ್ಯನಿಗೆ ಪರಮಾನುಗ್ರಹವನ್ನು ತೋರಿಸುವದೆಂದರೆ ಅವನ ಕಣ್ಣೆದುರಿಗೆ ತನ್ನ ಸ್ವರೂಪವನ್ನು ಪ್ರಕಟಮಾಡುವದು. ಇಂಥ ಪರಮಾನುಗ್ರಹವು ಜಾತಿ ಮತ್ತು ವಿದ್ವತ್ತು-ಮೊದಲಾದವುಗಳಿಗೆ ನಿಲುಕುವಂಥದ್ದಾಗಿರದೆ ಕೇವಲ ಭಕ್ತಿಗೆ ಮೀಸಲಾಗಿರುವದು. ಭಗವಂತನ ಈ ಪ್ರಭಾವವು ಕರ್ನಾಟಕದಲ್ಲಿ ಪ್ರಸಿದ್ಧವಾಗಿರುವ ಕನಕದಾಸನೆಂಬ ಭಕ್ತಶಿರೋಮಣಿಯಲ್ಲಿ ಬಹು ಚೆನ್ನಾಗಿ ವ್ಯಕ್ತವಾಗುವದು.

## ಹುಟ್ಟು

ಕನಕದಾಸನ ಜನ್ಮಸ್ಥಾನವು ಧಾರವಾಡ ಜಿಲ್ಲೆಯಲ್ಲಿರುವ ಕೋಡ ತಾಲೂಕಿಗೆ ಸೇರಿದ ಬಾಡವೆಂಬ ಊರು. ಇವನ ತಂದೆಯ ಹೆಸರು ಬೀರೇಗೌಡ. ಇವನು ಅಂಡೆಗುರುಬರ ಜಾತಿಯವನಾಗಿದ್ದು ಗೌಡಿಕೆಯನ್ನು ಮಾಡುತ್ತ ದೇವಬ್ರಾಹ್ಮಣರಲ್ಲಿ ವಿಶ್ವಾಸವುಳ್ಳವನಾಗಿ ಬ್ರಹ್ಮತಂತ್ರಿ ಶ್ರೀನಿವಾಸಾಚಾರ್ಯರೆಂಬವರಿಂದ ಚಕ್ರಾಂತಿಕನಾಗಿ ವೈಷ್ಣವ ಪದ್ಧತಿಯನ್ನು ಹಿಡಿದು ತಿರುಪತಿಯ ವೆಂಕಟರಮಣನಿಗೆ ನಡೆದುಕೊಳ್ಳುತ್ತಿದ್ದನು. ಇವನಿಗೆ ಬೇಕಾದಷ್ಟು ಹೊಲಮನೆಗಳಿದ್ದು ಭಾಗ್ಯಶಾಲಿಯಾಗಿದ್ದರೂ ಇವನ ಹೆಂಡತಿಯಾದ ಬಚ್ಚಿಯು ತಲೆನರೆಯುವ ಕಾಲಬಂದರೂ ಬಸುರಾಗಲಿಲ್ಲ. ಈ ಚಿಂತೆಯಿಂದ ಒಂದುವೇಳೆ ಅವನು ತಿರುಪತಿಗೆ ಹೋಗಿ ದೇವರ ಸೇವೆಯನ್ನು ಮಾಡಿದ್ದರಿಂದ ಒಂದು ದಿನ ವೆಂಕಟರಮಣದೇವರು ಕನಸಿನಲ್ಲಿ ಬ್ರಾಹ್ಮಣರೂಪದಿಂದ ಬಂದು ಒಂದು ಉಂಡೆಯನ್ನು ಪ್ರಸಾದವಾಗಿ ಕೊಟ್ಟಂತಾಯಿತು. ಆ ಪ್ರಸಾದದ ಫಲವಾಗಿ ಬಚ್ಚಿಯು ಕ್ರಿ. ಶ. ಸುಮಾರು ಹದಿನಾರನೇ ಶತಮಾನದ ಪೂರ್ವಾರ್ಧದಲ್ಲಿ ಈ ನಮ್ಮ ಕಥಾನಾಯಕನನ್ನು ಹಡೆದಳು. ಆಗ ಬೀರೇಗೌಡನು ಶಿಶುವಿಗೆ ವೆಂಕಟರಮಣದೇವರ ಜ್ಞಾಪಕಾರ್ಥವಾಗಿ ತಿಮ್ಮನೆಂದು ಹೆಸರಿಟ್ಟು ಸುಯೋಗದಿಂದ ಸಮೃದ್ಧಿಯಾಗಿ ದಾನಧರ್ಮಗಳನ್ನು ಮಾಡಿದನು.

## ತಿಮ್ಮನು ಕನಕನಾದದ್ದು

ಭಗವತ್ಪ್ರಸಾದದಿಂದ ಹುಟ್ಟಿದ ಶಿಶುವಿನ ಅಭ್ಯುದಯವನ್ನೂ ಲಕ್ಷಣಗಳನ್ನೂ ಹೇಳಬೇಕಾದದ್ದೇನಿದೆ ? ಶಿಶುವು ನಿರಾತಂಕವಾಗಿ ಭಗವಂತನ ನಾಮಗಳ ಉಚ್ಚಾರ, ಭಗವದ್ಭಕ್ತರ ಸಹವಾಸ, ಭಗವತ್ಸೇವೆ–ಇವುಗಳಲ್ಲಿಯೇ ತನ್ನ ಅಭಿರುಚಿಯನ್ನು ವ್ಯಕ್ತಗೊಳಿಸಿತು. ಬೀರೇಗೌಡನು ಶಿಶುವಿನ ಆರನೆಯ ವಯಸ್ಸಿನಲ್ಲಿಯೇ ತೀರಿಕೊಂಡನು. ಆಮೇಲೆ ವಯಸ್ಸು ಬರಬರುತ್ತ ತಿಮ್ಮನಿಗೆ ಎಲ್ಲಿ ನೋಡಿದರಲ್ಲಿ ನಿಕ್ಷೇಪಗಳು ಕಾಣುವದಕ್ಕಾರಂಭವಾಗಿ ಏಳು ನಿಕ್ಷೇಪಗಳು ಸಿಕ್ಕಿದವೆಂದು ಹೇಳುತ್ತಾರೆ. ಆ ಧನವನ್ನು ಇವನು ವಿಶೇಷವಾಗಿ ದೀನರಿಗೂ

ಅನಾಥರಿಗೂ ಹಂಚುತ್ತ ಬಂದದರಿಂದ ಇವನ ಮೇಲೆ ಜನರಿಗೆಲ್ಲಾ ಅತ್ಯಂತ ಅನುರಾಗ ಉಂಟಾಗಿ ಆಗ ಕನಕದ ನಿಧಿಗಳನ್ನು ಕಾಣುತ್ತಿದ್ದ ಇವನಿಗೆ ಕನಕನೆಂದು ವಾಡಿಕೆಯಾದ ಹೆಸರಾಯಿತು.

## ಕನಕನು ಕನಕನಾಯಕನಾದದ್ದು

ಅವನ ಪರಹಿತೈಕನಿಷ್ಠೆಯಿಂದ ದೇವರು ಸಂತುಷ್ಟನಾದನೆಂದು ತೋರುತ್ತದೆ. ದಿನದಿನಕ್ಕೆ ಅವನಿಗೆ ಪರಮಾತ್ಮಜ್ಞಾನವು ತನಗೆ ತಾನೇ ಹೊಳೆಯುವದಕ್ಕಾರಂಭವಾಯಿತು. ಅವನ ಪೌರುಷವು ಬೆಳೆಯಿತು. ಅವನ ಗೌರವವು ಮುಗಿಲು ಮುಟ್ಟಿತು. ಈ ಸಮಯದಲ್ಲಿ ಅವನಿಗೆ ತನ್ನ ಗ್ರಾಮದ ಸಂಪೂರ್ಣವಾದ ಒಡೆತನವೇ ಬಂತು. ಆಗ ಅವನು ಕನಕನಾಯಕನೆಂದು ಕರೆಸಿಕೊಂಡನು. ಅವನಿಗೆ ಹರಸಿ ಕೊಂಡ ಎಷ್ಟೋ ಜನರಿಗೆ ಇಷ್ಟಸಿದ್ಧಿಯಾಗುತ್ತ ಬಂದದರಿಂದ ಜನರು ತಿರುಪತಿಗೆ ಸಲ್ಲಿಸುವ ಕಾಣಿಕೆಯನ್ನು ಇವನಿಗೆ ಮುಟ್ಟಿಸುವದಕ್ಕೆ ಮೊದಲುಮಾಡಿದರು. ಇಷ್ಟಾದರೂ ಅವನು ಪ್ರಪಂಚದ ಮೋಹಕ್ಕೆ ಬೀಳದೆ ಈ ಸಮಯದಲ್ಲಿ ಕಾಗಿನೆಲೆ ಎಂಬ ಊರಲ್ಲಿ ಉದ್ಭವಮೂರ್ತಿ ಯಾಗಿದ್ದ ಆದಿಕೇಶವಸ್ವಾಮಿಗೆ ಒಂದು ಮಂಟಪವನ್ನು ಕಟ್ಟಿಸಿ ಬಹು ವೈಭವದಿಂದ ಅದಕ್ಕೆ ಉತ್ಸವಗಳನ್ನು ಮಾಡುತ್ತ ಏಕನಿಷ್ಠೆಯಿಂದ ಹನ್ನೆರಡು ವರ್ಷ ಏಕಪ್ರಕಾರವಾಗಿ ತನ್ನ ಉಪಾಸನೆಯನ್ನು ಸಾಗಿ ಸುತ್ತಿದ್ದನು. ಹೀಗಿರುವಾಗ ಒಂದುದಿನ ವೆಂಕಟರಮಣನು ಸ್ವಪ್ನದಲ್ಲಿ ಬಂದು ತನ್ನ ಸೇವೆಯನ್ನು ಮಾಡಬೇಕೆಂದು ಕೇಳಿದನು. ತನ್ನ ಆದಿಕೇಶವ ಸ್ವಾಮಿಯ ಮೇಲಿನ ನಿಷ್ಠೆಯನ್ನು ಕದಲಿಸುವದು ಕನಕ ನಾಯಕನಿಗೆ ಒಪ್ಪಲಿಲ್ಲ. ಒಡನೆ ಅವನಿಗೆ ಭಯಂಕರವಾದ ಹೊಟ್ಟೆ ಶೂಲೆ ಉಂಟಾಯಿತು. ಮತ್ತೊಂದು ಸಲವೂ ವೆಂಕಟರಮಣನು ಕನಸಿನಲ್ಲಿ ಬಂದು ಹೇಳಿದ್ದರ ಮೇಲೆ ಕನಕನಾಯಕನು ತಿರುಪತಿಗೆ ಹೋಗಿ ದೇವರ ದರ್ಶನವನ್ನು ಮಾಡಿ "ಬಂದೆವಯ್ಯಾ ಗೋವಿಂದ ಶೆಟ್ಟಿ" ಎಂಬ ಪದವನ್ನು ಹಾಡುತ್ತಲೆ ಉದರಶೂಲೆಯು ಹೋಯಿ ತೆಂದು ಹೇಳುತ್ತಾರೆ.

## ಕನಕನಾಯಕನು ಕನಕದಾಸನಾದದ್ದು

ಕನಕನಾಯಕನು ತಿರುಪತಿಯಿಂದ ಊರಿಗೆ ಬಂದಮೇಲೆ ತನ್ನ ವ್ಯವಹಾರವನ್ನೆಲ್ಲಾ ಕೊಡವಿಹಾಕಿ ಆಗಿನ ಕಾಲದಲ್ಲಿ ದಾಸಕೂಟದ ಶಿರೋಮಣಿಗಳಾಗಿದ್ದ ಶ್ರೀವ್ಯಾಸರಾಯಸ್ವಾಮಿಗಳ ಶಿಷ್ಯನಾಗಿ ತಾಲ ತಂಬೂರಿಗಳನ್ನು ಹಿಡಿದು ಭಗವನ್ನಾಮವನ್ನು ಭಜನೆ ಮಾಡುತ್ತ ಊರೂರು ತಿರುಗಲಾರಂಭಿಸಿದನು. ಆಗ ಇವನಿಗೆ ಕನಕದಾಸನೆಂಬ ಹೆಸರು ಬಿತ್ತು. ಅಂಡೆಗುರುಬನು ತಮ್ಮ ಜೊತೆಗೆ ಬಂದದ್ದನ್ನು ನೋಡಿ ಇತರ ಹಿರಿಯತನದ ಶಿಷ್ಯರು ಅಸೂಯೆಗೊಳ್ಳಲು ಒಮ್ಮೆ ಸ್ವಾಮಿಗಳು ಶಿಷ್ಯರಿಗೆಲ್ಲಾ ಒಂದೊಂದು ಹಣ್ಣನ್ನು ಕೊಟ್ಟು ಅದನ್ನು ಯಾರೂ ಕಾಣ ದಂತೆ ತಿಂದುಬಂದವರು ಶ್ರೇಷ್ಠರೆಂದು ಹೇಳಿದರಂತೆ. ಉಳಿದ ಶಿಷ್ಯ ರೆಲ್ಲಾ ಎಲ್ಲೆಲ್ಲಿಗೋ ದೂರ ಹೋಗಿ ಮರೆಯಲ್ಲಿ ತಿಂದುಬಂದರು. ಕನಕನು ಎಷ್ಟೆಷ್ಟೋ ಕಡೆಗೆ ಹೋಗಿ ತಿನ್ನುವದಕ್ಕೆ ಪ್ರಯತ್ನಿಸಿ ಆಗದೆ ಆತ್ಮನು ಸಾಕ್ಷಿಯಾಗಿರುವದನ್ನು ಮನಸ್ಸಿಗೆ ತಂದುಕೊಂಡು ಆ ಹಣ್ಣನ್ನು ಹಾಗೆಯೇ ಹಿಂದಕ್ಕೆ ತಂದಿಟ್ಟನಂತೆ. ಆಗ ಆ ಸ್ವಾಮಿಗಳು ದೇವರ ಸರ್ವಸಾಕ್ಷಿತ್ವವನ್ನು ಮರೆಯದೆ ಇರುವ ಕನಕನ ಶ್ರೇಷ್ಠತೆ ಯನ್ನು ಎಲ್ಲರಿಗೂ ತೋರಿಸಿಕೊಟ್ಟರಂತೆ. ಇವನಿಗೆ ಸ್ವಭಾವವಾಗಿಯೇ ಕವಿತಾಶಕ್ತಿಯಿದ್ದದರಿಂದ ಇವನು ತಾನೇ ಸಮಯೋಚಿತವಾಗಿ ಬೇಕು ಬೇಕಾದ ಅರ್ಥಗಳನ್ನಿಟ್ಟು ಜನರಿಗೆ ಧರ್ಮನೀತಿಗಳನ್ನೂ ಭಕ್ತಿಜ್ಞಾನ ವೈರಾಗ್ಯಗಳನ್ನು ಉಂಟುಮಾಡುವ ಹಾಡುಗಳನ್ನು ಕಟ್ಟಿ ಹಾಡುತ್ತ ಹೊರಟದ್ದರಿಂದ ಇವನ ಉಪದೇಶವು ಎಲ್ಲರ ಮನಸ್ಸಿನಲ್ಲಿಯೂ ಒಡೆದು ಮೂಡುವದಕ್ಕಾರಂಭವಾಯಿತು.

## ಕನಕನ ಕಿಂಡಿಯಾದದ್ದು

ಈ ವೃತ್ತಿಯಲ್ಲಿ ಕನಕನು ಒಮ್ಮೆ ಉಡುಪಿಯಲ್ಲಿ ಶ್ರೀಕೃಷ್ಣದೇವರ ದರ್ಶನಕ್ಕೆಂದು ಬಂದನು. ಗುಲಾಬೀಹೂವಿನ ಸುತ್ತುಮುತ್ತಲಿನ ಮುಳ್ಳುಗಳಂತೆ ದೇವರ ಕಾವಲಿಗರಾದ ಪರಿವಾರದವರು ಈ ಕುರುಬ ದಾಸನನ್ನು ನೋಡಿ ತಮ್ಮ ಮಡಿಗೆಲ್ಲಿ ಧಕ್ಕೆ ಬಂದೀತೋ ಎಂದು ಅವನನ್ನು ಹುಸ್ಸೆಂದು ಹಿಂದಕ್ಕೆ ಅಟ್ಟಿಬಿಟ್ಟರು. ಆಗ ಕನಕನು

ಉಪಾಯಾಂತರವಿಲ್ಲದೆ ಪ್ರಾಕಾರದ ಹೊರಗಡೆಯಲ್ಲಿ ದೇವಸ್ಥಾನದ ಹಿಂಭಾಗಕ್ಕೆ ಬಂದು ನಿಂತು ಅಲ್ಲಿ ಒಂದು ಹಾಡಿನಿಂದ ಭಗವದ್ದರ್ಶನ ವಿಷಯಕವಾದ ಉತ್ಕಟೇಚ್ಛೆಯನ್ನು ವ್ಯಕ್ತಮಾಡಿದನು. ಆಗ ಭಕ್ತ ಪರಾಧೀನನಾದ ಶ್ರೀಕೃಷ್ಣನು ಪೂರ್ವಾಭಿಮುಖವಾಗಿದ್ದ ಆ ತನ್ನ ವಿಗ್ರಹವನ್ನು ಪಶ್ಚಿಮಾಭಿಮುಖವಾಗಿ ಮಾಡಿ ಆ ಗೋಡೆಯಲ್ಲಿ ಒಂದು ಕಂಡಿಯನ್ನು ಕೆಡವಿಸಿದನೆಂದು ಹೇಳುತ್ತಾರೆ. ಅಂತು ಈಗಲೂ ಶ್ರೀಕೃಷ್ಣನ ವಿಗ್ರಹವು ಪಶ್ಚಿಮಾಭಿಮುಖವಾಗಿಯೇ ಇದೆ. ಈಗ ಯಾರಿಗೆ ದರ್ಶನವಾಗಬೇಕಾಗಿದ್ದರೂ ಆ ಕಂಡಿಯಿಂದಲೇ. ಆ ಕಂಡಿಗೆ ಈಗಲೂ ಕನಕಕಂಡಿ ಎಂದು ಹೆಸರು. ಈ ಕಂಡಿಗೆ ಎದುರಾಗಿಯೇ ಈಚೆಗೆ ಭಕ್ತಾಗ್ರೇಸರನಾದ ಕನಕದಾಸನ ಗುಡಿಯು ಏರ್ಪಾಡಾಗಿದೆ.

## ದಾಸನು ಸ್ವಾಮಿಗಳಿಗೆ ದೇವರ ದರ್ಶನವನ್ನು ಮಾಡಿಸಿದ್ದು

ಒಂದುಸಲ ಪರ್ಯಾಯ ಕಾಲದಲ್ಲಿ ಸೋದೇಮಠದ ವಾದಿರಾಜ ಸ್ವಾಮಿಗಳು ಮಾನಸಪೂಜೆ ಮಾಡುವಾಗ ತಮ್ಮ ಕಲ್ಪಿತಮಾಲೆಯು ಕಲ್ಪಿತಕಿರೀಟದಲ್ಲಿ ತೂರದೆ ಇರುವದನ್ನು ನೋಡಿ ಪೇಚಾಟದಲ್ಲಿ ಸಿಕ್ಕು ಬಿದ್ದರು. ಅದನ್ನು ಕನಕದಾಸನು ದಿವ್ಯಜ್ಞಾನದಿಂದ ತಿಳಿದು ಬೇರೊಂದು ಚಿಕ್ಕಕೀರೀಟವನ್ನು ಕಲ್ಪಿಸಿ ಆಮೇಲೆ ಮಾಲೆಯನ್ನು ಹಾಕಿದರೆ ಆ ಹಾರವು ತೂರುವದೆಂದು ಹೇಳಿಕಳಿಸಿದನು. ಇದರಿಂದ ಆಶ್ಚರ್ಯಚಕಿತರಾದ ಸ್ವಾಮಿಗಳು ಕನಕದಾಸನನ್ನು ಮಹಾತ್ಮನನ್ನಾಗಿ ತಿಳಿದು ತನಗೆ ದೇವರ ದರ್ಶನವನ್ನು ಮಾಡಿಸಬೇಕೆಂದು ಅವನಿಗೆ ಗಂಟುಬಿದ್ದರು. ಉದಾರಬುದ್ಧಿಯ ಕನಕನು ಅದಕ್ಕೆ ಒಪ್ಪಿಬಿಟ್ಟನು. ಆದರೆ ಸ್ವಾಮಿಗಳಿಗಿನ್ನೂ ಚಿತ್ತಶುದ್ಧಿ ಸಾಲದೆಂದು ದೇವರು ಅವರಿಗೆ ಪ್ರತ್ಯಕ್ಷನಾಗುವದಕ್ಕೆ ಒಪ್ಪಲಿಲ್ಲ. ಕನಕದಾಸನ ನಿರ್ಬಂಧದಿಂದ ಮರುದಿನದ ದ್ವಾದಶಿಯ ಸಮಯದಲ್ಲಿ ದರ್ಶನವನ್ನೀಯುವೆನೆಂದು ದೇವನು ಸಮ್ಮತಿಸಿದನು. ಸ್ವಾಮಿಗಳು ತಮ್ಮ ಅಟ್ಟಹಾಸದೊಡನೆ ಶ್ರೀಕೃಷ್ಣನ ದರ್ಶನಕ್ಕೆ ಕಣ್ಣುಬಿಟ್ಟುಕೊಂಡೇ ಇದ್ದರು. ಆಗ ಅಲ್ಲಿ ಒಂದು ನಾಯಿಯು ನುಗ್ಗಿಬಂತು. ಮಠವೆಲ್ಲಾ ಅಪವಿತ್ರವಾಗುವ

ದೆಂದು ತಲೆಗೊಂದು ಕೂಗುಹಾಕಿ ಎಲ್ಲರೂ ಅದನ್ನು ಓಡಿಸಿಬಿಟ್ಟರು ಆ ನಾಯಿ ಕನಕನ ಕಡೆಗೆ ಓಡಿಬಂತು. ಕನಕನು ಅದನ್ನು ಗುತು ಹಿಡಿದು "ಡೊಂಕು ಬಾಲದ ನಾಯಕರೆ ನೀವೇನೇನೂಟ ಮಾಡಿದಿರಿ. ಎಂಬ ಹಾಡಿನಿಂದ ಕೇಳಲು, ನಡೆದ ಸಂಗತಿಯನ್ನು ಹೇಳಿ ನಾಯಿ ಅದೃಶ್ಯವಾಯಿತು. ಆಮೇಲೆ ಸ್ವಾಮಿಗಳು ಪಶ್ಚಾತ್ತಾಪಪಟ್ ಮತ್ತೊಮ್ಮೆ ಹೇಗಾದರೂ ದರ್ಶನ ಮಾಡಿಸಬೇಕೆಂದು ಕನಕನನ್ ಗಟ್ಟಿಯಾಗಿ ಹಿಡಿಯಲು ಕನಕನ ಮಾತನ್ನು ಮೀರಲಾರದೆ ದೇವರ ಕುದುರೆಯಾಗಿ ಹಿಂಗಾಲನ್ನು ನೆಲದ ಮೇಲೆಯೂ ಮುಂಗಾಲನ್ ಸ್ವಾಮಿಗಳ ಹೆಗಲ ಮೇಲೆಯೂ ಇಟ್ಟು ತನ್ನ ಮುಖವನ್ನು ಮುಂ ಮಾಡಿ ದರ್ಶನವನ್ನು ಕೊಟ್ಟನಂತೆ! ಅಂದಿನಿಂದ ಆ ಸ್ವಾಮಿಗಳ ಹಯವದನ ಎಂಬ ಅಂಕಿತವನ್ನಿಟ್ಟು ಎಷ್ಟೋ ಕೀರ್ತನೆಗಳನ್ ಮಾಡಿದ್ದಾರೆ. ಕನಕದಾಸನು ತೋರಿಸಿದ ಇಂಥ ಎಷ್ಟೋ ಮಹಿವೆ ಗಳು ಪ್ರಚಾರದಲ್ಲಿವೆ.

## ಗ್ರಂಥರಚನೆ

ಕನಕದಾಸನು ಮೋಹನತರಂಗಿಣಿ, ರಾಮಧ್ಯಾನ ಚರಿತ್ರೆ ನಳ ಚರಿತ್ರೆ, ಮತ್ತು ಹರಿಭಕ್ತಿಸಾರ ಎಂಬ ಗ್ರಂಥಗಳನ್ನು ಮಾಡಿರು ದಲ್ಲದೆ ವಿಷ್ಣುಪರವಾದ ಅನೇಕ ಹಾಡುಗಳನ್ನು ಮಾಡಿದ್ದಾನೆ. ಇ ಗಳಲ್ಲಿ ರಾಮಧ್ಯಾನದ ಚರಿತ್ರೆಯು ವಿಲಕ್ಷಣವಾಗಿದೆ. ಶ್ರೀರಾಮನ ಲಂಕೆಯಿಂದ ಸೀತಾಸಮೇತನಾಗಿ ಬರುತ್ತ ಕರ್ಣಾಟಕದಲ್ಲಿಳಿದ ಋಷ್ಯಾಶ್ರಮದಲ್ಲಿ ಅತಿಥಿ ಸತ್ಕಾರವನ್ನು ಪಡೆದಾಗ ಇಲ್ಲಿನ ಭಕ್ಷಭೋಜ ಗಳಿಗೆ ಮೆಚ್ಚಿ ಇಲ್ಲಿನ ಬೆಳೆಗಳಲ್ಲೆಲ್ಲಾ ಶ್ರೇಷ್ಟವಾಗಿದ್ದ ನರೆವಲೆಗ ಎಂ ಧಾನ್ಯಕ್ಕೆ ರಾಘವ ಎಂಬ ಬಿರುದನ್ನು ಕೊಟ್ಟನಂತೆ. ಆ ಹೆಸರ ಅಪಭ್ರಂಶವಾಗಿ ರಾಗಿ ಎಂದಾಯಿತಂತೆ. ಇದನ್ನು ಕನಕದಾಸನ ರಾಮಧ್ಯಾನ ಚರಿತ್ರೆ ಎಂಬ ಕಾವ್ಯವಾಗಿ ಮಾಡಿದ್ದಾನೆ.

## ಪರಿಶಿಷ್ಟ

ಕನಕದಾಸನು ಕಾಗಿನೆಲೆಯ ಆದಿಕೇಶವನೊಂದೇ ಅಲ್ಲ ಬೇಲೂರಿನ ಚೆನ್ನಕೇಶವದೇವರ ಅಂಕಿತದಿಂದಲೂ ಪದಗಳನ್ನು ಮಾ ದ್ದಾನೆ. ಅವನ ಮಾತುಕಥೆಗಳಲ್ಲಿ ಅರ್ಥವು ಗೂಢವಾಗಿರುವುದೊಂದ

ವಿಶೇಷ. ಉದಾಹರಣೆಗೆ ನೋಡಿರಿ. ಶ್ರೀ ವ್ಯಾಸರಾಯಸ್ವಾಮಿಗಳು ತಮ್ಮ ಶಿಷ್ಯರನ್ನು ಪರೀಕ್ಷಿಸುವದಕ್ಕೆ ಹೊರಟು ಮುಕ್ತಿಗೆ ಸಾಧನ ವೇನೆಂದು ಪ್ರಶ್ನೆಯನ್ನು ಹಾಕಿದರಂತೆ. ಆದಕ್ಕೆ ಒಬ್ಬೊಬ್ಬರು ಒಂದೊಂದು ಬಗೆಯಾಗಿ ಉತ್ತರವನ್ನು ಕೊಟ್ಟರು. ಕನಕನು "ನಾ ಸತ್ತರೆ ಮುಕ್ತಿ" ಎಂದು ಹೇಳಿದನಂತೆ. ಇದನ್ನು ಕೇಳಿ ಶಿಷ್ಯರೆಲ್ಲರೂ ಘೊಳ್ಳೆಂದು ನಗಲು ಸ್ವಾಮಿಗಳು ಆದರ ಅರ್ಥವನ್ನು ಬಿಚ್ಚಿಹೇಳೆಂದು ಕೇಳಿದರಂತೆ. ಆಗ ಕನಕನು "ನಾ ಎಂದರೆ ಅಹಂಕಾರ" ವೆಂದು ಅರ್ಥಮಾಡಿದೊಡನೆಯೇ ಉಳಿದ ಶಿಷ್ಯರಿಗೆಲ್ಲಾ ಮುಖವು ಪೆಚ್ಚು ಬಿದ್ದು ಒಬ್ಬರನ್ನೊಬ್ಬರು ನೋಡಿಕೊಂಡರಂತೆ. ಹೀಗೆ ದೂರಾರ್ಥವಿರುವ ಪ್ರಯೋಗಗಳಿಗೆ ಕನಕನ ಮುಂಡಿಗೆಗಳೆಂದು ಹೆಸರಾಗಿದೆ. ಈ ಪ್ರಕಾರವಾಗಿ ಕನಕನು ತಿಮ್ಮನಾಗಿ, ಕನಕನಾಗಿ, ಕನಕನಾಯಕನಾಗಿ, ಕನಕದಾಸನಾಗಿ ತಾನೂ ದೇವರನ್ನು ಕಂಡು ಇತರರಿಗೂ ದೇವರನ್ನು ತೋರಿಸಿ, ಜನಮಂಡಲಿಯಲ್ಲಿ ಭಕ್ತಿಯ ಬೀಜವನ್ನು ಬಿತ್ತಿ ನೀತಿಯ ಬೆಳೆಯನ್ನು ಬೆಳೆಸಿ ವಿರಕ್ತನಾಗಿ ತೊಂಬತ್ತೆಂಟು ವರ್ಷ ಬಾಳಿ ಆದಿಕೇಶವದೇವರ ದೇವಸ್ಥಾನದಲ್ಲಿಯೇ ತನ್ನ ಜನ್ಮವನ್ನು ನೀಗಿದನು.

---

# ಅ ಕ ಬ ರ

## ಹುಟ್ಟು

ಲೋಕದಲ್ಲಿ ತಾತನ ಗುಣಾತಿಶಯಗಳು ಮೊಮ್ಮಗನಲ್ಲಿ ಒಡೆದು ಮೂಡುವವೆಂದು ಜನರಾಡುವ ಮಾತಿಗೆ ಅಕಬರನು ಅತ್ಯುತ್ತಮ ನಿದರ್ಶನನಾಗಿದ್ದಾನೆ. ಅಕಬರನ ತಾತನಾದ ಬಾಬರನು ಒಳ್ಳೇ ಕಷ್ಟಸಹಿಷ್ಣುವೂ ಎದೆಗಾರನೂ ದೈವಭಕ್ತಿಸಂಪನ್ನನೂ ಆಗಿದ್ದು

ಹಿಂದುಸ್ಥಾನದಲ್ಲಿ ಮೊಗಲರ ನಿಶಾನಿಯನ್ನು ನೆಟ್ಟವನಾಗಿದ್ದಾನೆ. ಬಾಬರನ ಮಗನಾದ ಹುಮಾಯೂನನು ಹತ್ತೆಂಟು ಕಡೆಯಲ್ಲಿಯೂ ಹಗೆಗಳ ಹಗರಣಕ್ಕೆ ಸಿಕ್ಕು ಬಿದ್ದು ಒಂದುವೇಳೆ ಗರ್ಭಿಣಿಯಾಗಿದ್ದ ತನ್ನ ಹೆಂಡತಿಯೊಡನೆ ತಲೇತಪ್ಪಿಸಿಕೊಳ್ಳಬೇಕಾಗಿ ಬಂತು. ಆ ಸಮಯ ದಲ್ಲಿ ಅವನು ತನ್ನ ಹೆಂಡತಿಗೊಂದು ಯೋಗ್ಯವಾದ ಆಶ್ರಯವನ್ನು ಪಡೆಯಲು ಪ್ರಯತ್ನಮಾಡಿದನು. ಬಹುಕಡೆ ನಿರಾಶೆಯೇ ಫಲ ವಾಯಿತು. ಸಿಂಧುಪ್ರಾಂತದಲ್ಲಿರುವ ಉಮರಕೋಟೆಯ ರಾಜನು ಅವನಿಗೆ ಒತ್ತಾಸೆಯನ್ನು ಕೊಟ್ಟನು. ಹುಮಾಯೂನನು ತನ್ನ ಹೆಂಡತಿ ಯನ್ನು ಅಲ್ಲಿ ಬಿಟ್ಟು ಶತ್ರುಪ್ರತೀಕಾರಕ್ಕಾಗಿ ಮುಂದೆ ಸಾಗಿದನು. ಹುಮಾಯೂನನ ಹೆಂಡತಿಯು ಉಮರಕೋಟೆಯಲ್ಲಿದ್ದಾಗ ಕ್ರಿ. ೧೫೪೨ ರಲ್ಲಿ ಆಕೆಯ ಹೊಟ್ಟೆಯಲ್ಲಿ ಒಂದು ಪುತ್ರರತ್ನದ ಉದಯವಾಯಿತು. ಕಂಡಕಂಡ ಊರುಗಳನ್ನು ಹಿಡಿಯುವದಕ್ಕೆ ಅಲೆಯುತ್ತಿದ್ದ ಹುಮಾ ಯೂನನಿಗೆ ಪುತ್ರೋತ್ಸವದ ಸುದ್ದಿ ಮುಟ್ಟಿತು. ಅವನಿಗೆ ಹಿಡಿಸ ಲಾರದಷ್ಟು ಆನಂದವಾದ್ದರಿಂದ ಅವನು ಅದನ್ನು ಹೊರಗೆ ತೋರಿಸಲೇ ಬೇಕಾಯಿತು. ಸುತ್ತುಮುತ್ತಿರುವವರಿಗೇನಾದರೂ ಕೊಡೋಣವೆಂದರೆ ಹತ್ತಿರದಲ್ಲಿ ಮತ್ತೇನೂ ಇರಲಿಲ್ಲ; ಕಸ್ತೂರಿ ಮಾತ್ರ ಇತ್ತು. ಹುಮಾ ಯೂನನು ಅದನ್ನೆ ಎಲ್ಲರಿಗೂ ಹಂಚಿ ಅಷ್ಟರಿಂದಲೇ ಸಮಾಧಾನ ಮಾಡಿಕೊಂಡನು.

## ಚಿಕ್ಕಂದಿನ ಮೊದಲನೇ ದುರ್ದೆಶೆ

ಮುಂದೆ ಸುಖವಾಗುವದಿದ್ದರೆ ಮೊದಲು ಕಷ್ಟಗಳೊದಗುವ ವೆಂದು ಎಲ್ಲರಲ್ಲಿಯೂ ಒಂದು ನಂಬಿಕೆ ಇದೆ. ಆ ಅಭಿಪ್ರಾಯವು ಅಕಬರನಲ್ಲಿ ಅರ್ಥವಾಗುತ್ತದೆ. ಅಕಬರನಿಗೆ ಹತ್ತು ತಿಂಗಳಾಗುವ ಹೊತ್ತಿಗೆ ಹುಮಾಯೂನನು ತನ್ನ ದಂಡಯಾತ್ರೆಯಲ್ಲಿ ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೊಂಡು ಬಂದು ಮಗನ ಮುದ್ದುಮುಖವನ್ನು ನೋಡಿದನು. ಹುಮಾಯೂನನು ಆ ಹೆಂಡತಿಯನ್ನು ಸೌಂದರ್ಯ ಕ್ಕಾಗಿ ವರಿಸಿದ್ದು ಸಾರ್ಥಕವಾಗಿ ಆ ಕುಮಾರನು ಬಹು ಸುಂದರ ನಾಗಿದ್ದನು. ಆಗ ಹೆಂಡತಿಯನ್ನೂ ಮಗನನ್ನೂ ಕಟ್ಟಿಕೊಂಡು ಮತ್ತೆ

ಹುಮಾಯೂನನು ತನ್ನ ಯುದ್ಧಯಾತ್ರೆಯನ್ನು ಕೈಕೊಂಡು ನಡೆದನು. ಕಂದಹಾರದ ಹಾದಿಯನ್ನು ಹಿಡಿದು ಹೋಗುತ್ತಿರುವಾಗ ತನ್ನ ತಮ್ಮ ನೊಬ್ಬನು ತನ್ನ ಮೇಲೆ ಕತ್ತಿಯನ್ನು ಹಿರಿದುಕೊಂಡು ಬರುತ್ತಾನೆಂಬ ಸುದ್ದಿಯನ್ನು ಕೇಳಿ ಹುಮಾಯೂನನು ಮಗುವನ್ನು ಸುರಕ್ಷಿತವಾಗಿ ತೆಗೆದುಕೊಂಡು ಹೋಗಲರಿಯದೆ ಅಲ್ಲಿಯೇ ಬಿಟ್ಟು ಹೆಂಡತಿಯನ್ನು ಮಾತ್ರ ಜೊತೆಗೆ ಕರೆದುಕೊಂಡು ಮುಖವನ್ನು ಮರೆಸಿಕೊಂಡನು. ಅಕಬರನನ್ನು ತಂದೆಯೆನಿಸಿಕೊಂಡ ಹುಮಾಯೂನನು ಕೈಬಿಟ್ಟರೂ ಹಿಂದುಸ್ಥಾನದ ಸುದೈವ ಪ್ರಭಾವದಿಂದ ದೇವರು ಕೈಬಿಡಲಿಲ್ಲ. ಹಿಂದು ಸ್ಥಾನದಲ್ಲಿ ಶಾಂತತೆಯನ್ನು ನೆಲೆಗೊಳಿಸುವದಕ್ಕಾಗಿಯೇ ಭಗವಂತನು ಅವನ ರಕ್ಷಣೆಯ ಭಾರವನ್ನು ತೆಗೆದುಕೊಂಡನೆಂದು ಭಾವಿಸಬೇಕಾ ಗುತ್ತದೆ. ಹುಮಾಯೂನನನ್ನು ಬೇಟೆಯಾಡುವದಕ್ಕೆ ಬಂದ ಆ ತಮ್ಮನೆಂಬುವನು ಆ ಮಗು ತನ್ನ ಮಗನೆಂಬ ಭಾವನೆಯನ್ನು ತಂದು ಕೊಂಡು ಅದನ್ನು ಕಂದಹಾರಿಗೊಯ್ದು ತನ್ನ ರಾಣಿಯ ರಕ್ಷಣೆ ಯಲ್ಲಿಟ್ಟನು. ಹುಮಾಯೂನನು ಅಲ್ಲಿಗೆ ಬರುವನೆಂದು ಕೇಳಿ ಆ ತಮ್ಮನು ಆ ಮಗುವನ್ನು ಹುಮಾಯೂನನಿಗೆ ದಕ್ಕಗೊಡಬಾರದೆಂದು ಅದನ್ನು ಕಾಬೂಲಿನಲ್ಲಿದ್ದ ತನ್ನ ಮತ್ತೊಬ್ಬ ಸಹೋದರನ ಬಳಿಗೆ ಸಾಗಹಾಕಿದನು. ಹುಮಾಯೂನನು ಅಲ್ಲಿಗೇ ಹೋಗಿ ಕಾಬೂಲನ್ನು ಹಿಡಿದುಕೊಂಡು ಮಗನನ್ನು ತಬ್ಬಿಕೊಂಡನು.

## ಚಿಕ್ಕಂದಿನ ಎರಡನೇ ದುರ್ದಶೆ

ಹುಮಾಯೂನನಿಗೆ ಆಗ ಆದ ಜಯದ ಬೆಳಕು ಬರೀ ಮಿಂಚಿನ ಬೆಳಕಾಗಿ ಪರಿಣಮಿಸಿತು. ಕಾಬೂಲಿನಲ್ಲಿ ಸೋತ ಸಹೋದರನು ಎಲ್ಲೆಲ್ಲಿಯೋ ದಂಡು ಕೂಡಿಸಿಕೊಂಡು ಬಂದು ಮತ್ತೆ ಕಾಬೂಲನ್ನು ಕಸುಕೊಂಡದ್ದರಿಂದ ಅಕಬರನು ಮತ್ತೆ ಚಿಕ್ಕಪ್ಪನ ಕೈಗೆ ಸಿಕ್ಕುಬಿದ್ದನು. ಆಗ ಓಡಿಹೋಗಿದ್ದ ಹುಮಾಯೂನನೂ ಅಷ್ಟರಲ್ಲಿ ಒಂದು ದಂಡನ್ನು ಸಜ್ಜುಮಾಡಿಕೊಂಡು ಬಂದು ರಣಭೇರಿಯನ್ನು ಹೊಡೆದು ಊರೊಳಕ್ಕೆ ಗುಂಡು ಹಾರಿಸುವದಕ್ಕಾರಂಭಿಸಿದನು. ಆಗ ಊರೊಳಗಿದ್ದ ತಮ್ಮನು ಗುಂಡಿನೆದುರಿಗೆ ಅಕಬರನನ್ನು ನಿಲ್ಲಿಸುತ್ತೇನೆಂದು ಹುಮಾಯೂನನಿಗೆ

ಬುಡ್ಡ ಬೆದರಿಕೆಯನ್ನು ಹಾಕಿದನು. ಮಗನ ಮೇಲಿನ ಮಮತೆಯಿಂದ ಹುಮಾಯೂನನು ಆಗ ಗುಂಡುಹಾಕುವದನ್ನು ಬಿಟ್ಟು ಸುಮ್ಮನಿದ್ದು ಆಮೇಲೆ ಹೇಗೋ ಕಾಬೂಲನ್ನು ವಶಮಾಡಿಕೊಂಡು ಮಗನಿಗೆ ದರ್ಶನ ವನ್ನಿತ್ತನು. ಈ ಕಷ್ಟಪರಂಪರೆಗಳಲ್ಲಿಯೇ ಆಕಬರನಿಗೆ ಹದಿಮೂರು ವರ್ಷ ಕಳೆಯಿತು ಅಷ್ಟರಲ್ಲಿಯೇ ಹುಮಾಯೂನನ ಇಹಲೋಕ ಯಾತ್ರೆಯೂ ಮುಗಿಯಿತು.

## ಚಿಕ್ಕ ವಯಸ್ಸಿನ ಆಳಿಕೆ

ಹುಮಾಯೂನನ ಕೊನೆಗಾಲದಲ್ಲಿ ಉಳಿದಿದ್ದ ರಾಜ್ಯವೂ ಅಲ್ಪ ವಾಗಿತ್ತು. ಆ ಅಲ್ಪರಾಜ್ಯಕ್ಕಾದರೂ ಹೇಮು, ಸಿಕಂದರಶಹ–ಮೊದ ಲಾದ ಪ್ರಬಲರಾದ ಪ್ರತಿಪಕ್ಷಿಗಳೂ ಇದ್ದರು. ಸಾಲದ್ದಕ್ಕೆ ದುರ್ಭಿಕ್ಷ ದಲ್ಲಿ ಅಧಿಕಮಾಸವೆಂಬಂತೆ ಬರಗಾಲವೂ ಆಗಿತ್ತು. ಈ ಪರಿಸ್ಥಿತಿಯಲ್ಲಿ ಆಕಬರನು ತನ್ನ ಉಪದೇಶಕನಾದ ಬೈರಾಮನೊಡನೆ ಪಂಜಾಬಿನ ಕಡೆಗೆ ಹೋಗಿದ್ದನು. ದಿಲ್ಲಿಯಲ್ಲಿದ್ದ ಮುಖ್ಯಾಧಿಕಾರಿಯು ಹುಮಾ ಯೂನನ ಮರಣದ ಸುದ್ದಿಯೊಡನೆ ರಾಜಚಿಹ್ನಗಳನ್ನೂ ಕೊಟ್ಟು ರಾವುತನನ್ನು ಆಕಬರನ ಕಡೆಗೆ ಕಳುಹಿಸಿ ತನ್ನ ರಾಜಭಕ್ತಿಯನ್ನು ಪ್ರದರ್ಶನ ಮಾಡಿದನು. ಆ ರಾಜಚಿಹ್ನವು ತನ್ನನ್ನು ಹುಡುಕಿ ಕೊಂಡು ಬಂದಾಗ ಆಕಬರನು ಕಾಳಾನೂರಲ್ಲಿ ಒಂದು ತೋಟ ದಲ್ಲಿದ್ದನು. ಜೊತೆಯಲ್ಲಿದ್ದ ಬೈರಾಮನು ಆಕಬರನನ್ನು ಅಲ್ಲಿಯೇ ಒಂದು ಕಟ್ಟೆಯ ಮೇಲೆ ಕೂಡಿಸಿ ರಾಜಚಿಹ್ನಗಳನ್ನು ಹಿಡಿದು ಅವನನ್ನು ಕ್ರಿ. ೧೫೫೬ ರಲ್ಲಿ ಚಕ್ರವರ್ತಿಯೆಂದು ಸಾರಿದನು ಇತ್ತ ಹೀಗಾಗಿರಲು ಅತ್ತ ಹೇಮುವೆಂಬವನು ಬಂದು ದಿಲ್ಲಿ, ಆಗ್ರಾ ಮೊದಲಾದವುಗಳನ್ನು ಬಾಯಲ್ಲಿ ಹಾಕಿಕೊಂಡನು. ಈ ಸುದ್ದಿಯನ್ನು ಕೇಳುತ್ತಲೇ ಬೈರಾಮನು ಆಕಬರನೊಡನೆ ಬಂದು ಯುದ್ಧಮಾಡಿ ಹೇಮುವಿನ ಸೊಕ್ಕಡಗಿಸಿದನು. ಸ್ವಲ್ಪ ದಿನಗಳಲ್ಲಿಯೇ ಸಿಕಂದರನೂ ಶರಣು ಬಂದನು. ಅವರಿಬ್ಬರ ಪುಂಡಾಟವನ್ನಡಗಿಸಿ ಬೈರಾಮನು ತನ್ನ ಬೇಳೆ ಯನ್ನು ಬೇಯಿಸುವದಕ್ಕೆ ಮೊದಲುಮಾಡಿದನು. ಬೈರಾಮನು ದುರಭಿಮಾನಿಯಾಗಿಯೂ ಸ್ವಮತಪಕ್ಷಪಾತಿಯಾಗಿಯೂ ಕ್ರೂರ

ನಾಗಿಯೂ ಇದ್ದದರಿಂದ ಜನರ ಪ್ರೀತಿಯನ್ನು ದೊರಕಿಸಿಕೊಳ್ಳುವ ದಾಗಲಿಲ್ಲ. ಅಕಬರನಿಗೆ ವಯಸ್ಸಾಗುತ್ತ ಆಗುತ್ತ ಜನರೆಲ್ಲರೂ ಅವನ ಸೌಜನ್ಯವನ್ನು ನೋಡಿ ಅವನೇ ರಾಜ್ಯಸೂತ್ರವನ್ನು ತೆಗೆದುಕೊಳ್ಳುವಂತೆ ಪ್ರೋತ್ಸಾಹಿಸಿದರು. ಇಷ್ಟುಹೊತ್ತಿಗೆ ಬೈರಾಮನ ದುಷ್ಟತನವನ್ನು ಅಕಬರನು ಮನಗಂಡಿದ್ದನು. ಆದ್ದರಿಂದ ಈ ಸೂಚನೆಯು ಅವನ ಮನಸ್ಸಿಗೂ ಬಂತು. ಆಗ ಅವನು ರಾಜ್ಯದಾಡಳಿತವನ್ನು ತಾನೇ ನೋಡಿಕೊಳ್ಳುವೆನೆಂದೂ ನೀನು ಸ್ವಸ್ಥನಾಗಿ ಮಕ್ಕಾಯಾತ್ರೆಗೆ ತೆರಳ ಬಹುದೆಂದೂ ಆಗ್ರಾದಲ್ಲಿದ್ದ ಬೈರಾಮನಿಗೆ ಪತ್ರವನ್ನು ಬರೆದು ಕಳುಹಿ ಸಿದನು. ಅಕಬರನ ಹೃದಯದ ಕೆಚ್ಚು ಬೈರಾಮನಿಗೆ ಗೊತ್ತಿತ್ತು. ಆದ್ದರಿಂದ ಅವನು ಅದರಂತೆ ನಡೆಯಲೇಬೇಕಾಯಿತು.

## ರಾಜ್ಯಭಾರ

ಈ ರೀತಿಯಲ್ಲಿ ಅಕಬರನು ರಾಜ್ಯಭಾರವನ್ನು ತಲೆಯಮೇಲೆ ಹೊತ್ತಾಗ ಹದಿನೆಂಟುವರ್ಷದ ವಯಸ್ಸು. ಆಗ ಮೊಗಲರ ಬೆಳಕು ದಕ್ಷಿಣಹಿಂದುಸ್ಥಾನದ ಮೇಲೆಯೂ ಸಿಂಧುಪ್ರಾಂತದ ಮೇಲೆಯೂ ಬಿದ್ದು ಇರಲಿಲ್ಲ. ಅಲ್ಲಲ್ಲಿ ಆಳುತ್ತಿದ್ದ ಅಪಘನ ರಾಜರಕಣ್ಣೊ ಚಕ್ರವರ್ತಿಯ ಮೇಲೆ ಇತ್ತು. ಹಿಂದುಸ್ತಾನದ ಜನರ ನಾಡಿಯನ್ನು ನೋಡಿ ಅವರಿಗೆ ತಮ್ಮ ಮೇಲೆ ಪರಧರ್ಮದ ಆಳಿಕೆಯಿರುವದು ಒಗ್ಗುವದಿಲ್ಲವೆಂಬ ವಾಸನೆಯನ್ನು ಅವನು ಕಂಡು ಹಿಡಿದಿದ್ದನು. ಒಂದುಪಕ್ಷ ಬಾಹುಬಲದಿಂದ ಆಳುವದಾದರೂ ತನ್ನ ದೇಶದಿಂದ ದಂಡು ತರಿಸಿಕೊಳ್ಳುವ ಸೌಕರ್ಯವಿಲ್ಲದ್ದನ್ನೂ ಅವನು ಯೋಚಿಸದೆ ಬಿಡಲಿಲ್ಲ. ಹೀಗಾಗಿ ಅವನು ಹಿಂದುಗಳೊಡನೆ ಐಕ್ಯದಿಂದ ನಡೆಯು ವದೇ ರಾಜಮಾರ್ಗವೆಂಬದೊಂದು ಮೂಲ ಸೂತ್ರವನ್ನು ಗಟ್ಟಿಯಾಗಿ ಹಿಡಿದುಕೊಂಡು ಅದಕ್ಕನುಗುಣವಾದ ವರ್ತನಕ್ಕಾರಂಭಿಸಿದನು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅವನು ಹಗೆತನವನ್ನು ಪ್ರೇಮ ದಿಂದ ಗೆಲ್ಲುವ ಸಾಧುಮಾರ್ಗವನ್ನು ಹಿಡಿದ ರಾಜರ್ಷಿಯೆನ್ನಬಹುದು. ಹೀಗೆಂದು ಅವನು ಶಸ್ತ್ರಸನ್ಯಾಸಮಾಡಿ ಕುಳಿತುಕೊಳ್ಳಲಿಲ್ಲ. ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕುಪಾಯಗಳಲ್ಲಿ ಮೊದಮೊದಲನೆಯ

ದಕ್ಕೆ ಹೆಚ್ಚುಹೆಚ್ಚು ಪ್ರಾಶಸ್ತ್ಯವನ್ನು ಕೊಡುವವನಾದನು. ಎಲ್ಲ ಕಡೆಯಲ್ಲಿಯೂ ಶಸ್ತ್ರಮೂಲಕವಾದ ಉತ್ತರ ಪ್ರತ್ಯುತ್ತರಗಳೇ ತುಂಬಿದ್ದದರಿಂದ ಅಕಬರನೂ ಪರಿಸ್ಥಿತಿಗನುಸರಿಸಿ ಎಷ್ಟೋ ಕಡೆ ಕದನಕ್ಕೂ ಕೈಗೊಟ್ಟು ನಿಂತು ಬಾಹುಬಲದಿಂದ ಶತ್ರುಗಳನ್ನು ಬೆರಗು ಮಾಡಿ ಜಯಭೇರಿಯನ್ನು ಹೊಡೆಸುತ್ತಿದ್ದನು. ಹೀಗೆ ಎಷ್ಟೋ ರಾಜ್ಯಗಳು ಅಕಬರನ ಹಸ್ತರೇಖೆಯಲ್ಲಡಗಿದವು. ಆದರೂ ಹಿಂದುಸ್ಥಾನದಲ್ಲಿ ಅಕಬರನ ಯಶಸ್ಸನ್ನು ಹರಡಿದ ಶ್ಲಾಘನೆಯು ಅವನ ಯುದ್ಧಕಲೆಗಿಂತಲೂ ಜನತೆಯ ಮೇಲಿನ ಅವನ ಸೌಜನ್ಯಕ್ಕೇ ಹೆಚ್ಚು ಒಪ್ಪುವದು.

## ಕ್ಷಮಾಶೀಲತೆ

ತನ್ನ ಉಪಾಧ್ಯಾಯನಾಗಿದ್ದ ಬೈರಾಮನು ಆಗ್ರಾವನ್ನು ಬಿಟ್ಟು ಹೋಗುತ್ತ ದಾರಿಯಲ್ಲಿ ಕೆಲವರು ಪುಂಡರನ್ನು ಕಟ್ಟಿಕೊಂಡು ದಂಗೆಯನ್ನೆಬ್ಬಿಸಿ ತೋಳತೀಟಿಯನ್ನು ತೀರಿಸಿಕೊಳ್ಳುತ್ತಿರಲು, ಅವನ ಮದವನ್ನು ಇಳಿಸಬೇಕೆಂದು ಅಕಬರನು ಸೇನೆಯೊಡನೆ ಹೊರಟನು. ಈ ಸುದ್ದಿಯನ್ನು ಕೇಳಿಯೇ ಬೈರಾಮನು ಉಪಾಯಾಂತರವನ್ನರಿಯದೆ ತಾನಾಗಿಯೇ ಅಕಬರನ ಬಳಿಗೆ ಬಂದು ಕಣ್ಣೀರಿಡುತ್ತ ಶರಣು ಮಾಡಿದನು. ಬೈರಾಮನು ಮಾಡಿದ ಸಾಹಸಕಾರ್ಯಗಳನ್ನು ಅಕಬರನು ಮರೆತಿರಲಿಲ್ಲ. ಇದರ ಜೊತೆಗೆ ತನಗೆ ಉಪದೇಶಕನೂ ಆಗಿದ್ದ ಅವನು ತನ್ನ ಮುಂದೆ ಈ ರೀತಿ ದೈನ್ಯವನ್ನು ತೋರಿಸಿದ್ದನ್ನು ನೋಡಲಾರದೆ ಅವನ ಮನಸ್ಸು ಕರಗಿ ನೀರಾಗಿ ಹರಿಯಿತು. ಆಗ ಅವನು ಬೈರಾಮನನ್ನು ಅತ್ಯಾದರದಿಂದ ಸತ್ಕರಿಸಿ ಸ್ವಚ್ಛಂದದಿಂದ ಇದ್ದುಕೊಂಡಿರಲು ಸರ್ವ ಸೌಕರ್ಯಗಳನ್ನೂ ಕಲ್ಪಿಸಿಕೊಡುತ್ತೇನೆಂದು ಸಮಾಧಾನ ಮಾಡಿದನು. ಅಕಬರನ ಈ ಬಗೆಯ ಸರಳ ವರ್ತನದಿಂದ ಕುಟಿಲ ಹೃದಯನಾದ ಬೈರಾಮನಿಗೂ ಕೂಡ ನಿಜವಾದ ವೈರಾಗ್ಯವೃತ್ತಿಯುಂಟಾಗಿ ಆಗ ಅವನು ಮಕ್ಕಾಯಾತ್ರೆಯನ್ನೇ ತನ್ನ ಇಷ್ಟಾರ್ಥವಾಗಿ ಆರಿಸಿಕೊಂಡು ತನ್ನ ದಾರಿಯನ್ನು ಹಿಡಿದನು.

ಖಾನಜಮಾನನೆಂಬ ತನ್ನ ಒಬ್ಬ ಅಧಿಕಾರಿಯು ಕಾಲುಕೆರೆದು ಕದನಕ್ಕೆ ಬಂದ ಷೇರಶಹನನ್ನು ಸೋಲಿಸಿ ಅವನ ಸರ್ವಸ್ವವನ್ನೂ ಸುಲಿಗೆ ಮಾಡಿಕೊಂಡು ಅದನ್ನು ಅಕಬರನಿಗೆ ಮುಟ್ಟಿಸದೆ ಅದರಿಂದ ತನ್ನ ಪಾರುಪತ್ಯವನ್ನೇ ಬೆಳೆಸಿಕೊಳ್ಳುವ ಯೋಚನೆಯನ್ನು ನಡೆಸುತ್ತಿದ್ದು ಅಕಬರನು ಅಲ್ಲಿಗೆ ಬರುತ್ತಲೆ ನಿರುಪಾಯನಾಗಿ ಎಲ್ಲವನ್ನೂ ಅವನ ಮುಂದಿಟ್ಟನು. ಆ ಖಾನನ ಮನಸ್ಸಿಗೆ ಬಂದ ದುಷ್ಟ ಕಲ್ಪನೆಯು ಮನುಷ್ಯ ಸ್ವಭಾವದ್ದೆಂದು ಅಕಬರನು ಅವನನ್ನು ಕ್ಷಮಿಸಿ ಅದರ ಬಹುಭಾಗವನ್ನು ಅವನಿಗೇ ಕೊಟ್ಟುಬಿಟ್ಟನು. ಹೀಗೆ ಅವನು ಕ್ಷಮಿಸಿದ ಉದಾಹರಣೆಗಳು ಎಣಿಸಲಾಗದಷ್ಟಿರುವವು.

## ದುಷ್ಟಶಿಕ್ಷಣ

ಅಕಬರನು ಕ್ಷಮಾಶೀಲನೆಂದು ಇತರರು ತಪ್ಪು ಮಾಡುವ ದಕ್ಕಾಗುತ್ತಿರಲಿಲ್ಲ. ಕ್ಷಮೆಗೆ ಅನರ್ಹರೆಂದು ತಿಳಿದರೆ ಅಂಥ ಅನರ್ಹನಿಗೆ ಯಾವ ಬಗೆಯ ಚಿತ್ರಹಿಂಸೆಯನ್ನು ಮಾಡುವದಕ್ಕೂ ಅವನು ಹಿಂದು ಮುಂದು ನೋಡುತ್ತಿರಲಿಲ್ಲ. ಆದಂಖಾನನೆಂಬೊಬ್ಬ ದಳವಾಯಿಯು ಒಬ್ಬ ರಾಜನನ್ನು ಸೋಲಿಸಿ ಅವನ ರಾಣೀವಾಸದವರನ್ನೂ ಅಷ್ಟೈಶ್ವರ್ಯವನ್ನೂ ತನ್ನ ಉಪಭೋಗಕ್ಕಿಟ್ಟುಕೊಂಡು ಬಿಟ್ಟನು. ಇದನ್ನು ತಿಳಿದು ಅಕಬರನು ಅವನನ್ನು ಆಗ ಕೆಲಸದಿಂದ ತೆಗೆದುಹಾಕಿ ಮತ್ತೆ ಅವನಿಗೆ ಪಶ್ಚಾತ್ತಾಪವಾಗಿರಬಹುದೆಂದು ತಿಳಿದು ಮತ್ತೊಂದು ದೊಡ್ಡ ಅಧಿಕಾರವನ್ನು ಕೊಟ್ಟನು. ಆ ಮೇಲೆ ಒಂದು ದಿನ ಆದಮನು ಸಮಯವನ್ನು ಸಾಧಿಸಿಕೊಂಡಿದ್ದು ಅಕಬರನನ್ನು ಇರಿದೊರಗಿಸಬೇಕೆಂದು ಕಠಾರಿಯನ್ನು ಹಿಡಿದು ಕೆಂಗಣ್ಣನ್ನು ಬಿಟ್ಟುಕೊಂಡು ಅಕಬರನ ಮಲಗುವ ಮನೆಗೆ ಬಂದನು. ಅವನ ಭಯಂಕರವಾದ ಮುಖಮುದ್ರೆಯನ್ನು ನೋಡಿ ಕಾವಲಿಗರು ಬೆಚ್ಚಿಬಿದ್ದವರಾಗಿ ಬಾಗಿಲನ್ನು ಬಿಗಿಯಾಗಿ ಹಾಕಿದರು. ಈ ಸದ್ದಿನಿಂದ ಅಕಬರನು ಹೊರಗೆ ಬಂದು ಇದೇನೆಂದು ಕೇಳಲು ಆದಮನು ಕತ್ತಿಯನ್ನು ಹಿರಿದು ಝಳಪಿಸಿದನು. ಅಷ್ಟರಲ್ಲಿಯೇ ಅಕಬರನು ತನ್ನ ಮುಷ್ಟಿಯಿಂದ ಅವನ ಮುಖದ ಮೇಲೆ ಗುದ್ದಿ ಕೆಳಕ್ಕೆ ಕೆಡವಿದನು. ಆ ಹೊಡತಕ್ಕೆ ಆದಮ

ನಿಗೆ ಮೂರ್ಛೆ ಬಂತು. ಅವನನ್ನು ಮೂಟೆಯಾಗಿ ಕಟ್ಟಿ ಅರಮನೆಯ ಮೇಲಿನಿಂದ ಕೆಳಕ್ಕೆ ಎತ್ತಿಹಾಕಬೇಕೆಂದು ಅಕಬರನು ಆಳುಗಳಿಗೆ ಅಪ್ಪಣೆಯನ್ನಿತ್ತನು. ಆದಮನು ಅರಸುಮನೆತನದವನೇ ಆಗಿದುದರಿಂದ ಎತ್ತಿ ಅಪ್ಪಳಿಸುವದಕ್ಕೆ ಮನಸ್ಸೊಗ್ಗದೆ ಆಳುಗಳು ಅವನನ್ನು ಮೆಲ್ಲಗೆ ಇಳಿಯಬಿಟ್ಟರು ಅದನ್ನೊಪ್ಪದೆ ಅಕಬರನು ಮತ್ತೆ ಅವನನ್ನು ತಲೆಯೊಡೆದು ಚೂರುಚೂರಾಗುವಂತೆ ಅರಮನೆಯ ಮೇಲಿನಿಂದ ಕೆಳಕ್ಕೆ ಒಗೆಯಿಸಿಯೇ ಬಿಟ್ಟನು. ಹೀಗೆ ಅಕಬರನು "ಇದಂ ಬ್ರಾಹ್ಮ ಮಿದಂ ಕ್ಷಾತ್ರಂ" ಎಂಬಂತೆ ಕ್ಷಮೆಯಲ್ಲಿಯೂ ದುಷ್ಟಶಿಕ್ಷಣೆಯಲ್ಲಿಯೂ ತನ್ನ ಮೇಲುಗೈಯನ್ನೇ ತೋರಿಸಿಕೊಳ್ಳುತ್ತಿದ್ದನು.

ವಿವಾಹ ಸಂಬಂಧದಿಂದ ಬಂಧುತ್ವವನ್ನು ಬೆಳೆಸಿ ಎಲ್ಲರನ್ನೂ ತನ್ನವರನ್ನಾಗಿ ಮಾಡಿಕೊಂಡು ತನ್ನ ರಾಜ್ಯದ ನಿಶಾನೆಯನ್ನು ಅಲುಗಾಡದಂತೆ ಮಾಡಿಕೊಳ್ಳುವದೊಂದು ಅಕಬರನ ಉಪಾಯ. ಖಾನ್‌ದೇಶ ಮೊದಲಾದ ಕಡೆಯ ಮುಹಮ್ಮದೀಯ ಅರಸರೊಡನೆ ಇದನ್ನು ನಡೆಸಿದ್ದು ಅಷ್ಟೇನೂ ವಿಶೇಷವಲ್ಲ. ಹಿಂದುಗಳ ಒಲುಮೆಯನ್ನು ಸಂಪಾದಿಸಿಕೊಂಡು ಪ್ರೇಮಪೂರ್ವಕವಾಗಿಯೇ ಅವರೊಡನೆ ಸಂಬಂಧವನ್ನು ಬೆಳೆಸಿದ್ದೊಂದು ಇವನ ಇತಿಹಾಸದಲ್ಲಿ ಹೆಚ್ಚಿನ ಮಾತು. ಆ ಸಂಬಂಧವಾದರೂ ಯಾವ ಜನರು ಮುಹಮ್ಮದೀಯರಿಗೆ ಪ್ರಬಲಪ್ರತಿಪಕ್ಷಿಗಳಾಗಿ ಅವರ ಹೆಜ್ಜೆಹೆಜ್ಜೆಗೂ ನೆಗ್ಗಲಮುಳ್ಳಾಗಿ ಮುನ್ನೂರು ನಾನೂರು ವರ್ಷಗಳಿಂದ ಅವರಿಗೆ ಇಲ್ಲಿ ಕಾಲೂರಿ ನಿಲ್ಲುವದಕ್ಕೆ ಅವಕಾಶವನ್ನು ಕೊಡುತ್ತಿರಲಿಲ್ಲವೋ ಅಂಥ ಸ್ವಾಭಿಮಾನಿಗಳಾದ ರಾಜಪುತ್ರರನ್ನು ಅಕಬರನು ಬಲೆಗೆ ಹಾಕಿಕೊಂಡದ್ದು ಅವನ ರಾಜನೀತಿಜ್ಞತೆಯ ಪರಮಾವಧಿಯನ್ನು ವ್ಯಕ್ತಗೊಳಿಸುತ್ತದೆ. ಆಗಿನ ಕಾಲದಲ್ಲಿ ರಾಜಪುತ್ರರೇ ಶೂರಾಗ್ರೇಸರರಾಗಿದ್ದದರಿಂದ ಅವರನ್ನು ಬಗಲಲ್ಲಿ ಹಾಕಿಕೊಂಡರೆ ತನ್ನ ಅಧಿಕಾರಕ್ಕೆ ಪುಷ್ಟಿಬರುವದೆಂದು ಅಕಬರನು ಈ ಯುಕ್ತಿಯನ್ನು ಹುಡುಕಿ ತೆಗೆದದ್ದು ಅವನಿಗೆ ಒಳ್ಳೇ ಕಾರ್ಯಕಾರಿಯಾಯಿತು. ಮೊದಲು ಅಕಬರನು ಜೋಧಪುರದ ಮೇಲೆ ದಂಡನ್ನು ನಡೆಸಿದನು. ಅಕಬರನು ಗರ್ಭದಲ್ಲಿದ್ದಾಗ ಆ ಗರ್ಭಿಣಿಯನ್ನಿಟ್ಟುಕೊಳ್ಳುವದಕ್ಕೆ ಕೂಡ ಸಮ್ಮತಿ

ಸದೆ ಅಲ್ಲಿಯ ಅರಸನಾದ ಮಾಲದೇವನು ಹುಮಾಯೂನನನ್ನು ಕಡೆಗಂಡಿದ್ದನು. ಆ ರಾಜನಿಗೆ ಸೇರಿದ ಸುತ್ತುಮುತ್ತಲಿನ ಕೋಟೆಗಳನ್ನೆಲ್ಲಾ ಹಿಡಿದುಕೊಂಡು ಅಕಬರನು ರಾಜಪುತ್ರರಲ್ಲಿ ಭೇದವನ್ನು ಹುಟ್ಟಿಸುವ ಉದ್ದೇಶದಿಂದ ಆ ಕೋಟೆಗಳನ್ನೆಲ್ಲಾ ಅಲ್ಲಿನ ಅಧಿಕಾರಿಗಳಿಗೇ ಕೊಟ್ಟು ಅವರನ್ನು ಆಶ್ರಿತರನ್ನಾಗಿ ಮಾಡಿಕೊಂಡು ಹುರಿಯಾಗಿ ಜೋಧಪುರವನ್ನು ಮುತ್ತಿದನು. ಮಾಲದೇವನು ನಿರುಪಾಯನಾಗಿ ತನ್ನ ಹಿರಿಯ ಮಗನಾದ ಉದಯಸಿಂಗನೆಂಬುವವನನ್ನು ಅಕಬರನ ಆಶ್ರಿತನನ್ನಾಗಿ ಮಾಡಿ ದೇಹತ್ಯಾಗಮಾಡಿದನು. ಉದಯಸಿಂಗನು ತನ್ನ ತಂಗಿಯಾದ ಜೋಧಬಾಯಿಯನ್ನು ವಿವಾಹಪೂರ್ವಕವಾಗಿ ಅಕಬರನ ಉಪಭೋಗಕ್ಕೆ ಕೊಟ್ಟು ಅದರ ಪ್ರತಿಫಲವಾಗಿ ತಾನೊಬ್ಬ ದೊಡ್ಡ ರಾಜನೆನಿಸಿಕೊಂಡು ರಾಜಪುತ್ರರ ಪ್ರತಿಭೆಯ ಅವನತಿಗೆ ಅಂಕುರಾರ್ಪಣವನ್ನು ಮಾಡಿದನು. ಈ ಜೋಧಬಾಯಿಯೇ ಜಹಾಂಗೀರನೆಂಬ ಭವಿಷ್ಯಚ್ಚಕ್ರವರ್ತಿಯ ತಾಯಿ.

## ಜಯಪುರದ ಸಂಬಂಧ

ಇಲ್ಲಿನ ಅರಸರು ನಳದಮಯಂತಿಯರ ವಂಶದವರೆಂದು ಹೇಳಿಕೊಳ್ಳುತ್ತಾರೆ. ಆದರೆ ಅಕಬರನ ಕಾಲಕ್ಕೆ ಇವರಲ್ಲಿ ಆ ರಕ್ತಕಣಗಳು ಇಂಗಿಹೋಗಿದ್ದವೆಂದು ತೋರುತ್ತದೆ. ಏಕೆಂದರೆ ಅಕಬರನ ತಾತನಾದ ಬಾಬರನು ಬಂದಾಗಲೇ ಆ ಅರಸರು ಅವನಿಗೆ ಸಹಾಯ ಮಾಡಿ ಹುಮಾಯೂನನ ಕಾಲಕ್ಕೆ ದೊಡ್ಡ ಅಧಿಕಾರಕ್ಕೇ ಬಂದಿದ್ದು ಅಕಬರನ ಕಾಲದಲ್ಲಿ ಮೊಗಲರಲ್ಲಿ ಹೆಚ್ಚು ಬಳಕೆಯನ್ನು ಮಾಡಿ ಅಕಬರನ ಯಶಶ್ಚಂದ್ರಿಕೆಯನ್ನು ಹರಡುವ ಉದ್ಯೋಗವನ್ನು ಕೈಕೊಂಡವರಾಗಿದ್ದರು. ಜಯಪುರದ ರಾಜಾ ಭಗವಾನದಾಸನು ತನ್ನ ಮಗಳನ್ನು ಅಕಬರನ ಮಗನಾದ ಜಹಾಂಗೀರನ ಶರೀರಸಂಬಂಧದಿಂದ ಕೃತಾರ್ಥಳನ್ನಾಗಿ ಮಾಡಿದನು. ಮತ್ತು ತನ್ನ ಪೌರುಷದಿಂದ ಅನೇಕ ರಾಜರನ್ನು ಗೆದ್ದು ಅವರನ್ನೆಲ್ಲಾ ಮೊಗಲ ಸಿಂಹಾಸನಕ್ಕೆ ಅಡಿಯಾಳಾಗಿ ಮಾಡಿ ಅಕಬರನಿಂದ ನಗಾರಿಯನ್ನೂ ನಿಶಾನೆಯನ್ನೂ ಗೌರವಾರ್ಥವಾಗಿ ಪಡೆದನು. ಮೊಗಲರ ಶರೀರಚ್ಛಾಯೆಯನ್ನು ಅನುವರ್ತಿಸಿ

ರಾಜಪುತ್ರರನ್ನೆಲ್ಲಾ ಬಲಿಗೆ ಕೆಡವಿ ಮೊಗಲರಿಂದ ಭುಜವನ್ನು ಚಪ್ಪರಿಸಿಕೊಂಡವರಲ್ಲಿ ಈ ಭಗವಾನದಾಸನ ತಮ್ಮನ ಮಗನಾದ ರಾಜಾ ಮಾನಸಿಂಗನು ಅಗ್ರತಾಂಬೂಲವನ್ನು ಪಡೆಯತಕ್ಕವನು.

## ಗುಣಗ್ರಹಣ

ಅಕಬರನು ಸ್ವಾರ್ಥದಿಂದ ಕುರುಡು ಹಗೆತನವನ್ನೇ ಮಾಡುವವನಾಗದೆ ಶತ್ರುಗಳಲ್ಲಿಯೂ ಗುಣಗ್ರಹಣ ಮಾಡುವವನಾಗಿದ್ದನು. ರಾಜಪುತ್ರಸ್ಥಾನದಲ್ಲಿ ಚಿತ್ತೂರಿನದೊಂದು ಬಲವಾದ ಕೋಟೆ. ಅಕಬರನು ಅಲ್ಲಿಗೆ ದಂಡೆತ್ತಿ ಹೋದಾಗ ಹೇಡಿಯಾದ ಉದಯಸಿಂಗನೇನೋ ಎಡಗೈಯಲ್ಲಿ ಜೀವವನ್ನು ಹಿಡಿದುಕೊಂಡು ಓಡಿಹೋದನು. ಆದರೆ ಅಲ್ಲಿಯ ರಾಜಪುತ್ರರ ಸ್ವಾಭಿಮಾನಜ್ಯೋತಿಯು ಇನ್ನೂ ಜಾಜ್ವಲ್ಯಮಾನವಾಗಿ ಬೆಳಗುತ್ತಿತ್ತು. ಮೊಗಲರು ಕೋಟೆಯ ಒಂದು ಭಾಗವನ್ನು ನೆಲಸಮ ಮಾಡಿದರು. ಅಕಬರನಿಗೆ ಶರಣು ಹೋಗುವದರ ಹೊರತು ಬೇರೆ ಯಾವ ಸುರಕ್ಷಿತವಾದ ಉಪಾಯವೂ ರಾಜಪುತ್ರರಿಗೆ ಉಳಿದಿರಲಿಲ್ಲ. ಮೊಗಲರಿಗೆ ಶರಣುಹೋಗಿ ರಾಜಪುತ್ರ ವಂಶಕ್ಕೆ ಕಲಂಕವನ್ನು ತರುವದಕ್ಕಿಂತಲೂ ಎದೆಗೊಟ್ಟು ಸಾಯುವವರೆಗೂ ಕಾದುವದೇ ಧರ್ಮವೆಂದು ಗಂಡಸರೂ ಹೆಂಗಸರೂ ವೀರಾವೇಶಯುಕ್ತರಾಗಿ ಮುಂದೆ ಬಂದರು. ಊರ ಮುಂದೆ ರಕ್ತದ ಕಾಲುವೆ ಹರಿಯಿತು. ಕೊನೆಗೆ ಅಕಬರನು ಗುರಿಯಿಟ್ಟ ಗುಂಡು ರಾಜಪುತ್ರರ ನಾಯಕನಾದ ಜಯಮಲ್ಲನ ಪ್ರಾಣಗಳನ್ನು ಹೊರಗೆಡವಿತು. ಅಕಬರನು ಆ ತನ್ನ ತುಬಾಕಿಗೆ ಆಗ ಸಿಂಗಾರಾಮ ಎಂಬ ಬಿರುದನ್ನು ಕೊಟ್ಟು ತನ್ನ ಗುಣಕ್ಕೆ ತಾನು ಸಂತೋಷಬಟ್ಟದ್ದಲ್ಲದೆ ಚಿತ್ತೂರಲ್ಲಿ ಸರಿಜೋಡಿಯಾಗಿ ಕಾದಿದ ಜಯಮಲ್ಲ ಮತ್ತು ಪುಟ್ಟ ಎಂಬಿಬ್ಬರ ಕೆಚ್ಚೆದೆಗೆ ಮೆಚ್ಚಿ ಅವರ ಮೂರ್ತಿಗಳನ್ನು ತನ್ನರಮನೆಯ ಬಾಗಿಲಲ್ಲಿರಿಸಿಕೊಂಡನು. ರಣಮದೋನ್ಮತ್ತರಾದ ರಾಜಪುತ್ರರ ದೃಷ್ಟಿಯಿಂದ ಜಯಮಲ್ಲ ಪುಟ್ಟರಿಗೆ ದ್ವಾರಪ್ರದೇಶವು ಪ್ರಶಸ್ತವೆನಿಸದಿದ್ದರೂ ಅವರನ್ನು ಒಳ್ಳೇ ಉದಾಹರಣೆಯಾಗಿಟ್ಟುಕೊಂಡು ಶತ್ರುಗಳಲ್ಲಿಯೂ ಕೂಡ ಗುಣಗ್ರಹಣ ಮಾಡಿದ ಅಕಬರನ ದೃಷ್ಟಿಯಿಂದ ಅದು ಯೋಗ್ಯವಾಗಿ ಕಾಣುವದು.

## ಧರ್ಮದೃಷ್ಟಿ

ಯಾವ ಧರ್ಮದವರೂ ತಮ್ಮ ಮೇಲೆ ಪರಧರ್ಮದ ಅಧಿಕಾರವನ್ನು ಇಟಗೊಡಲಾರರೆಂಬ ರಹಸ್ಯವನ್ನು ಅಕಬರನು ತಿಳಿದಿದ್ದನು. ಆದ್ದರಿಂದ ಮುಹಮ್ಮದೀಯ ಧರ್ಮದ ತತ್ವಗಳನ್ನೇ ಮೇಲುಗೈಯಾಗಿ ಮಾಡಹೋಗದೆ ಹಿಂದುಸ್ಥಾನದ ಹಿಂದೂ ಧರ್ಮಕ್ಕೆ ಬೇಕಾದಷ್ಟು ಪ್ರಾಶಸ್ತ್ಯವನ್ನು ಕೊಟ್ಟನು. ಮಧುರೆಯಲ್ಲಿ ವೃಂದಾವನಕ್ಕೆ ಬರುತ್ತಿದ್ದ ಯಾತ್ರಿಕರ ಮೇಲೆ ಹಾಕಿದ್ದ ತೆರಿಗೆಯನ್ನೂ ಸಾಮಾನ್ಯವಾಗಿ ಹಿಂದುಗಳಿಗೆಲ್ಲಾ ಹಾಕಿದ್ದ ತಲೆತೆರಿಗೆಯನ್ನೂ ತಳ್ಳಿಹಾಕಿದನು. ತನಗೆ ಮಕ್ಕಳಾದದ್ದಕ್ಕೆ ಒಬ್ಬ ಸಾಧುವಿನ ಅನುಗ್ರಹವೇ ಕಾರಣವೆಂಬ ಶ್ರದ್ಧೆಯಿಂದ ಹಿರಿಯ ಮಗನು ಹುಟ್ಟಿದ ಮೇಲೆ ಆ ಸಾಧುವಿನ ದರ್ಶನಕ್ಕಾಗಿ ಕಾಲನಡಿಗೆಯಿಂದ ಇನ್ನೂರು ಮೈಲುಗಳು ಹೋಗಿ ಬಂದನು. ಯಾವ ಸಾಧುಸಂತರನ್ನು ಕಂಡರೂ ಯಥೋಚಿತವಾಗಿ ಸತ್ಕಾರಮಾಡಿ ಅವರಿಗೆ ಬೇಕುಬೇಕಾದ ಸೌಕರ್ಯಗಳನ್ನು ಕಲ್ಪಿಸಿಕೊಡುತ್ತಿದ್ದನು. ತನ್ನ ಮುಹಮ್ಮದೀಯ ಧರ್ಮವೇ ಸರ್ವಶ್ರೇಷ್ಠವೆಂದು ದುರಭಿಮಾನವನ್ನು ಹಿಡಿಯದೆ ಎಲ್ಲಾ ಧರ್ಮಗಳೂ ಗ್ರಾಹ್ಯಗಳೆಂದು ಸರ್ವ ಧರ್ಮರಹಸ್ಯಗಳನ್ನೂ ಸಂಗ್ರಹಿಸುತ್ತಿದ್ದನು. ಹಿಂದುಗಳ ಧರ್ಮತತ್ವವನ್ನೂ ಕೇಳಿ ಮನಸ್ಸು ಸೋತು ಮನೆಯಲ್ಲಿ ಅಗ್ನಿಯ ಮತ್ತು ಸೂರ್ಯನ ಉಪಾಸನೆಯನ್ನು ನಡೆಸುತ್ತಿದ್ದನು. ಮತ್ತು ಹಿಂದೂ ಧರ್ಮದಲ್ಲಿ ಹೆಚ್ಚಿನ ಸಹಾನುಭೂತಿಯುಳ್ಳವನಂತೆ ಕೆಲವು ಹಿಂದೂ ಪದ್ಧತಿಯ ಉಡುಪನ್ನು ಧರಿಸುತ್ತಿದ್ದನು. ಕ್ರೈಸ್ತ ಧರ್ಮತತ್ವಗಳನ್ನು ಕೂಡ ತಿಳಿದುಕೊಂಡು ಕ್ರಿಸ್ತರ ಗುಡಿಗೆ ಹೋದಾಗ ಅಲ್ಲಿಯೂ ನಮಸ್ಕಾರ ಮಾಡಿ ಸಂತೋಷ ಪ್ರದರ್ಶನ ಮಾಡುತ್ತಿದ್ದನು. ವಿದ್ಯಾರ್ಥಿಗಳಿಗೂ ಅಂಗಹೀನರಿಗೂ ಬಡವರಿಗೂ ಭಗವಚ್ಚಿಂತನೆಗಾಗಿ ವ್ಯವಹಾರವನ್ನು ಬಿಟ್ಟ ಯತಿಗಳಿಗೂ ಬೈರಾಗಿಗಳೇ ಮೊದಲಾದವರಿಗೂ ಗೃಹಸ್ಥರು ಅಗತ್ಯವಾಗಿ ಒತ್ತಾಸೆಯನ್ನು ಕೊಡತಕ್ಕದ್ದೆಂದು ಪ್ರೋತ್ಸಾಹಿಸಿದನು. ಹಿಂದುಸ್ಥಾನದವರು ಆಕಳುಗಳನ್ನು ಸಾಕ್ಷಾದ್ದೇವರೆಂದು ಭಾವಿಸುವದರಿಂದ ಅವುಗಳ ವಧೆಯು ಜನರ ಮನಸ್ಸನ್ನು ನೋಯಿಸುವದೆಂದು ಗೋವಧೆಯ ಹೆಸರಿಲ್ಲದಂತೆ ಮಾಡಿದನು. ತಾವಾಗಿ ಮುಂದುವರಿಯದ ಸ್ತ್ರೀಯ

ರನ್ನು ಸಹಗಮನಕ್ಕೆ ಬಲಾತ್ಕರಿಸಕೂಡದೆಂದು ಆಜ್ಞೆಮಾಡಿದನು. ಮದ್ಯಪಾನವು ಮನುಷ್ಯನ ಸ್ಥಿತಿಗತಿಯನ್ನು ರೂಪಾಂತರ ಮಾಡಿ ಧರ್ಮದೃಷ್ಟಿಯ ಮೇಲೆ ಪರೆಯನ್ನು ಬೆಳೆಸುವದರಿಂದ ದೇಶದಲ್ಲಿ ಅದರ ವಾಸನೆಯು ಇರಕೂಡದೆಂದು ವಿಧಿಸಿದನು. ಅದರಂತೆ ಮಾಂಸಾಹಾರ ವನ್ನು ಕೂಡ ನಿಷೇಧಿಸಿದನು. ಹಿಂದೂ ರಾಣಿಗಳೊಡನೆ ಹವನ ಹೋಮಗಳನ್ನು ಕೂಡ ಮಾಡುತ್ತಿದ್ದನು. ತನಗೆ ರುಚಿಗಂಡ ಧರ್ಮ ತತ್ವಗಳನ್ನೆಲ್ಲಾ ಕೂಡಿಸಿ ತನ್ನದೊಂದು ಹೊಸಮತವನ್ನೇ ತೆಗೆದನು. ಆ ಧರ್ಮಕ್ಕೆ ಸೇರಿದವರು "ಅಲ್ಲಾಹು ಅಕಬರ" ಎನ್ನುವವರು—ಅಂದರೆ ದೇವರು ದೊಡ್ಡವನೆಂದೊಂದರ್ಥ; ಅಕ್ಬರ ದೊಡ್ಡವನೆಂದು ಮತ್ತೊಂದರ್ಥ. ನಿಜವಾಗಿಯೂ ಅವನ ಹೃದಯದಲ್ಲಿ ದೇವತ್ವವೂ ಅಷ್ಟು ಬೇರು ಬಿಟ್ಟುಕೊಂಡಿತ್ತು. ಶಕುನಗಳಲ್ಲಿಯೂ ಜೋಗಿಗಳ ಕಣಿ ಗಳಲ್ಲಿಯೂ ಕೂಡ ಅವನ ವಿಶ್ವಾಸವಿತ್ತು. ಭಗವದ್ಭಕ್ತಿಯು ಅವನಲ್ಲಿ ಇಷ್ಟು ಜಾಗರೂಕವಾಗಿದ್ದದರಿಂದ ಅವನು ತಾನು ಧಿಟ್ಟತನದಿಂದ ಸಿಂಹಾಸನವನ್ನು ಹತ್ತಿ ಅಟ್ಟಹಾಸದಿಂದ ಮೆರೆಯದೆ ಅದರ ಮೇಲೆ ಭಗವಂತನು ಪಟ್ಟಾಭಿಷಿಕ್ತನಾಗಿರುವನೆಂದು ಭಾವಿಸಿ ತಾನು ಒಂದು ಪಕ್ಕದಲ್ಲಿ ನಿಂತು ಪರಿಚಾರಕನಂತೆ ವರ್ತಿಸುತ್ತಿದ್ದನು.

## ನಡೆನುಡಿ

ಇವನು ಚಿಕ್ಕಂದಿನಲ್ಲಿ ಓದುಬರಹಗಳನ್ನು ಕಲಿತವನಲ್ಲವಾದ್ದ ರಿಂದ ಅಕ್ಷರವಿದ್ಯೆಯ ಸಂಸ್ಕಾರವು ಇವನ ಮನಸ್ಸಿನ ಮೇಲೆ ಅಷ್ಟು ಹೆಚ್ಚಾಗಿ ಆಗಲಿಲ್ಲವೆಂದು ಹೇಳಬೇಕಾದರೂ ಇವುಗಳನ್ನು ಓದಿಸಿ ಕೇಳು ವದರಲ್ಲಿ ಬಹು ಅಭಿರುಚಿಯುಳ್ಳವನಾಗಿದ್ದದರಿಂದ ವಿಚಾರದಿಂದ ಅನೇಕ ವಿಷಯಗಳನ್ನು ಸಂಗ್ರಹ ಮಾಡಿದವನಾಗಿದ್ದನು. ಇವನ ಆಸ್ಥಾನದಲ್ಲಿ ಬೇರೆಬೇರೆ ಭಾಷೆಗಳ ಅನೇಕ ವಿದ್ವಾಂಸರೂ ಗಾಯಕರೂ ಕವಿಗಳೂ ಇದ್ದರು. ಇವನ ವ್ಯವಹಾರದಲ್ಲಿ ಮಹಮ್ಮದೀಯರಿಗಿಂತ ಹಿಂದುಗಳಿಗೇ ಹೆಚ್ಚು ಪ್ರಾಶಸ್ತ್ಯವಿತ್ತೆಂದರೂ ಒಪ್ಪುತ್ತದೆ. ಗಾಯಕನೂ ಕವಿಯೂ ಕಥಾಭಿಜ್ಞನೂ ಧೂರ್ತನೂ ಆದ ಬೀರಬಲ್ಲನೆಂಬ ದೇಶಸ್ಥ ಬ್ರಾಹ್ಮಣನು ಅಕ್ಬರನಿಗೆ ಅತ್ಯಂತ ಪ್ರೀತಿಪಾತ್ರನಾದ ದಳವಾಯಿಯಾಗಿ

ದ್ದನು. ತಾನು ಯಾವಾಗಲಾದರೂ ಒಂದು ಅವಿವೇಕದ ಅಪ್ಪಣೆಯನ್ನು ಮಾಡಿದರೆ ಅದನ್ನು ಕೈಕೆಳಗಿನವರು ನಡೆಸದಿದ್ದರೂ ಅಕ್ಬರನು ಆ ದುರಾಗ್ರಹವನ್ನು ಹಿಡಿಯುತ್ತಿರಲಿಲ್ಲ. ನಿಷ್ಪಕ್ಷಪಾತತೆಯ ಕಡೆಗೆ ಅವನ ಲಕ್ಷ್ಯ ಹೆಚ್ಚು. ಸ್ವಭಾವವಾಗಿ ದಯಾಳುವಾದ್ದರಿಂದ ಅವನು ವಿಚಾರವಿಲ್ಲದೆ ಪ್ರಾಣಹತ್ಯವನ್ನು ಮಾಡುತ್ತಿರಲಿಲ್ಲ. ಅಪ್ಪ ಹಾಕಿದ ಆಲದಮರವೆಂದು ನೇಣು ಹಾಕಿಕೊಳ್ಳುವವನಾಗದೆ ಇದು ಉಷ್ಣದೇಶವಾದ್ದರಿಂದ ಗಡ್ಡವು ಅನವಶ್ಯಕವೆಂದು ಅವನು ಅದನ್ನು ತೆಗೆಸಿಹಾಕಿದನು. ಆಟನೋಟಗಳಲ್ಲಿ ಇವನಿಗೆ ಒಳ್ಳೇ ಅಕ್ಕರೆಯಿತ್ತು.

## ಜನರ ಮನಸ್ಸನ್ನೊಲಿಸಿಕೊಂಡದ್ದು

ಲೋಕದಲ್ಲಿ ಶರೀರವನ್ನು ಬಗ್ಗಿಸಿದವರು ಬಹುಮಂದಿ ಇದ್ದಾರೆ; ಮನಸ್ಸನ್ನು ಬಗ್ಗಿಸಿದವರು ಬಹುಕಡಿಮೆ. ಅಕ್ಬರನು ಜನರ ಮನಸ್ಸನ್ನು ತನ್ನ ಕಡೆಗೆ ಬಗ್ಗಿಸಿಕೊಂಡ ಮಹಾನುಭಾವನು. ಅರಸನಿಗಾಗಿ ಪ್ರಜೆಗಳೆಂಬ ಭಾವನೆಯನ್ನು ತಂದುಕೊಳ್ಳದೆ ಪ್ರಜೆಗಳಿಗಾಗಿ ಅರಸನೆಂಬ ಮೂಲಸೂತ್ರವನ್ನಿಟ್ಟುಕೊಂಡದ್ದೇ ಅವನ ಈ ಯಶಸ್ಸಿಗೆ ಕಾರಣವಾಯಿತು. ಪ್ರಜೆಗಳ ಮನಸ್ಸು ನೋಯದಂತೆ ಅವನು ಸರ್ವಸನ್ನಾಹವನ್ನೂ ಮಾಡುತ್ತಿದ್ದನು. ತನ್ನ ಯುದ್ಧಯಾತ್ರೆಯಲ್ಲಿ ಅಲ್ಲಲ್ಲಿ ದಂಡು ಬೀಡುಬಿಟ್ಟಕಡೆ ಜನರಿಗೆ ಏನಾದರೂ ನಷ್ಟವಾಗಿರುವದೆಂದು ಕಂಡರೆ ಆ ನಷ್ಟವನ್ನು ಜನರಿಗೆ ಕೂಡಿಸಿಕೊಡುತ್ತಿದ್ದನು. ಹೊಸದಾಗಿ ಜಯಧ್ವಜಗಳನ್ನು ನೆಟ್ಟಕಡೆಯಲ್ಲಿ ಚಿತ್ತೂರೊಂದರ ಹೊರತು ಉಳಿದ ಕಡೆ ದಂಡಿನವರು ಕೊಳ್ಳೇ ಹೊಡೆಯುವದಕ್ಕೆ ಅವಕಾಶವನ್ನು ಕೊಡುತ್ತಿರಲಿಲ್ಲ. ಕೈಸೋತ ರಾಜರ ಮೇಲೆ ಅನಾದರವನ್ನು ತೋರಿಸದೆ ಅವರನ್ನು ಗೌರವದಿಂದ ಕಾಣುತ್ತಿದ್ದನು. ದಂಡೋಪಾಯಕ್ಕಿಂತ ಸಾಮೋಪಾಯವೇ ಶ್ರೇಷ್ಠವೆಂದು ಬೂಂದಿಯ ರಾಜಪುತ್ರರೊಡನೆ ಅವರು ಕೇಳಿಕೇಳಿದ ನಿಯಮಗಳಿಗೊಳಪಟ್ಟು — ಸ್ವಪ್ರತಿಷ್ಠೆಯನ್ನೇ ಮುಖ್ಯವಾಗಿಟ್ಟುಕೊಳ್ಳದೆ–ಸಂಧಿಯನ್ನು ಮಾಡಿಕೊಂಡನು. ರಾಜ್ಯಗಳನ್ನು ಒಂದರಮೇಲೊಂದು ಗುಡ್ಡೇ ಹಾಕುವದೊಂದರಲ್ಲಿಯೇ ಕಾಲವನ್ನು ಕಳೆಯದೆ ಅವುಗಳ ಸುವ್ಯವಸ್ಥೆಗಾಗಿ ಕೈಲಾದಷ್ಟು ಹೆಣ

ಗುತ್ತಿದ್ದನು. ಯುರೋಪಖಂಡದ ನಾಣ್ಯಗಳಿಗಿಂತಲೂ ತೂಕ ದಲ್ಲಿಯೂ ಆಕಾರದಲ್ಲಿಯೂ ಶುದ್ಧತೆಯಲ್ಲಿಯೂ ಮೇಲಾದ ನಾಣ್ಯ ಗಳನ್ನು ಪ್ರಚಾರಕ್ಕೆ ತಂದನು. ಒಳನಾಡಿನ ಸುಂಕಗಳನ್ನೆಲ್ಲಾ ತೆಗೆದು ಹಾಕಿದನು. ಭೂವ್ಯವಸಾಯಕ್ಕೆ ಹೆಚ್ಚು ಪ್ರೋತ್ಸಾಹವನ್ನು ಕೊಡು ತ್ತಿದ್ದನು. ಜನರ ತೆರಿಗೆಯು ಅವರ ಆದಾಯಕ್ಕೆ ತಕ್ಕಂತೆ ಮಾತ್ರ ಇರುವಂತೆ ಮಾಡಿದನು. ಈ ಕಾರಣಗಳಿಂದ ಜನರು ಅಕ್ಬರನೆಂದರೆ ನಿಜವಾದ ದೇವರೆಂದು ತಾವಾಗಿಯೇ ಭಾವಿಸುವ ಹಾಗಾಯಿತು.

## ಅಂತ್ಯಕಾಲ

ಅಕ್ಬರನಿಗೆ ಸಂತತಿಯ ಸಮೃದ್ಧಿಯಿದ್ದರೂ ಸಂತತಿಯ ಸುಖದ ಸಮೃದ್ಧಿ ಇರಲಿಲ್ಲ. ಅವನ ಮಕ್ಕಳೆಲ್ಲರೂ ಹೆಸರುವಾಸಿಯಾದ ಕುಡುಕ ರಾಗಿದ್ದರು. ಅಕ್ಬರನು ಬದುಕಿರುವಾಗಲೇ ಅವನ ಹಿರೀಮಗನಾದ ಜಹಾಂಗೀರನು ಪಟ್ಟಕ್ಕೆ ಬರಬೇಕೆಂದು ಒಳಸಂಚನ್ನು ನಡೆಸಿದನು. ಇದರ ಗುಟ್ಟನ್ನು ಬಚ್ಚಿಡಹೇಳಿ ಅಕ್ಬರನು ಮಗನಿಗೆ ಪತ್ರವನ್ನು ಬರೆ ದನು. ಅಕಬರನ ಮುಂದೆ ಜಹಾಂಗೀರನ ಕೈಸಾಗದೆಂದೂ ಅಕ್ಬರನ್ನು ಮಗನೆಂದು ಹಿಂದುಮುಂದು ನೋಡದೆ ದುರಾಲೋಚನೆ ಮಾಡಿದವ ನನ್ನು ಕೊನೆಗೆ ಕೊಲ್ಲುವದಕ್ಕೂ ಹೇಸುವವನಲ್ಲವೆಂದೂ ತಿಳಿದು ರಾಣಿ ವಾಸದವರು ಅವನ ಜೀವವನ್ನುಳಿಸಿಕೊಳ್ಳುವದಕ್ಕಾಗಿ ಅವನು ಶರಣು ಬರುವಂತೆ ಸರ್ವಸಾಹಸವನ್ನೂ ಮಾಡಿದರು, ಅದರಂತೆ ನಡೆಯಿತು. ಆ ಮೇಲೆ ದಿನದಿನಕ್ಕೆ ಅವನ ಆರೋಗ್ಯಸ್ಥಿತಿಯು ಕ್ಷೀಣಿಸುತ್ತ ಬಂತು. ೧೬೦೫ ರಲ್ಲಿ ಅಕ್ಬರನು ದಿವಂಗತನಾದನು. ಇತಿಹಾಸಕಾರರು ಅಕಬರನ ಕೆಲವು ದೋಷಗಳನ್ನು ಉದ್ಘಾಟಿಸುವರು. ಮನುಷ್ಯತ್ವದಲ್ಲಿ ದೋಷ ಗಳೇ ಇಲ್ಲವೆಂದು ಹೇಳುವದಕ್ಕೆ ಬರುವದಿಲ್ಲ. ಆದರೆ ಪೂರ್ಣಚಂದ್ರನ ಶಾಂತವಾದ ಕಿರಣಗಳ ಪ್ರಭೆಯು ಅದರ ನಡುವೆ ಇರುವ ಕಲೆಯ ವಿಚಾರವನ್ನು ಮರೆಸುವಂತೆ ಅಕ್ಬರನ ಗುಣಾತಿಶಯಗಳು ಆ ದೋಷ ಗಳನ್ನು ಮೂಲೆಗೊತ್ತಿ ಮುಚ್ಚಿಡುವಷ್ಟು ಮುಂದಾಗಿರುವವು.

---

# ಏಕನಾಥ

## ಪೀಠಿಕೆ

ಬ್ರಾಹ್ಮಣತ್ವವು ಸಮಸ್ತವರ್ಣಗಳಲ್ಲಿಯೂ ಮೇಲಿನದೆಂತಲೂ ಅದರ ಉನ್ನತಿಯಿಂದ ಲೋಕಕ್ಕೆ ಉನ್ನತಿಯೂ ಅದರ ಅವನತಿಯಿಂದ ಲೋಕಕ್ಕೆ ಅವನತಿಯೂ ಆಗುವದೆಂತಲೂ ಶಾಸ್ತ್ರಗಳಲ್ಲಿ ಅಲ್ಲಲ್ಲಿ ಕಂಡು ಬರುವದು. ವಾಡಿಕೆಯಲ್ಲಿಯೂ ಬ್ರಾಹ್ಮಣತ್ವಕ್ಕೆ ಅನಾದಿಕಾಲದಿಂದ ಹೇಗೋ ಒಂದು ಬಗೆಯ ಪ್ರತಿಷ್ಠೆಯು ಬಂದು ನೆಲೆಗೊಂಡಿರುವದು. ಆದ್ದರಿಂದ ಬ್ರಾಹಣತ್ವಕ್ಕೆ ಇಷ್ಟೇಕೆ ಮಹತ್ವವೆಂಬುದು ನಿಜವಾಗಿ ವಿಚಾರಾಸ್ಪದವಾದ ವಿಷಯವಾಗಿದೆ. ಬ್ರಾಹ್ಮಣನ ನಡೆನುಡಿಗಳು ಹೇಗಿರಬೇಕೆಂಬ ವಿಷಯವಲ್ಲಿ ಶಾಸ್ತ್ರಗಳು ಬೇಕಾದಷ್ಟು ಹೇಳುತ್ತವೆ. ಆದರೆ ಅವರಂತೆ ನಡೆದು ಬ್ರಾಹ್ಮಣತ್ವವನ್ನು ಮೈದುಂಬಿಸಿಕೊಂಡಿರುವ ಉದಾಹರಣೆಗಳು ಬೇಕಾದರೆ ಈಗ ಬಹಳ ಹುಡುಕಬೇಕಾಗುತ್ತದೆ. ಇಂಥ ಉದಾಹರಣೆಗಳನ್ನು ಒದಗಿಸಿಕೊಡತಕ್ಕದ್ದು. ಪರಮೇಶ್ವರನ ಮೇಲೆ ಬಿದ್ದಭಾರ. ಪರಮ ಕಾರುಣಿಕನಾದ ಪರಮೇಶ್ವರನು ಕ್ರಿ. ಹದಿನಾರನೇ ಶತಮಾನದಲ್ಲಿ ನಮ್ಮ ಮುಂದೊಂದು ಪ್ರಬಲವಾದ ಉದಾಹರಣೆಯನ್ನಿಟ್ಟಿರುವನು. ಅದನ್ನು ನಾವು ಇಲ್ಲಿ ನೆನಪಿಗೆ ತಂದು ಕೊಡುವೆವು.

## ಏಕನಾಥನ ಬಾಲ್ಯ

ಗೋದಾವರೀ ತೀರದಲ್ಲಿರುವ ಪೈಠಣವೆಂಬ ನಗರದಲ್ಲಿ ಸೂರ್ಯ ನಾರಾಯಣನೆಂಬ ಸದ್ವಂಶೀಯನಾದ ಬ್ರಾಹ್ಮಣನಿದ್ದನು. ಆತನಿಗೆ ಕ್ರಿ. ೧೫೪೮ರಲ್ಲಿ ಒಬ್ಬ ಸತ್ಪುತ್ರನು ಹುಟ್ಟಿದನು. ಆ ಶಿಶುವಿನ ಹೆಸರು ಏಕನಾಥನು. ಏಕನಾಥನ ಭಾವೀ ಕಲ್ಯಾಣವನ್ನು ನೋಡುವ ಸುಯೋಗವಿಲ್ಲದೆ ಅವನ ತಂದೆತಾಯಿಗಳು ಚಿಕ್ಕಂದಿನಲ್ಲಿಯೇ ಲೋಕಾಂತರವನ್ನೈದಿದರು. ಏಕನಾಥನು ತನ್ನ ಅಜ್ಜನ ಮತ್ತು

ಅಜ್ಜಿಯ ಪೋಷಣೆಯಲ್ಲಿಯೇ ಬೆಳೆಯಬೇಕಾಯಿತು. ಮೊಮ್ಮಗನ ಮೇಲೆ ಪ್ರೀತಿಯನ್ನು ಮಾಡುವದು ಆ ಅಜ್ಜನಿಗೆ ಸ್ವಭಾವವಾಗಿಯೇ ಇತ್ತು. ಇದರ ಜೊತೆಗೆ ಏಕನಾಥನು ಶಾಂತಮೂರ್ತಿಯಾಗಿ ಮುದ್ದಿನ ಮುದ್ದೆಯಾಗಿದ್ದದ್ದು ಅಜ್ಜನ ಪ್ರೇಮಕ್ಕೆ ಇನ್ನೂ ಹೆಚ್ಚು ಒತ್ತಾಸೆಯನ್ನು ಕೊಟ್ಟಿತು. ಏಕನಾಥನ ನಡವಳಿಕೆಯು ಹುಟ್ಟಿದಂದಿನಿಂದಲೂ ವಿಲಕ್ಷಣ ವಾಗಿಯೇ ಕಾಣುವದಕ್ಕಾರಂಭವಾಯಿತು. ಹುಡುಗರೆಲ್ಲರೂ ಬಗೆ ಬಗೆಯ ಆಟಗಳಲ್ಲಿ ಮಗ್ನರಾಗುತ್ತಿರುವಾಗ ಏಕನಾಥನು ನದಿಯಿಂದ ದುಂಡಾದ ಕಲ್ಲುಗಳನ್ನು ತಂದು ದೇವರೆಂದು ಭಾವಿಸಿ ಆಟವಾಡು ತ್ತಿದ್ದನು. ತನಗೇನಾದರೂ ವಿರುದ್ಧ ಪರಿಸ್ಥಿತಿಗಳು ಉಂಟಾದಾಗ ಏಕ ನಾಥನು ತೋರಿಸುತ್ತಿದ್ದ ಸಹನಶೀಲತೆಯು ವಿಶೇಷ ಪ್ರಕಾರದ್ದಾಗಿ ರುತ್ತಿತ್ತು. ಅಜ್ಜನು ಮೊಮ್ಮಗನಿಗೆ ಅಕ್ಷರಾಭ್ಯಾಸವನ್ನಾರಂಭಿಸಿದನು. ತೀವ್ರ ಬುದ್ಧಿಯವನಾದ ಏಕನಾಥನು ಲೀಲಾಮಾತ್ರದಿಂದ ಓದು ಬರಹಗಳಲ್ಲಿ ಪಾರಂಗತನಾದನು. ಇಂಥ ಹುಡುಗರಿಗೆ ಕ್ಷಿಪ್ರದಲ್ಲಿಯೇ ವೇದವಿದ್ಯೆಯನ್ನು ಕಲಿಸಬೇಕೆಂದು ಅಜ್ಜನು ಮೊಮ್ಮಗನಿಗೆ ಆರನೆಯ ವರ್ಷದಲ್ಲಿಯೇ ಮುಂಜಿಯನ್ನು ಮಾಡಿದನು. ಸ್ವಲ್ಪ ದಿವಸಗಳಲ್ಲಿಯೇ ವೇದವಿದ್ಯಾಭ್ಯಾಸವು ನೀರು ಕುಡಿದಂತೆ ಜೀರ್ಣವಾಯಿತು. ಕಾಡು ಕಲ್ಲುಗಳನ್ನಿಟ್ಟುಕೊಂಡು ಆಟಕ್ಕಾಗಿ ಪೂಜೆಮಾಡುತ್ತಿದ್ದ ಏಕನಾಥನು ಈಗ ಪ್ರಾಣಪ್ರತಿಷ್ಠೆಯಾದ ವಿಗ್ರಹಗಳನ್ನು ವೇದೋಕ್ತವಾಗಿ ಪೂಜೆ ಮಾಡಲುದ್ಯುಕ್ತನಾದನು. ಎಲ್ಲಿಯಾದರೂ ಕೀರ್ತನವಾಗಲಿ, ಪುರಾಣ ವಾಗಲಿ, ವೇದಾಂತ ವಿಚಾರವಾಗಲಿ ನಡೆಯುತ್ತಿತ್ತೆಂದರೆ ಅದರ ವಾಸನೆಯನ್ನು ಹಿಡಿದುಕೊಂಡು ಹೋಗಿ ಆ ಉಪದೇಶಗಳ ಪ್ರತ್ಯಕ್ಷರ ಗಳನ್ನೂ ಗ್ರಹಿಸುತ್ತಿದ್ದನು. ಅಷ್ಟೇ ಅಲ್ಲ; ಅಲ್ಲಿ ಅವನು ಮಹಾ ಮಹಾ ದಿಗ್ದಂತಿ ಪಂಡಿತರು ಕೂಡ ಸಮಾಧಾನವನ್ನು ಹೇಳಲಾರದೆ ಕಣ್ಣು ಕಣ್ಣು ಬಿಡುವ ಹಾಗೆ ಆಗುವಂಥ ಶಂಕೆಗಳನ್ನು ತೆಗೆಯುತ್ತಿದ್ದನು. ಯಾರೇನೆಂದರೂ ಸಿಟ್ಟುಗೊಳ್ಳದೆ ಅಸಾಧಾರಣವಾದ ಸಮಾಧಾನ ಗುಣದಿಂದ ಏಕನಾಥನು ವಿದ್ಯಾರ್ಜನೆಯನ್ನು ಮಾಡುತ್ತಿದ್ದದರಿಂದ ಆ ಅಜ್ಜನಿಗೂ ಅಜ್ಜಿಗೂ ಆದ ಸಂತೋಷವು ಹೊಟ್ಟೆಹಿಡಿಸಲಾರದಷ್ಟು ಆಯಿತು. ಏಕನಾಥನು ತಾನು ಕಥಾಶ್ರವಣ ಮಾಡುವ ಮಾತ್ರದಿಂದ

ಕೃತಾರ್ಥನಾದೆನೆಂದು ಭಾವಿಸದೆ ಆಗಾಗ ಊರಹೊರಗಿನ ಒಂದು ದೇವಾಲಯಕ್ಕೆ ಹೋಗಿ ಕುಳಿತು ಆ ತತ್ವಾರ್ಥವನ್ನು ತನ್ನ ಮನಸಿನಲ್ಲಿಯೇ ಮನನಮಾಡುತ್ತಿದ್ದನು. ಹೀಗೆ ಮಾಡುತ್ತ ಮಾಡುತ್ತ ತಾನು ಏನಾದರೂ ಮಾಡಿ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಳ್ಳಬೇಕೆಂಬ ಬಹು ಪ್ರಬಲವಾದ ಇಚ್ಛೆಯುಂಟಾಯಿತು. ಈ ಸಮಯದಲ್ಲಿ ಒಬ್ಬ ಪುರಾಣಿಕನು ಜನಾರ್ದನಪಂತರೆಂಬ ಜ್ಞಾನಿಗಳ ವಿಚಾರವನ್ನು ಏಕನಾಥನ ಕಿವಿಯ ಮೇಲೆ ಹಾಕಿದನು. ಅಂದಿನಿಂದ ಜನಾರ್ದನಪಂತರ ಬಳಿಗೆ ಹೋಗಬೇಕೆಂದು ಏಕನಾಥನ ಮನಸ್ಸಿನಲ್ಲಿ ಎಡೆಬಿಡದೆ ಕಡೆಯುವದಕ್ಕಾರಂಭವಾಯಿತು. ಮನಸ್ಸಿನಲ್ಲಿ ಎಷ್ಟೋ ಗುಣಾಕಾರಗಳನ್ನು ಹಾಕಿ ನೋಡಿ ಏಕನಾಥನು ಕೊನೆಗೆ ಒಂದು ದಿನ ಬೆಳಗಾಗುತ್ತಲೆ ಯಾರಿಗೂ ತಿಳಿಸದೆ ಪೈಠಣವನ್ನು ಬಿಟ್ಟು ಕಾಲಿಗೆ ಬುದ್ಧಿಯನ್ನು ಹೇಳಬೇಕೆಂದು ನಿಶ್ಚಯಮಾಡಿದನು. ಅಷ್ಟು ಮುದ್ದಿನಿಂದ ಸಾಕಿದ ಅಜ್ಜನಿಗೂ ಅಜ್ಜಿಗೂ ಹೇಳದೆ ಅವರ ಮನಸ್ಸು ನೋಯುವಂತೆ ತಾನು ಆ ಕೆಲಸವನ್ನು ಮಾಡುವದು ಸರಿಯಲ್ಲವೆಂದು ಏಕನಾಥನ ಮನಸ್ಸು ತಳಮಳಿಸಿತು. ಆದರೆ ಅವನ ಕಣ್ಣುಮುಂದೆ ಭಗವತ್ಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ಒಂದೇ ಒಂದು ಇಚ್ಛೆಯೇ ಉಳಿದು ಉಳಿದವುಗಳೆಲ್ಲಾ ದಿಕ್ಕಿಗೊಂದೊಂದಾಗಿ ಗಾಳಿಗೆ ಹಾರಿಹೋದ್ದರಿಂದ ಒಂದು ದಿನ ಅವನು ತನ್ನ ಸಂಕಲ್ಪವನ್ನು ಸಾಧಿಸಿಯೇ ಬಿಟ್ಟನು. ಈ ರೀತಿಯಲ್ಲಿ ಏಕನಾಥನು ಬ್ರಾಹ್ಮಣತ್ವದ ಮುಖ್ಯ ಲಕ್ಷಣವನ್ನು ಇತರರಿಗೆ ಉದಾಹರಣೆಯಾಗಿ ತೋರಿಸಿದನು.

## ಜನಾರ್ದನಪಂತರನ್ನು ಸೇರಿದ್ದು

ಜನಾರ್ದನಪಂತರು ಶ್ರೀ ಶಂಕರಾಚಾರ್ಯರ ಅನುಯಾಯಿಗಳಾಗಿ ಗಾಣಗಾಪುರದ ಶ್ರೀ ನರಸಿಂಹಸರಸ್ವತಿಗಳ ಪಟ್ಟಶಿಷ್ಯರಾಗಿ ಒಳ್ಳೇ ಬ್ರಹ್ಮಜ್ಞಾನಿಗಳೆಂದು ಹೆಸರಾಗಿದ್ದರೂ ದೇವಗಡದಲ್ಲಿ ಯವನರಾಜನ ಕೈಕೆಳಗೆ ಮುಖ್ಯಾಧಿಕಾರವನ್ನು ಪಡೆದಿದ್ದರು. ಹೀಗಿದ್ದರೂ ತಮ್ಮ ವರ್ಚಸ್ಸನ್ನು ಕಾದುಕೊಂಡು ತಮ್ಮ ದತ್ತೋಪಾಸನೆಯ ದೆಸೆ

ಯಿಂದ ದೇಶವಲ್ಲೆಲ್ಲಾ ಗುರುವಾರವು ವಿರಾಮದಿನವಾಗಿರುವಂತೆ ಆ ಮೊಗಲಧಿಕಾರಿಯನ್ನೊಡಂಬಡಿಸಿದ್ದರು. ಜನಾರ್ದನಪಂತರು ಬ್ರಹ್ಮ ಜ್ಞಾನಿಗಳೆಂಬ ಮಾತೊಂದು ಕಡೆ ಇರಲಿ; ಏಕೆಂದರೆ, ನೆರಳಲ್ಲಿ ಹಾಯಾಗಿ ಕುಳಿತು ಬ್ರಹ್ಮವಿಚಾರ ಮಾಡಿ ಅದರ ಆಳವನ್ನು ಅರಿತವ ರನೇಕರುಂಟು. ಜನಾರ್ದನಪಂತರು ಬ್ರಹ್ಮಜ್ಞಾನದ ಜೊತೆಗೆ ಶಸ್ತ್ರಾಸ್ತ್ರವಿದ್ಯೆಯಲ್ಲಿಯೂ ಪಾರಂಗತರಾಗಿದ್ದು ಎಷ್ಟೋ ವೇಳೆ ಕೈಚಳಕ ದಿಂದ ಮಹಾಮಹಾ ವೀರರಿಗೂ ವಿಸ್ಮಯವನ್ನುಂಟುಮಾಡಿದ್ದರು. ಜ್ಞಾನದಲ್ಲಿಯೂ ಲೌಕಿಕ ಪ್ರತಿಭೆಯಲ್ಲಿಯೂ ಮುಗಿಲುಮುಟ್ಟಿದ್ದ ಈ ಜನಾರ್ದನಪಂತರ ಬಳಿಗೆ ಎಂಟು ವರುಷದ ಬಾಲಕನಾದ ಏಕನಾಥನು ಹೊರಟಿದ್ದಾನೆ. ಮನೆಯಲ್ಲಿ ಮುದ್ದಿನಿಂದ ಬೆಳೆದ ಏಕನಾಥನಿಗೆ ಎಂದೂ ನಡೆದ ಅಭ್ಯಾಸವಿಲ್ಲ. ಇದರ ಮೇಲೆ ದಾರಿ ತಿಳಿಯದು; ಹಸಿವು ಬಾಯಾರಿಕೆಗಳ ಹೊಡೆತ ಬೇರೆ; ಇಷ್ಟಾದರೂ "ಸಾಧಿಸ ಬೇಕು, ಇಲ್ಲದಿದ್ದರೆ ಸಾಯಬೇಕು" ಎಂದು ನಿಶ್ಚಯ; ಇಂತು ಏಕನಾಥನು ದಾರಿಯಲ್ಲಿ ಕಂಡಕಂಡವರನ್ನೆಲ್ಲಾ ದೇವಗಡದ ದಾರಿ ಯನ್ನು ಕೇಳುತ್ತ, ಅಲ್ಲಲ್ಲಿ ದಾರಿ ತಪ್ಪುತ್ತ, ಮತ್ತೆ ಸರಿಯಾದ ದಾರಿಗೆ ಬರುತ್ತ, ತನ್ನನ್ನು ಅವರು ಶಿಷ್ಯರಾಗಿ ಸ್ವೀಕರಿಸುವರೋ ಇಲ್ಲವೋ ಎಂಬ ಸಂಶಯದಿಂದ ಬೆಂದು ಬೆಂಡಾಗುತ್ತ ನೋಡುವವರಿಗೆಲ್ಲಾ ಪುರಾಣಪ್ರಸಿದ್ಧನಾದ ಧ್ರುವನನ್ನು ನೆನಪುಗೊಡುತ್ತ ಕೊನೆಗೆ ದೇವ ಗಡಕ್ಕೆ ಬಂದು ಬಿದ್ದನು. ಮತ್ತು ಜನಾರ್ದನಪಂತರ ಮನೆಗೆ ಬಂದು ವಿಚಾರಿಸಿಕೊಂಡು ಒಳಗೆ ಪ್ರವೇಶ ಮಾಡಿದನು. ಜನಾರ್ದನಪಂತರು ಯಾವದೋ ಒಂದು ರಾಜಕೀಯ ಪತ್ರಾವಲೋಕನದಲ್ಲಿ ಮನಸ್ಸು ನಟ್ಟವರಾಗಿದ್ದರು. ಏಕನಾಥನು ಕೈಜೋಡಿಸಿಕೊಂಡು ಓರೆಯಾಗಿ ನಿಂತನು. ಪತ್ರದ ವಿಚಾರವು ಮುಗಿಯುತ್ತಲೇ ಜನಾರ್ದನಪಂತರು ಕತ್ತೆತ್ತಿ ನೋಡಿದರು. ಒಳ್ಳೇ ತೇಜಸ್ವಿಯಾದ ಹುಡುಗ, ಮಾರ್ಗಾ ಯಾಸದಿಂದ ಬಳಲಿದ್ದಾನೆ; ಬಿಸಿಲಿನಲ್ಲಿ ದಾರಿಯನ್ನು ನಡೆದು ಮೈಬೆವರು ಕೋಡಿಹರಿಯುತ್ತಲಿದೆ. ಆಗ ಅತ್ಯಾಶ್ಚರ್ಯದಿಂದ ಜನಾರ್ದನಪಂತರು ಏಕನಾಥನನ್ನು ಹತ್ತಿರಕ್ಕೆ ಕರೆದು ಕೂಡಿಸಿಕೊಂಡು ಅವನ ವಿದ್ಯಮಾನವನ್ನೆಲ್ಲಾ ತಿಳಿದು ತಮ್ಮಲ್ಲಿ ಕೆಲವು ದಿನ ಇರೆಂದು ಇಟ್ಟುಕೊಂಡರು.

## ಗುರುಸೇವೆ

ಏಕನಾಥನು ತಾನು ಧನ್ಯನಾದೆನೆಂದು ತಿಳಿದು ಅತ್ಯಾದರದಿಂದ ಗುರುಸೇವೆಗಾರಂಭಮಾಡಿದನು. ಬೆಳಗಾಗುತ್ತಲೇ ಬೇಗ ತನ್ನ ಕೆಲಸವನ್ನು ತೀರಿಸಿಕೊಂಡು ಪಂತರು ಮಲಗುವ ಮನೆಯ ಬಾಗಿಲಲ್ಲಿ ಗುರುಸ್ತುತಿಯನ್ನು ಹೇಳುತ್ತ ನಿಂತಿರುವದು, ಅವರು ಹೊರಗೆ ಬರುತ್ತಲೆ ಸ್ನಾನಸಂಧ್ಯಾಜಪತಪಾದಿಗಳಿಗೆಲ್ಲಾ ಉಪಕರಣಗಳನ್ನು ಒದಗಿಸುವದು, ಯುದ್ಧಕಾಲದಲ್ಲಿ ಬೆಂಬಲನಾಗುವದು—ಈ ಕೆಲಸದಲ್ಲಿ ನಿರತನಾಗಿ ಹನ್ನೆರಡು ವರ್ಷ ಎಡೆಬಿಡದೆ ಗುರುಸೇವೆಯನ್ನು ಮಾಡಿದನು. ಏಕನಾಥನ ಮನೋದಾರ್ಢ್ಯವನ್ನು ನೋಡಬೇಕೆಂದು ಪಂತರು ಅವನಿಗೆಷ್ಟೋ ಕಠಿನ ಪ್ರಸಂಗಗಳನ್ನು ತಂದುಕೊಟ್ಟರು. ಏಕನಾಥನು ಆ ಒಂದಕ್ಕೂ ಅಳುಕಲಿಲ್ಲ. ಒಂದುಸಲ ಒಂದು ಸಂಗತಿಯು ನಡೆಯಿತು. ಶತ್ರುಗಳು ಬಂದು ದೇವಗಡಕ್ಕೆ ಮುತ್ತಿಗೆಯನ್ನು ಹಾಕಿದರು. ಯವನರಾಜನು ತನ್ನ ಪದ್ಧತಿಯ ಪ್ರಕಾರ ಒಬ್ಬ ರಾವುತನೊಡನೆ ಪಂತರಿಗೆ ಹೇಳಿಕಳುಹಿಸಿದನು. ಪಂತರು ಒಡನೆ ಯುದ್ಧಕ್ಕೆ ಹೊರಡಬೇಕಾದ ಪ್ರಸಂಗವಾಗಿತ್ತು. ಆಗ ಪಂತರು ದೇವರ ಮನೆಯಲ್ಲಿ ಕುಳಿತು ಸಮಾಧಿಸುಖವನ್ನನುಭವಿಸುತ್ತಿದ್ದರು. ಆಗ ಬಾಗಿಲನ್ನು ಕಾಯುತ್ತಿದ್ದ ಏಕನಾಥನು ಆ ಪತ್ರವನ್ನೋದಿ ನೋಡಿ ಅವರನ್ನೆಬ್ಬಿಸಿದರೆ ಸಮಾಧಿಗೆ ಭಂಗವಾಗುವದೆಂದೂ ಸುಮ್ಮನಿದ್ದರೆ ಕೆಲಸ ಕೆಡುವದೆಂದೂ ಯೋಚಿಸಿ ಹೊರಗಿನಿಂದಲೇ ಗುರುವಿಗೆ ನಮಸ್ಕಾರ ಮಾಡಿ ಹೊರಟು ಪಂತರ ಯುದ್ಧಕಾಲದ ಉಡಿಗೆತೊಡಿಗೆಗಳನ್ನು ತಾನು ಹಾಕಿಕೊಂಡು ಒಂದು ಕೈಯಲ್ಲಿ ಕತ್ತಿಯನ್ನೂ ಇನ್ನೊಂದು ಕೈಯಲ್ಲಿ ಭಲ್ಲೆಯನ್ನೂ ಹಿಡಿದು ದಿವ್ಯಾಶ್ವದ ಮೇಲೆ ಕುಳಿತು ಹೊರಬಿದ್ದನು. ಅವನ ಮುಖಭಾವವು ವಿಶೇಷವಾಗಿ ಪಂತರನ್ನು ಹೋಲುತ್ತಿದ್ದದರಿಂದ ಅವನನ್ನು ಯಾರೂ ಆ ಗಡಿಬಿಡಿಯಲ್ಲಿ ಗುರ್ತುಹಿಡಿಯಲಿಲ್ಲ. ಪಂತರಿಂದ ಯುದ್ಧಕಲೆಯನ್ನು ಅರಿತಿದ್ದ ಏಕನಾಥನು ಸಕಾಲದಲ್ಲಿ ಸೇನೆಯ ಮುಂಭಾಗದಲ್ಲಿ ಶಂಖವನ್ನೂದಿ ತುಮುಲಯುದ್ಧವನ್ನು ನಡೆಸಿ ಶತ್ರುಗಳ ಮಗ್ಗಲನ್ನು ಮುರಿದು ಕಳುಹಿಸಿ ಜಯಭೇರಿಯನ್ನು ಹೊಡೆಸುತ್ತ ಊರಿಗೆ ತಿರುಗಿದನು. ಇತ್ತ ಪಂತರು ಸಮಾಧಿಯಿಂದ ಬಹಿರ್ಮುಖ

ರಾಗಿ, ನಡೆದ ಸಂಗತಿಯನ್ನು ತಿಳಿದು ಏಕನಾಥನನ್ನು ಬಹು ಕುತೂಹಲದಿಂದ ನಿರೀಕ್ಷಿಸುತ್ತಿರಲು ಶಸ್ತ್ರಘಾತಗಳಿಂದ ಮೈಯೆಲ್ಲಾ ರಕ್ತಮಯವಾಗಿದ್ದ ಏಕನಾಥನು ಬಂದು ಅವರ ಪಾದದಮೇಲೆ ಹಣೆಯನ್ನಿಟ್ಟನು. ಶಿಷ್ಯನ ಧೀರತೆಗೆ ಮತ್ತು ಉಚಿತಜ್ಞತೆಗೆ ಬೆರಗಾಗಿ ಪಂತರು ಅವನನ್ನು ಆಲಿಂಗನೆ ಮಾಡಿಕೊಂಡರು.

## ಸಾಕ್ಷಾತ್ಕಾರವಾದ ಸಂದರ್ಭ

ಇತರ ವ್ಯವಹಾರದ ಗಡಿಬಿಡಿ ಇಲ್ಲದ ಕಾಲಗಳಲ್ಲೆಲ್ಲಾ ಪಂತರು ಏಕನಾಥನಿಗೆ ವೇದಾಂತದ ಮಹಾತತ್ತ್ವಗಳ ಒಗಟುಗಳನ್ನು ಒಡೆದು ತಿಳಿಯಹೇಳುತ್ತಿದ್ದರು. ಒಂದು ದಿನ ಏಕನಾಥನ ಪುಣ್ಯವೆಲ್ಲಾ ಪರಿಪಕ್ವಕ್ಕೆ ಬಂತು. ಅವನ ಭಾಗಕ್ಕೆ ಒಪ್ಪಿಸಿದ್ದ ಲೆಕ್ಕವನ್ನೆಲ್ಲಾ ಸರಿನೋಡಬೇಕಾದ ಸಮಯ ಒದಗಿತು. ಬೆಳಗಾಗುವದರೊಳಗೇ ಬೇರೆ ಬೇರೆ ದೃಷ್ಟಿಯಿಂದ ನೋಡಬೇಕಾಗುವ ಲೆಕ್ಕವೆಲ್ಲಾ ಸಿದ್ಧವಾಗಿರಬೇಕೆಂದು ಪಂತರಾಜ್ಞೆಯಾಯಿತು. ಏಕನಾಥನು ತನ್ನ ಇತರ ಕೆಲಸಗಳನ್ನೆಲ್ಲಾ ಮುಗಿಸಿ ಸುಮಾರು ರಾತ್ರಿ ಹನ್ನೊಂದಕ್ಕೆ ಲೆಕ್ಕಕ್ಕೆ ಕೂತನು. ಅವನು ಬಹು ಚತುರನಾಗಿದ್ದದರಿಂದ ಅರ್ಧತಾಸಿನಲ್ಲಿಯೇ ಲೆಕ್ಕವೆಲ್ಲಾ ಆಯಿತು. ಆದರೆ ಆಯವ್ಯಯಗಳ ಮೊತ್ತದಲ್ಲಿ ಒಂದು ದುಡ್ಡಿನ ವ್ಯತ್ಯಾಸ ಬಂತು. ಅದಕ್ಕಾಗಿ ಅವನು ಕಣ್ಣಲ್ಲಿ ಕಣ್ಣಿಟ್ಟು ಎಷ್ಟೆಷ್ಟೋ ಸಲ ಕೂಡಿ ಕಳೆದನು. ಏನಾದರೂ ಆ ತಪ್ಪು ಹೊರಬೀಳಲಿಲ್ಲ. ಆಗ ಅವನ ಮನಸ್ಸು ಕುದಿಯುವದಕ್ಕಾರಂಭವಾಯಿತು. ಹೊಟ್ಟೆಯ ತಳಮಳವು ಹೆಚ್ಚಾಗಿ ಅವನ ಕಣ್ಣಿನಿಂದ ನೀರು ಧಾರಾಕಾರವಾಗಿ ಸುರಿದು ಕಾಲುವೆಯಾಗಿ ಹರಿಯಿತು. ರಾತ್ರೆ ಮೂರು ಹೊಡೆಯಿತು. ಏಕನಾಥನು ಲೆಕ್ಕದ ಮೇಲಿಟ್ಟ ಕಣ್ಣನ್ನು ಕದಲಿಸಲಿಲ್ಲ. ಆಗ ಪಂತರು ದೂರದಿಂದ ನೋಡಿ–ಏಕನಾಥನ ಜಾಗರಕ್ಕೇನು ಕಾರಣವಾಗಿರಬಹುದೆಂದು ಮೆಲ್ಲಗೆ ಹತ್ತಿರಕ್ಕೆ ಬಂದು ನಿಂತರು. ಏಕನಾಥನಿಗೆ ಎಚ್ಚರವೇ ಇಲ್ಲ. ಅಷ್ಟರಲ್ಲಿ ಅವನಿಗೆ ಆ ತಪ್ಪು ಸಿಕ್ಕಿತು. ಒಡನೆ ಅವನು ಚಪ್ಪಾಳೆಯನ್ನು ಹೊಡೆದು ಆನಂದದಿಂದ ಗಟ್ಟಿಯಾಗಿ ನಕ್ಕನು. ಆಗ ಇಷ್ಟು ಆನಂದಕ್ಕೆ ಕಾರಣವೇನೆಂದು ಪಂತರು ಕೇಳಿದರು. ಅವರನ್ನು ಕಂಡೊಡನೆ ಬೆಚ್ಚುಬಿದ್ದವ

ನಾಗಿ ನಡೆದ ಸಂಗತಿಯನ್ನು ಹೇಳಿ ನಮಸ್ಕಾರ ಮಾಡಿದನು. ಪಂತರಿಗೆ ಬಹು ಸಂತೋಷವಾಯಿತು. ಆಗ ಅವರು "ಏಕನಾಥ, ಒಂದು ದುಡ್ಡಿಗಾಗಿ ಹೇಗೆ ನೀನು ನಿನ್ನ ಮನಸ್ಸನ್ನು ಏಕಾಗ್ರಮಾಡಿದೆಯೊ ಹಾಗೆ ಆ ಮನಸ್ಸನ್ನು ಪರಮಾತ್ಮ ಸ್ವರೂಪದಲ್ಲಿ ಲಯಮಾಡಿದರೆ ಆ ದುಡ್ಡಿನಂತೆ ಪರಮಾತ್ಮನು ಸಿಕ್ಕಿಯೇ ಸಿಕ್ಕುವನು." ಎಂದು ಹೇಳಿ ಅವನ ತಲೆಯ ಮೇಲೆ ಕೈಯಿಟ್ಟು, ಕಿವಿಯಲ್ಲೊಂದು ಮಂತ್ರವನ್ನು ಹೇಳಿ ಪೂರ್ಣಾನುಗ್ರಹ ಮಾಡಿದನು. ಒಡನೆ ಏಕನಾಥನು ಆತ್ಮಸಾಕ್ಷಾತ್ಕಾರವನ್ನು ಹೊಂದಿ ಸಮಾಧಿಸುಖವನ್ನು ಸೂರೆಗೊಂಡನು. ಅವನ ನಾಡಿಗಳೆಲ್ಲಾ ಆ ಮಂತ್ರದ ತಾಲಕ್ಕೆ ಸರಿಯಾಗಿ ಕುಣಿಯಲಾರಂಭಿಸಿದವು. ಅವನ ಉಸಿರೂ ಆ ಮಂತ್ರವನ್ನು ಹಾಡುವದಕ್ಕೆ ಮೊದಲು ಮಾಡಿತು. ಈ ರೀತಿಯಲ್ಲಿ ಕೃತಕೃತ್ಯನಾದ ಏಕನಾಥನು ಜಗತ್ಪೂಜ್ಯನಾಗಿ ನಿಜವಾದ ಬ್ರಾಹ್ಮಣತ್ವವನ್ನು ಪಡೆದು ಬ್ರಾಹ್ಮಣತ್ವದ ಸಂಪಾದನೆಯ ಪದ್ಧತಿಯನ್ನು ಇತರರಿಗೆ ಮೇಲುಪಂಙ್ತಿಯಾಗಿ ಮಾಡಿರುವನು.

## ದೇವಗಡದಿಂದ ಹೊರಟಿದ್ದು

ಆ ಮೇಲೊಂದು ದಿನ ಪಂತರು ಏಕನಾಥನಿಗೆ ಸಮೀಪದ ಪರ್ವತದಲ್ಲಿ ದತ್ತಾತ್ರಯ ಮೂರ್ತಿಯ ಸಾಕ್ಷಾತ್ಕಾರವನ್ನು ಮಾಡಿಕೊಟ್ಟರೆಂದು ಹೇಳುತ್ತಾರೆ. ಏಕನಾಥನು ತನ್ನ ಉಪಾಸ್ಯಮೂರ್ತಿಯಾದ ದತ್ತಾತ್ರಯನ ಪರಮಾನುಗ್ರಹಕ್ಕೂ ಪಾತ್ರನಾದ ಮೇಲೆ ಪಂತರು ಅವನನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ ನಾಸಿಕ ಮೊದಲಾದ ಕ್ಷೇತ್ರಯಾತ್ರೆಗಳನ್ನು ಮಾಡಿಸಿದರು. ಕೊನೆಗೊಂದು ದಿನ ಏಕನಾಥನನ್ನು ಕರೆದು "ವೇದಾಧ್ಯಯನವಾದ ಮೇಲೆ ತೀರ್ಥಯಾತ್ರೆಯಾಗಬೇಕು; ಆದ್ದರಿಂದ ನೀನು ತೀರ್ಥಯಾತ್ರೆಯನ್ನು ಮುಗಿಸಿಕೊಂಡು ನಿಮ್ಮೂರಿಗೆ ಹೋಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಸ್ವಸ್ಥನಾಗಿರು" ಎಂದು ಪಂತರು ಹೇಳಿದರು. ಈ ಬಗೆಯ ಅಗಲಿಕೆಯು ಇಬ್ಬರಿಗೂ ದುಃಖಕರವೇ ಆಗಿತ್ತು. ಆದರೂ ಏಕನಾಥನು ಆದರಂತೆ ನಡೆಯಬೇಕಾಯಿತು. ಏಕನಾಥನು ಗುರ್ವಾಜ್ಞೆಯನ್ನು ತಲೆಯಲ್ಲಿ ಹೊತ್ತು ಹೊರಟನು.

## ಅಜ್ಜನ ಸಮಾಗಮ

ಏಕನಾಥನು ಅನೇಕ ತೀರ್ಥಗಳಲ್ಲಿ ಸ್ನಾನಮಾಡಿ ಭಿಕ್ಷಾವೃತ್ತಿಯಿಂದ ಜೀವಿಸುತ್ತ ಬರುತ್ತಿರುವಾಗ ಪೈಠಣವು ದಾರಿಯಲ್ಲಿಯೇ ಗಂಟುಬಿತ್ತು. ತನ್ನ ನಿಜಸ್ವರೂಪವನ್ನು ತಿಳಿಸಿಕೊಂಡರೆ ತನ್ನ ಮುಂದಿನ ಪ್ರಯಾಣಕ್ಕೆ ವಿಘ್ನವಾದೀತೆಂದು ಏಕನಾಥನು ತನ್ನ ಅಜ್ಜನ ಮನೆಗೆ ಹೋಗದೆ ಬೇರೊಬ್ಬರ ಮನೆಗೆ ಬಿಕ್ಷಕ್ಕಾಗಿ ಒಳಹೊಕ್ಕನು. ಇಷ್ಟರಲ್ಲಿ ಏನಾಗಿತ್ತೆಂದರೆ ಏಕನಾಥನು ಪೈಠಣವನ್ನು ಬಿಟ್ಟ ಮೇಲೆ ಆ ಅಜ್ಜನೂ ಅಜ್ಜಿಯೂ ಅಳುವದೊಂದು ಕಡೆ ಇರಲಿ; ಊರೆಲ್ಲಾ ಅತ್ತತ್ತು ಕಣ್ಣೀರ ಕೋಡಿಯನ್ನು ಹರಿಸಿದ್ದಾಗಿತ್ತು. ಏಕನಾಥನು ಊರುಬಿಟ್ಟ ದಿನವೇ ದುರ್ದೈವದಿಂದ ಆ ಪುರಾಣಿಕನು ಪರಸ್ಥಲಕ್ಕೆ ಹೋಗಿದ್ದನು. ಅನೇಕ ವರ್ಷಗಳ ಮೇಲೆ ಹಿಂದಿರುಗಿ ಬಂದ ಪುರಾಣಿಕನು ಆ ವೃದ್ಧದಂಪತಿಗಳ ಮತ್ತು ಊರಿನವರ ದೀನತೆಯನ್ನು ನೋಡಿ ತಾನು ಏಕನಾಥನನ್ನು ಹುಡುಕಿಕೊಂಡು ಬರುವದಾಗಿ ಹೇಳಿ ದೇವಗಡಕ್ಕೆ ಹೋಗಿದ್ದನು. ಅಷ್ಟು ಹೊತ್ತಿಗಾಗಲೇ ಏಕನಾಥನು ತೀರ್ಥಯಾತ್ರೆಗಾಗಿ ದೇವಗಡವನ್ನು ಬಿಟ್ಟಿದ್ದನು. ಪುರಾಣಿಕನು ದೇವಗಡಕ್ಕೆ ಹೋದಾಗ ಪಂತರು ಏಕನಾಥನ ವಿದ್ಯಮಾನವನ್ನೆಲ್ಲಾ ಹೇಳಿದ್ದಲ್ಲದೆ ಅವನನ್ನು ಕಂಡಕೂಡಲೆ ಈ ಪತ್ರವನ್ನು ಕೊಡೆಂದು ಒಂದು ಪತ್ರವನ್ನು ಬರೆದು ಕೊಟ್ಟಿದ್ದರು. ಆ ಪುರಾಣಿಕನು ದೇವಗಡದಿಂದ ಹಿಂದಿರುಗಿ ಬಂದು ಹೇಳಿದ ಮೇಲೆ ಎಲ್ಲರಿಗೂ ಜೀವಬಂದಂತಾಯಿತು. ಹೀಗೆ ಮೊಮ್ಮಗನ ದಾರಿಯನ್ನೇ ಇದಿರು ನೋಡುತ್ತಿದ್ದ ಅಜ್ಜನು ಆ ಹೊತ್ತಿಗೆ ಸರಿಯಾಗಿ ಅಲ್ಲಿಗೆ ಬಂದನು. ಅಜ್ಜನ ವಿದ್ಯಮಾನವು ಮೊಮ್ಮಗನಿಗೆ ತಿಳಿಯಿತು. ಆಗ ಏಕನಾಥನು ಇನ್ನು ತಡಮಾಡಬಾರದೆಂದು ಹೊರಕ್ಕೆ ಬಂದು ಅಜ್ಜನ ಪಾದದ ಮೇಲೆ ಹಣೆಯನ್ನಿಟ್ಟು ತಾನು ಏಕನಾಥನೆಂದು ಹೇಳಿದನು. ಇಬ್ಬರ ಕಣ್ಣುಗಳಲ್ಲಿಯೂ ನೀರು ಹರಿಯಿತು. ಮೊಮ್ಮಗನನ್ನು ಕಂಡ ಆನಂದದಿಂದ ಅಜ್ಜನ ಕುತ್ತಿಗೆಯ ನರಗಳುಬ್ಬಿ ಬಂದವು. ಒಡನೆ ಆ ಸುದ್ದಿಯು ವಿದ್ಯುದ್ವೇಗದಿಂದ ಹರಡಲು ಎಲ್ಲರೂ ಬಂದು ಸೇರಿ ಸಂತೋಷಪಟ್ಟರು. ಅಷ್ಟರಲ್ಲಿ ಪುರಾಣಿಕರು ಬಂದು ಕಾಣಿಸಿಕೊಂಡು ನಾಥನಿಗೆ ಪಂತರ ಪತ್ರವನ್ನು ಕೊಟ್ಟರು. ಅದನ್ನು ಒಡೆದು ನೋಡಲಾಗಿ "ಗುರುಹಿರಿ

ಯರ ಸೇವೆಗಿಂತ ತೀರ್ಥಯಾತ್ರೆಯೇನೂ ಹೆಚ್ಚಲ್ಲ; ಆದ್ದರಿಂದ ಇನ್ನು ನೀನು ಯಾತ್ರೆಯನ್ನು ಮುಗಿಸುವದಕ್ಕೆ ಹೋಗದೆ ಊರಲ್ಲಿಯೇ ನಿಂತು ವ್ಯವಹರಿಸು" ಎಂದಿತ್ತು. ಏಕನಾಥನು ಅದನ್ನೇ ತಲೆಯಲ್ಲಿ ಹೊತ್ತು ಅಂದಿನಿಂದ ಮನೆಯಲ್ಲಿ ನಿಂತನು.

## ವಿವಾಹ ಮತ್ತು ವ್ಯವಹಾರ

ಸತ್ಕುಲದಲ್ಲಿ ಹುಟ್ಟಿ ನಿಜವಾದ ಬ್ರಾಹ್ಮಣತ್ವವನ್ನು ಪಡೆದ ಏಕನಾಥನ ಯಶಶ್ಚಂದ್ರಿಕೆಯು ದಶದಿಕ್ಕುಗಳನ್ನೂ ವ್ಯಾಪಿಸಿ ಜನರ ಮನಸ್ಸನ್ನು ಸಂತೋಷಗೊಳಿಸುತ್ತಿರಲು, ಆ ಪರಮಪೂಜ್ಯ ವ್ಯಕ್ತಿಯನ್ನು ತನ್ನ ಬಂಧುವರ್ಗಕ್ಕೆ ಸೇರಿಸಿಕೊಳ್ಳಬೇಕೆಂದು ಕರ್ನಾಟಕದಲ್ಲಿರುವ ವಿಜಾಪುರದ ಒಬ್ಬ ಗೃಹಸ್ಥರು ತಮ್ಮ ಕನ್ಯೆಯನ್ನು ಏಕನಾಥನಿಗೆ ಕೊಟ್ಟರು. ವಿವಾಹವು ಪೈಠಣದಲ್ಲಿ ವಿಧಿವತ್ತಾಗಿ ನಡೆಯಿತು. ಏಕನಾಥನ ಪತ್ನಿಯಾಗುವ ಸುಯೋಗವನ್ನು ಪಡೆದಾಕೆಯ ಹೆಸರು ಗಿರಿಜಾಬಾಯಿ. ಏಕನಾಥನು ತನ್ನ ಗೃಹಸ್ಥಾಶ್ರಮದ ಭಾರವನ್ನು ಪುರಾಣಗಳಿಂದ ಸಾಗಿಸುವದಕ್ಕೆ ಮೊದಲು ಮಾಡಿದನು. ಏಕನಾಥನ ವಕ್ತೃತ್ವವು ಬಹು ಹೃದಯಂಗಮವಾಗಿತ್ತು. ಇದರ ಮೇಲೆ ಏಕನಾಥನು ಒಳ್ಳೇ ವರಕವಿಯಾಗಿದ್ದನು. ಕೀರ್ತನಗಳನ್ನು ಮಾಡುವ ಲಹರಿಯೂ ಏಕನಾಥನಿಗೆ ಚೆನ್ನಾಗಿತ್ತು. ಆಯಾ ಕಾಲಕ್ಕೆ ಬೇಕು ಬೇಕಾದ ಹಾಗೆ ಪದಗಳನ್ನು ಜೋಡಿಸಿಕೊಳ್ಳುತ್ತಿದ್ದದರಿಂದ ಏಕನಾಥನ ಕೀರ್ತನಕಾಲಕ್ಷೇಪವು ಬಹು ರಮ್ಯವಾಗುತ್ತಿತ್ತು. ಶ್ರೀಮದ್ಭಾಗವತದ ಏಕಾದಶಸ್ಕಂಧಕ್ಕೆ ಏಕನಾಥನು ಮಹಾರಾಷ್ಟ್ರ ಭಾಷೆಯಲ್ಲಿ ವಿವರಣ ರೂಪವಾಗಿ ಮಾಡಿರುವ ಗ್ರಂಥವು ಆ ವಾಙ್ಮಯದ ಧರ್ಮಗ್ರಂಥಗಳೊಳಗೆಲ್ಲಾ ಧರ್ಮಧ್ವಜವಾಗಿರುವದು. ಪುರಾಣದಿಂದ ಅಥವಾ ಕೀರ್ತನದಿಂದ ಬಂದ ಆದಾಯದ ಬಹುಭಾಗವನ್ನು ಏಕನಾಥನು ದೀನರಿಗೂ ಅನಾಥರಿಗೂ ಕೊಟ್ಟು, ತಾನು ಅಲ್ಪ ಸಂತೋಷಿಯಾಗಿ, ಬಂದ ಅತಿಥಿಗಳನ್ನು ಸತ್ಕರಿಸಿಕೊಂಡು ಕಾಲಕಳೆದನು. ಈ ರೀತಿಯಲ್ಲಿ ಏಕನಾಥನು ಬ್ರಾಹ್ಮಣನ ಜೀವನಪದ್ಧತಿಯನ್ನು ಕೃತಿಯಿಂದ ಉಪದೇಶ ಮಾಡಿರುವನು.

## ದುರಭಿಮಾನರಾಹಿತ್ಯ

ಏಕನಾಥನು ವರ್ಣಾಶ್ರಮ ಧರ್ಮಗಳನ್ನು ಬಹು ಚೆನ್ನಾಗಿ ನಡೆಸುತ್ತ ನಿಷ್ಠಾವಾದ ಬ್ರಾಹ್ಮಣನಾಗಿದ್ದನು. ಬ್ರಾಹ್ಮಣತ್ವದ ನಿಷ್ಠೆ ಅವನಲ್ಲಿತ್ತೇ ಹೊರತು ಬ್ರಾಹ್ಮಣತ್ವದ ಒಣ ದುರಭಿಮಾನವು ಅವನಲ್ಲಿರಲಿಲ್ಲ. ಒಂದು ದಿನ ಅವನ ಮನೆಯಲ್ಲಿ ಹಿರಿಯರ ಶ್ರಾದ್ಧವು ನಡೆಯಬೇಕಾಗಿತ್ತು. ಶ್ರಾದ್ಧವೆಂಬುದು ಬ್ರಾಹ್ಮಣರಲ್ಲಿ ಬಹು ಮಡಿಯಿಂದಾಗುವ ಕೆಲಸ. ಅಂದು ಇತರರಿಗೆ ಭಿಕ್ಷೆ ಹಾಕುವ ವಾಡಿಕೆ ಕೂಡ ಇಲ್ಲ. ಆ ದಿವಸ ಏಕನಾಥನು ಬ್ರಾಹ್ಮಣರಿಗಾಗಿಯೇ ಪಂಚಭಕ್ಷ್ಯಪರಮಾನ್ನಗಳನ್ನು ಮಾಡಿಸುವದಕ್ಕೆ ಮೊದಲು ಮಾಡಿದನು. ಆದರೆ ಬೀದಿಯಲ್ಲಿ ಹೋಗುತ್ತಿದ್ದ ಕೆಲವರು ಅಂತ್ಯಜರು ಅದರ ವಾಸನೆಯನ್ನು ಹಿಡಿದು ಅಂಥ ಊಟವು ತಮ್ಮ ಹಣೆಯಲ್ಲಿ ಬರೆದಿಲ್ಲವೆಂದು ನೊಂದುಕೊಳ್ಳುತ್ತಿರಲು, ಅದನ್ನು ಕೇಳಿ ಏಕನಾಥನು ಆ ಪಂಚಮರನ್ನು ಕರೆದು ಮಾಡಿದಡಿಗೆಯನ್ನೆಲ್ಲಾ ಹೊಟ್ಟೆತುಂಬ ಊಟ ಮಾಡಿಸಿ, ಆ ಮೇಲೆ ತನ್ನ ವರ್ಣಾಶ್ರಮ ಧರ್ಮಕ್ಕೆ ತಕ್ಕಂತೆ ಸಾರಿಸಿ, ಗುಡಿಸಿ, ಹೊಸ ಅಡಿಗೆಯನ್ನು ಮಾಡಿಸಿ ತನ್ನ ಕರ್ಮವನ್ನು ಸಾಂಗಮಾಡಿದನು. ಒಳಗೆ ಮಾಡುವ ಪಕ್ವಾನ್ನಗಳಿಗೆ ಹೊರಗೆ ಪಂಚಮರು ಬಾಯಿ ನೀರು ಸುರಿಸುತ್ತಿರುವಾಗ, ಅದನ್ನು ಅವರಿಗೆ ಕೊಡದೆ ಇರುವದು ಅವನ ಮನಸ್ಸಿಗೆ ಸರಿಬೀಳಲಿಲ್ಲ. ಭೂತತೃಪ್ತಿಯನ್ನು ಮಾಡುವ ಸಂದರ್ಭದಲ್ಲಿ ಅರ್ಥವಿಲ್ಲದ ಆಚಾರವನ್ನು ಮೀರಿಯಾದರೂ ಅವನು ತನ್ನ ಉದಾರ ಬುದ್ಧಿಯನ್ನು ತೋರಿಸುತ್ತಿದ್ದನು ಇದು ಬ್ರಾಹ್ಮಣನ ಸಹಾನುಭೂತಿ ಹೇಗಿರಬೇಕೆಂಬುದಕ್ಕೆ ಉದಾಹರಣೆ.

## ಸಹನಶೀಲತೆ

ಏಕನಾಥನ ಸಹನಶೀಲತೆಯೂ ಪ್ರಶಂಸನೀಯವಾಗಿದೆ. ಒಂದು ದಿನ ಏಕನಾಥನು ಬೆಳಿಗ್ಗೆ ಗೋದಾವರಿಯಲ್ಲಿ ಸ್ನಾನಮಾಡಿಕೊಂಡು ಮನೆಗೆ ಬರುತ್ತಿದ್ದನು. ದಾರಿಯಲ್ಲೊಂದು ಕಡೆ ಕುಳಿತಿದ್ದ ಒಬ್ಬ ಯವನನು ಏಕನಾಥನನ್ನು ಕಾಣದೆ ಉಗುಳಿದನು. ಅದು ಏಕನಾಥನಿಗೆ ತಾಕಿತು. ಆಗ ಏಕನಾಥನು ಉಸಿರೆತ್ತದೆ ಮತ್ತೆ ನದಿಗೆ ಹೋಗಿ ಸ್ನಾನ

ಕೊಂಡು ಬಂದನು. ಮತ್ತನೆಯ ಹಾರುವನೆಂದು ಆ ಮೂರ್ಖನಾದ ಯುವನನು ಚೇಷ್ಟೆಗಾಗಿ ಪ್ರಯತ್ನಪೂರ್ವಕವಾಗಿ ಮತ್ತೆ ಉಗುಳಿದನು; ಮತ್ತೆ ಏಕನಾಥನು ಸ್ನಾನಕ್ಕೆ ಹೋದನು. ಏಕನಾಥನು ಸ್ನಾನ ಮಾಡಿಕೊಂಡು ಬರುವದು ಮತ್ತು ಯುವನನು ಆವನ ಮೇಲೆ ಉಗುಳು ವದು—ಹೀಗೆ ಎಪ್ಪೋಸಲ ನಡೆಯಿತು. ಸ್ನಾನವು ಏಕನಾಥನಿಗೆ ಬೇಸರವನ್ನುಂಟುಮಾಡಲಿಲ್ಲ. ಉಗುಳುವದು ಯುವನನಿಗೆ ಬೇಸರ ವನ್ನುಂಟುಮಾಡಲಿಲ್ಲ. ಕೊನೆಗೆ ಇಷ್ಟು ಸಹನ ಮಾಡತಕ್ಕವನು ಒಬ್ಬ ಮಹಾತ್ಮನಿರಬಹುದೆಂದು ಯುವನನ ಎದೆಯಳುಕಿತು. ಆಗ ಅವನು ಅವರ ಮುಂದೆ ಬಂದು ತನ್ನ ತಪ್ಪನ್ನು ಮನ್ನಿಸಬೇಕೆಂದು ಬೇಡಿಕೊಂಡನು. ಅನೇಕಸಲ ಗೋದಾವರಿಯ ಸ್ನಾನವನ್ನು ಮಾಡು ವಂತೆ ಮಾಡಿದ್ದು ಎಂದಿಗೂ ತಪ್ಪೆನಿಸಲಾರದೆಂದು ಹೇಳಿ ಏಕನಾಥನು ಮನೆಗೆ ಹೋದನು. ಇದರ ಮೂಲಕ ಏಕನಾಥನು ಬ್ರಾಹ್ಮಣರಿಗೆ ಸಹನಶೀಲತೆ ಹೇಗಿರಬೇಕೆಂಬುದನ್ನು ತೋರಿಸಿರುವನು.

## ಗುಣಾನುವಾದ

... ತನ್ನ ಅನುಷ್ಠಾನಗಳನ್ನು ತಾನು ಮಾಡಿಕೊಂಡು ಏಕನಾಥನು ಪುರಾಣ, ಕೀರ್ತನ ಮತ್ತು ಭಜನ ಇವುಗಳ ಮೂಲಕ ಜನಮಂಡಲಿ ಯಲ್ಲಿ ಧರ್ಮಪ್ರಸಾರವನ್ನು ಮಾಡುತ್ತಿದ್ದನು. ಅವನು ಹೊಟ್ಟೆಗಾಗಿ ದುಡಿಯುವ ಗೊಡವೆಗೆ ಹೋಗದೆ, ಅಪ್ರಾರ್ಥಿತವಾಗಿ ಬಂದದ್ದರಲ್ಲಿ ಕ್ಷೇತ್ರಾದನ್ನು ದಾನಧರ್ಮವನ್ನು ಮಾಡಿ, ಅಲ್ಪಸ್ವಲ್ಪವನ್ನು ತನ್ನ ಉಪ ಭೋಗಕ್ಕೆ ಉಪಯೋಗ ಮಾಡಿಕೊಳ್ಳುತ್ತಿದ್ದನು. ಮಹಾನಿಷ್ಠನಾದ ಬ್ರಾಹ್ಮಣನಾಗಿದ್ದರೂ ಗೋದಾವರಿಯ ಕಾದ ಮರಳ ಮೇಲೆ ಕೀಳು ಜಾತಿಯವರ ಮಕ್ಕಳು ಕಾವಿನಿಂದ ಅಳುತ್ತಿದ್ದರೆ ಏಕನಾಥನು ಅವರ ಹೊಲಸಾದ ದೇಹವನ್ನು ತನ್ನ ಶುದ್ಧವಾದ ವಸ್ತ್ರದಿಂದ ಒರೆಸಿ ಅವ ರನ್ನು ಎತ್ತಿಕೊಂಡು ಮಾದಿಗರ ಹಟ್ಟಿಗಾದರೂ ಹೋಗಿ ಅವರವರ ತಂದೆ-ತಾಯಿಗಳಿಗೆ ಮುಟ್ಟಿಸಿ ಬಂದು ಸ್ನಾನ ಮಾಡುತ್ತಿದ್ದನು. ಏಕ ನಾಥನು ಮಾಡಿರುವ ಅದ್ಭುತ ಕಾರ್ಯಗಳು ಅವನ ವಿಸ್ತೃತ ಚರಿತ್ರೆ ಯಲ್ಲಿ ವಿಶೇಷವಾಗಿವೆ. ಅವನು ಗೋದೂಬಾಯಿ ಎಂಬ ತನ್ನ ಒಬ್ಬ

ಹೆಣ್ಣುಮಗಳನ್ನು ಆ ಪ್ರಾಂತದಲ್ಲಿಯೇ ಕೊಟ್ಟು ಲಗ್ನಮಾಡಿದ್ದನು. ಗಂಗಾಬಾಯಿ ಎಂಬ ಇನ್ನೊಬ್ಬ ಹೆಣ್ಣುಮಗಳ ಬಾಂಧವ್ಯದ ಸುಯೋಗವು ನಮ್ಮ ಕರ್ಣಾಟಕಕ್ಕೆ ಲಭ್ಯವಾಯಿತು. ಇವನ ಮಗನಾದ ಹರಿಪಂತನಿಗೆ ತನ್ನ ತಂದೆಯು ದೇಶಭಾಷೆಯಲ್ಲಿ ಭಾಗವತವನ್ನು ಬರೆದದ್ದು ಸರಿಬೀಳದೆ ಆವನು ತಂದೆಯ ಸಹವಾಸವನ್ನು ಬಿಟ್ಟು ಕೆಲವು ದಿವಸ ಕಾಶಿಯಲ್ಲಿದ್ದನು. ಆಮೇಲೆ ಏಕನಾಥನೇ ಅವನನ್ನು ಸಮಾಧಾನಗೊಳಿಸಿ ಕರೆದುಕೊಂಡು ಬಂದನು.

## ಅಂತರ್ಧಾನ

ಕ್ರಿ. ೧೬೦೯ ರಲ್ಲಿ ಏಕನಾಥನಿಗೆ ಒಂದು ದಿನ ಸ್ವಲ್ಪ ಹೊತ್ತು ಮೂರ್ಛೆ ಬಂದಂತಾಯಿತು. ಅದರಿಂದ ಎಚ್ಚತ್ತು ಏಕನಾಥನು ತಾನು ಮರುದಿನ ಪ್ರಯಾಣ ಮಾಡುವವನೆಂದು ಸೂಚನೆ ಮಾಡಿದನು. ಎಲ್ಲರೂ ದಿಗಿಲುಬಿದ್ದರು. ಈ ಸುದ್ದಿಯನ್ನು ಕೇಳಿ ಸುತ್ತುಮುತ್ತಣ ಊರವರು ಕೂಡ ನೆರೆದರು. ಮರುದಿನ ಏಕನಾಥನು ಎಂದಿನಂತೆ ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ತುಂಬಿದ ಭಜನೆಯೊಡನೆ ಗೋದಾವರಿಗೆ ಹೊರಟನು. ಇದೇನಾಶ್ಚರ್ಯವೆಂದು ಬಹುಜನರು ಆವನನ್ನು ಹಿಂಬಾಲಿಸಿದರು. ಏಕನಾಥನು ನದಿಯ ತೀರದಲ್ಲಿ ನಿಂತು ಮಧ್ಯಾಹ್ನದ ಎರಡು ತಾಸಿನವರಿಗೂ ಪ್ರೇಮಪೂರ್ಣವಾದ ಕೀರ್ತನವನ್ನು ಮಾಡಿ ಸರ್ವರ ಹೃದಯದಲ್ಲಿಯೂ ಭಗವದ್ಭಕ್ತಿಯ ಒರತೆಯನ್ನು ತೋಡಿ, ಆರತಿಯನ್ನು ಮುಗಿಸಿ ಮೆಲ್ಲಗೆ ಎದೆಯುದ್ದದ ನೀರಿನವರೆಗೆ ಹೋದನು. ಜನರೆಲ್ಲರೂ ರೆಪ್ಪೆಯನ್ನು ಹೊಡೆಯದೆ ನೋಡುತ್ತಿದ್ದರು. ಏಕನಾಥನು ಜನರಿಗೆಲ್ಲ ಕೊಡಬೇಕಾದ ಎಚ್ಚರಿಕೆಯನ್ನು ಕೊಟ್ಟು "ಜಯಜನಾರ್ದನ" ಎಂದು ಉಚ್ಚಸ್ವರದಿಂದ ತನ್ನ ಸದ್ಗುರು ನಾಮವನ್ನು ಉಚ್ಚಾರಮಾಡಿ ಮುಳುಗಿದನು. ಒಮ್ಮೆ ಮುಳುಗಿದವನು ಮತ್ತೇಳಲಿಲ್ಲ. ಬ್ರಾಹ್ಮಣತ್ವದ ಬಣ್ಣವನ್ನು ನೋಡಬೇಕಾದರೆ ಏಕನಾಥನ ಚರಿತ್ರೆಯೆಂಬ ಒರೆಗಲ್ಲಿಗೆ ತಿಕ್ಕಿನೋಡುವಹಾಗಿದೆ. ಅವನ ಬಾಲ್ಯದಾಟ, ಅವನ ಧ್ಯೇಯ, ಅವನ ಗುರುಸೇವೆ, ಸಮಯಾನುಸಾರವಾದ ಶೌರ್ಯ, ಶೌರ್ಯವಿದ್ದರೂ ಸಾತ್ವಿಕ ವೃತ್ತಿಯಿಂದ ಸಹಿಸು

ವಿಕೆ, ಏಕಾಗ್ರತೆ, ಗುರ್ವಾಜ್ಞಾಪರಿಪಾಲನೆ, ಪರಮಾರ್ಥದೊಡನೆ ಪ್ರಪಂಚ, ಹೊಟ್ಟೆಗಾಗಿ ದುಡಿಯದೆ ಜನರ ಧರ್ಮೋನ್ನತಿಗಾಗಿ ಜನ್ಮವನ್ನು ನೀಗುವಿಕೆ, ಅಯಾಚಿತವೃತ್ತಿಯಲ್ಲಿಯೇ ದಾನ, ಧರ್ಮ, ಯೋಗ್ಯತೆ ಇದ್ದರೂ ದುರಭಿಮಾನವಿಲ್ಲದಿರುವಿಕೆ, ಸರ್ವಭೂತ ಸಹಾನುಭೂತಿ— ಈ ರೇಖೆಗಳ ಬಣ್ಣಗಳೊಡನೆ ಹೋಲುವಂಥ ಗುಣ ಗಳಿಂದಲೇ ಬ್ರಾಹ್ಮಣತ್ವದ ಹೆಚ್ಚುಗಾರಿಕೆ. ಈ ಗುಣಗಳ ಗಾಳಿ ಬೀಸಿದ್ದರೂ ಕೂಡ ಅವನು ಬ್ರಾಹ್ಮಣತ್ವದ ಗೌರವಕ್ಕೆ "ಭಿಕ್ಷಾಂದೇಹಿ" ಎನ್ನಬೇಕಾದ್ದಿಲ್ಲ. ಏಕೆಂದರೆ ಇತರರು ಅವನನ್ನು ಗೌರವಿಸದೇ ಇರುವದಕ್ಕೆ ಆಗುವದಿಲ್ಲ. ಈ ಗುಣಗಳಿಲ್ಲದೆ ಎಷ್ಟು ಬಾಯಿಬಿಟ್ಟರೂ ಆ ಪೂಜ್ಯತೆ ಬರುವದಿಲ್ಲ.

---

# ತುಲಸೀದಾಸ

## ಹುಟ್ಟು

ಸಾಧುಸಂತರ ಸಹವಾಸದಿಂದ ಬಹುಮಟ್ಟಿಗೆ ಸಾಧುತ್ವವು ಬಂದೇಬರುತ್ತದೆಂದು ತೋರುತ್ತದೆ. ಹಿಂದುಸ್ತಾನದಲ್ಲೆಲ್ಲಾ ಪ್ರಸಿದ್ಧ ಸಾಧುವೆಂದೆನಿಸಿಕೊಂಡಿರುವ ತುಲಸೀದಾಸನಿಗೆ ಆ ಸಾಧುತ್ವವು ವಿಶೇಷ ವಾಗಿ ಸಾಧುಸಂತರ ಸಹವಾಸದಿಂದಲೇ ಬಂದಿರುತ್ತದೆ. ಅವನ ತಂದೆ ಆತ್ಮಾರಾಮ ದ್ವಿವೇದಿ ಎಂಬ ಬ್ರಾಹ್ಮಣ; ತಾಯಿ ಹುಲಸಿ. ಮೂಲಾ ನಕ್ಷತ್ರದ ಮೊದಲನೇ ಪಾದದಲ್ಲಿ ಅವನ ಜನನವಾದ್ದರಿಂದ ತಾಯಿ ತಂದೆಗಳು ಈ ಶಿಶುವಿನ ದೆಸೆಯಿಂದ ತಮಗೆ ಅರಿಷ್ಟವಾಗುವದೆಂದು ಈ ಶಿಶುವನ್ನು ದಿಕ್ಕಿಲ್ಲದಂತೆ ಮಾಡಿದರು. ಶ್ರೀ ರಾಮಾನುಜಾಚಾರ್ಯರ

ಶಿಷ್ಯಪರಂಪರೆಯ ನೃಸಿಂಹದಾಸನೆಂಬ ಸಾಧು ಇದನ್ನು ಕಂಡು ಸ್ವಭಾವಸಿದ್ಧವಾದ ತನ್ನ ಕನಿಕರದಿಂದ ಈ ಶಿಶುವನ್ನು ಸಾಕಿದನು. ಈ ಶಿಶುವು ಚಿಕ್ಕಂದಿನಿಂದಲೂ ಶ್ರೀರಾಮನಾಮದಲ್ಲಿ ಪ್ರೀತಿಯನ್ನು ತೋರಿಸುತ್ತಿದ್ದದರಿಂದ ಮೊದಮೊದಲು ಇದಕ್ಕೆ 'ರಾಮಬೋಲಾ' ಎಂದು ಹೆಸರಿತ್ತೆಂತಲೂ ಈಚೆಗೆ ಸಾಧುಸಂತರ ಸಹವಾಸಬಲದಿಂದ ಆ ಯೋಗ್ಯತೆಯು ಪರಿಪುಷ್ಟಿಗೊಂಡಮೇಲೆ ತುಲಸೀದಾಸನೆಂಬ ಹೆಸರು ಬಂತೆಂತಲೂ ತಿಳಿಯಬರುತ್ತದೆ. ತುಲಸೀದಾಸನ ಜನನವು ಕ್ರಿ. ೧೫೩೨ರಲ್ಲಿ ಯಮುನಾ ನದಿಯ ದಕ್ಷಿಣದಲ್ಲಿರುವ ಭಾಂದಾ ಜಿಲ್ಲೆಗೆ ಸೇರಿದ ರಾಜಪುರದಲ್ಲಿ ಆಗಿರುವದು.

## ಗೃಹಸ್ಥಾಶ್ರಮದಿಂದ ವೈರಾಗ್ಯ

ಆ ಸಾಧುವಿನೊಡನೆ ತೀರ್ಥಕ್ಷೇತ್ರಗಳನ್ನು ಸಂಚಾರ ಮಾಡಿ ಗಂಗಾನದಿಯ ದಡದಲ್ಲಿರುವ ವರಾಹಕ್ಷೇತ್ರಕ್ಕೆ ಬಂದಮೇಲೆ ತುಲಸೀ-ದಾಸನಿಗೆ ದೀನಬಂಧು ಪಾಠಕನೆಂಬಾತನ ಮಗಳಾದ ರತ್ನಾವಳಿ ಎಂಬಾಕೆಯು ಧರ್ಮಪತ್ನಿಯಾದಳು. ಈ ದಂಪತಿಗಳಿಗೆ ತಾರಕನೆಂಬ ಮಗನು ಹುಟ್ಟಿ ಸಂಸಾರವು ಸುಖಮಯವಾಗಿ ಸಾಗಿತ್ತು. ತುಲಸೀ ದಾಸನ ಜೀವಮಾನವು ಬರೀ ಇಷ್ಟರಲ್ಲಿರುವದು ದೇವರ ಮನಸ್ಸಿಗೆ ಬರಲಿಲ್ಲವೆಂದು ತೋರುತ್ತದೆ. ಸ್ವಲ್ಪ ದಿನಗಳಲ್ಲಿಯೇ ಆ ತಾರಕನೂ ಮೃತನಾದನು. ಒಂದುದಿನ ರತ್ನಾವಳಿಯು ಪತಿಯ ಅಪ್ಪಣೆಯನ್ನು ತೆಗೆದುಕೊಳ್ಳದೆ ತಂದೆಯ ಮನೆಗೆ ಹೋದಳು. ಎಲ್ಲಿಯೋ ಹೊರಗೆ ಹೋಗಿದ್ದ ತುಲಸೀದಾಸನು ಮನೆಗೆ ಬಂದು ನೋಡಿ, ಒಂದುದಿನ ಕೂಡ ಆಕೆಯನ್ನು ಬಿಟ್ಟಿರಲಾರದವನಾಗಿ ಬಿರುಬಿಸಿಲನ್ನೂ ಕೂಡ ಲಕ್ಷ್ಯಮಾಡದೆ ಬಹು ಕಷ್ಟದಿಂದ ಹೆಂಡತಿಯನ್ನು ಕರೆದುಕೊಂಡು ಬರುವದಕ್ಕೆ ಮಾವನ ಮನೆಗೆ ಹೋದನು. ಗಂಡನ ಮನೋ ದೌರ್ಬಲ್ಯವು ಆಕೆಗೆ ಗೊತ್ತಾಯಿತು. ಆಗ ಆ ಸಾಧ್ವಿಯು "ಇಷ್ಟು ಪ್ರೇಮವು ರಾಮನ ಮೇಲೆ ಮಾತ್ರ ಇದ್ದರೆ...." ಎಂದೆನ್ನುವಷ್ಟರಲ್ಲಿಯೇ ತುಲಸೀದಾಸನ ಹೃದಯವು ಝುಗ್ಗೆಂದಿತು. ನಿಜವಾಗಿ ತಾನು ರಾಮನ ಮೇಲೆ ಪ್ರೇಮವನ್ನು ಇಟ್ಟಿದ್ದರೆ ತನ್ನ ಜನ್ಮವೇ ಸಾರ್ಥಕವಾಗುತ್ತಿತ್ತೆಂದು ಆವನ ಮನಸ್ಸಿನಲ್ಲಿ ಪ್ರಬಲವಾದ ಕಲ್ಪನಾತರಂಗಗಳೆದ್ದವು.

ಒಡನೆ ಅವನು ಅದರಂತೆ ಮಾಡಿಯೇ ಬಿಡಬೇಕೆಂದು ಹೊರಕ್ಕೆ ಹೊರಟೇ ಬಿಟ್ಟನು. ರತ್ನಾವಳಿಯು ಆಶ್ಚರ್ಯಚಕಿತಳಾದಳು. ತಾನು ಲೋಕಾಭಿರಾಮವಾಗಿ ಆಡಿದ ಮಾತಿನಿಂದ ಈ ಬಗೆಯ ಪರಿಣಾಮವಾಗುವದೆಂದು ಆಕೆಯು ಕನಸುಮನಸಿನಲ್ಲಿಯೂ ಯೋಚಿಸಿರಲಿಲ್ಲ. ಆಕೆಯು ಪತಿಯನ್ನು ಹಿಂದಿರುಗಿಸುವದಕ್ಕೆ ಪರಿಪರಿಯ ಯತ್ನವನ್ನು ಮಾಡಿದಳು. ತುಲಸೀದಾಸನು ಹೊರಟವನು ಹೊರಟೇಬಿಟ್ಟನು. ಆ ಮೇಲೆ ಅವನು ಸಾಧು ಸಂತರ ಸಮಾಗಮದಿಂದ ತನ್ನ ಮನೋವೃತ್ತಿಯನ್ನು ತಿದ್ದಿಕೊಂಡು, ವಿಶೇಷವಾಗಿ ಅಯೋಧ್ಯೆಯಲ್ಲಿ ಅಥವಾ ಕಾಶಿಯಲ್ಲಿದ್ದುಕೊಂಡು ಮಥುರಾ, ಬೃಂದಾವನ, ಕುರುಕ್ಷೇತ್ರ, ಪ್ರಯಾಗ ಮೊದಲಾದವುಗಳ ಕಡೆಗೆ ಸಂಚಾರಮಾಡಿಕೊಂಡಿದ್ದನು.

## ಜನರನ್ನು ತಿದ್ದುವದು

ತನ್ನ ಮನಸ್ಸಿಗೆ ಶಾಂತಿಯನ್ನು ತಂದುಕೊಂಡಿದ್ದ ತುಲಸೀದಾಸನು ಸಮಸ್ತ ಜನರಿಗೂ ಶಾಂತಿಯನ್ನು ತಂದುಕೊಡಬೇಕೆಂಬ ಉದ್ದೇಶದಿಂದಲೇ ಸಂಚಾರ ಮಾಡುತ್ತಿದ್ದನು. ಒಮ್ಮೆ ಇವನು ಶಹಾಬಾದ ಜಿಲ್ಲೆಯಲ್ಲಿ ಸಂಚರಿಸುತ್ತಿರುವಾಗ ಒಬ್ಬ ದನಕಾಯುವವನು ಇವನನ್ನು ಆದರಿಸಿ ಹಾಲು ಕೊಟ್ಟನು. ಇದಕ್ಕೆ ತಕ್ಕ ಪ್ರತಿಫಲವಾಗಿ ದೇವರಿಂದ ನಿನಗೆ ಇಷ್ಟವಾದದ್ದನ್ನು ಪಡೆದುಕೊಡುತ್ತೇನೆಂದು ತುಲಸೀದಾಸನು ಅವನಿಗೆ ಹೇಳಿದನು. ಅಲ್ಪಾಯುಗಳ ಮನೆತನದಲ್ಲಿ ಹುಟ್ಟಿದ್ದ ಆ ದನಕಾಯುವವನು ಚಿರಾಯುವನ್ನು ಬೇಡಿದನು. ಕಳ್ಳತನ, ಹಿಂಸೆ ಮೊದಲಾದವುಗಳಿಂದ ಜೀವಿಸುತ್ತಿದ್ದ ಅವನ ದುರ್ವೃತ್ತಿಯನ್ನು ತಪ್ಪಿಸುವದಕ್ಕೆ ಇದೇ ಸಮಯವೆಂದು ಯೋಚಿಸಿ ತುಲಸೀದಾಸನು "ನೀನು ದುಷ್ಕೃತ್ಯವನ್ನು ಬಿಟ್ಟು ಭಕ್ತಿ ಮಾರ್ಗವನ್ನು ಅವಲಂಬಿಸಿದರೆ ನಿನ್ನಿಚ್ಛೆಯನ್ನು ನಡೆಸಿಕೊಡುವೆನು" ಎಂದು ಹೇಳಿದನು. ಆ ದನಕಾಯುವವನು ಅದರಂತೆ ನಡೆದು ಕೃತಾರ್ಥನಾದನು. ಹೀಗೆ ತುಲಸೀದಾಸನು ಸಮಯೋಚಿತವಾಗಿ ಜನರ ಮನಸ್ಸೆಂಬ ಬಳ್ಳಿಯನ್ನು ದುರ್ವಿಷಯಗಳೆಂಬ ವೃಕ್ಷಗಳಿಂದ ಮೆಲ್ಲಗೆ ಬಿಡಿಸಿ ಭಕ್ತಿ ಮಾರ್ಗವೆಂಬ ಕಲ್ಪವೃಕ್ಷಕ್ಕೆ ಹತ್ತಿಸುತ್ತಿದ್ದನು.

## ರಾಮನಾಮ ಮಹಿಮೆಯನ್ನು ತೋರಿಸಿದ್ದು

ತುಲಸೀದಾಸನು ಒಮ್ಮೆ ಒಂದು ಮನೆಯಲ್ಲಿರುವಾಗ "ಮಹಾ ಪಾತಕಿಯಾದ ನನಗೆ ರಾಮಭಕ್ತರು ಹಿಡಿಯನ್ನವನ್ನು ಹಾಕಿರಿ" ಎಂದು ಒಬ್ಬ ಭಿಕ್ಷುಕನು ಕೂಗುತ್ತ ಬಂದನು. ಆಗ ತುಲಸೀದಾಸನು ಅವನನ್ನು ಒಳಕ್ಕೆ ಕರೆದು ಅವನಿಂದ ರಾಮಭಜನೆಯನ್ನು ಮಾಡಿಸಿ ಶ್ರೀರಾಮನಿಗೆ ನೈವೇದ್ಯ ಮಾಡಿದ ಅನ್ನವನ್ನಿಟ್ಟು ತಾನು ಅವನ ಪಙ್ಕ್ತಿಯಲ್ಲಿ ಭೋಜನವನ್ನು ಮಾಡಿದನು. ಇದನ್ನು ತಿಳಿದು ಆ ಊರಿನ ಕರ್ಮಠರಾದ ಬ್ರಾಹ್ಮಣರು ತುಲಸೀದಾಸನ ಮೇಲೆ ರೇಗಲು, ರಾಮನಾಮ ಪ್ರಭಾವದಿಂದ ಅವನ ಪಾಪವು ಹೋಗಿ ಶುದ್ಧನಾಗಿರುವನೆಂದು ತುಲಸೀದಾಸನು ಸಾಧಿಸಿದನು. "ಹಾಗೆ ಅವನಲ್ಲಿ ಪಾಪದ ಲೇಶವಿಲ್ಲದ ಪಕ್ಷದಲ್ಲಿ ದೇವಸ್ಥಾನದಲ್ಲಿ ಶಿವಲಿಂಗದ ಮುಂದಿರುವ ಕಲ್ಲಿನ ಬಸವಣ್ಣನು ಅವನ ಕೈಯ ಹುಲ್ಲನ್ನು ತಿನ್ನಲಿ" ಎಂದು ಆ ಬ್ರಾಹ್ಮಣರು ಪರೀಕ್ಷೆಗೆ ನಿಂತರು. ಹಾಗೆಯೇ ಆಗಲೆಂದು ತುಲಸೀದಾಸನು ಆ ತಿರುಕನ ಕೈಯಿಂದ ಬಸವಣ್ಣನ ಮುಂದೆ ಹುಲ್ಲು ಹಾಕಿಸಲು ಅದು ಅದನ್ನು ತಿಂದು ತೇಗಿ ಗುಟರು ಹಾಕಿತೆಂದು ಹೇಳುತ್ತಾರೆ. ಹೀಗೆ ಕೆಲವು ಲೋಕಾತೀತವಾದ ಚಾತುರ್ಯಗಳಿಂದ ತುಲಸೀದಾಸನು ಜನರಿಗೆ ರಾಮನಾಮದ ಪ್ರಭಾವವನ್ನು ಮನಗಾಣಿಸಿ ಭಕ್ತಿಪಂಥವು ಮುಂದುವರಿಯುವಂತೆ ಮಾಡುತ್ತಿದ್ದನು.

## ಗ್ರಂಥರಚನೆ

ತುಲಸೀದಾಸನು ಅತ್ಯುತ್ತಮ ಕವಿಯಾಗಿದ್ದನು. ಅವನ ಗ್ರಂಥಗಳಲ್ಲಿ ವಿನಯ ಪತ್ರಿಕೆಯೆಂಬದೊಂದಿದೆ. ಅದರ ಪೂರ್ವೋತ್ತರ ವೇನೆಂದರೆ, ತುಲಸೀದಾಸನು ರಾಮನಾಮವನ್ನು ಹಬ್ಬಿಸಿ ಎಲ್ಲರ ಪಾಪಗಳನ್ನೂ ಕಳೆಯುತ್ತ ಬಂದದರಿಂದ ಕಲಿಪುರುಷನಿಗೆ ಕೋಪ ಬಂದು ಅವನು ಒಂದು ರಾತ್ರಿ ವಿಕಾರರೂಪದಿಂದ ಕಾಣಿಸಿಕೊಂಡು ತುಲಸೀದಾಸನಿಗೆ ಬೆದರಿಕೆಯನ್ನು ಹಾಕಿದನಂತೆ. ಆಗ ತುಲಸೀ ದಾಸನು ಮಾರುತಿಯನ್ನು ನೆನೆಯಲು ಮಾರುತಿಯು ಬಂದು "ನೀನು ರಾಮನಿಗೊಂದು ವಿನಯಪತ್ರಿಕೆಯನ್ನು ಬರೆ. ಶ್ರೀರಾಮನು ಕಲಿ

ಯನ್ನು ನಿಗ್ರಹಿಸುವಂತೆ ನಾನು ಮಾಡುತ್ತೇನೆ " ಎಂದು ಹೇಳಿದನಂತೆ. ಆದರಂತೆ ತುಲಸೀದಾಸನು ಶ್ರೀರಾಮನನ್ನು ಕುರಿತು ಜನರ ಪಾಪ ಪರಿಹಾರದ ವಿಷಯವಾಗಿ ವಿನಂತಿ ಮಾಡಿಕೊಂಡಿರುವ ಹಾಡುಗಳಿಗೆ ವಿನಯ ಪತ್ರಿಕೆಯೆಂಬ ಹೆಸರು ಬಂದಿದೆ. ಇದಲ್ಲದೆ ಗೀತಾವಳಿ, ಕವಿತಾವಳಿ, ದೋಹಾವಲಿ- ಎಂಬ ಗ್ರಂಥಗಳು ಆಗಿರುವವಲ್ಲದೆ ಭಕ್ತಿ ಪಂಥದ ಧ್ವಜಪ್ರಾಯವಾಗಿ ರಾಮಾಯಣ ಕಾವ್ಯವೇ ತುಲಸೀದಾಸನ ವಾಣಿಯಿಂದ ಹೊರಬಿದ್ದಿರುವದು. ಒಂದುದಿನ ಸ್ವಪ್ನದಲ್ಲಿ ಶ್ರೀರಾಮನು ಬಂದು ತನ್ನ ಚರಿತ್ರೆಯನ್ನು ದೇಶಭಾಷೆಯಲ್ಲಿ ಬರೆಯಹೇಳಿದ್ದರಿಂದ ತುಲಸೀದಾಸನು ಬರೆದಿರುವ ಆ ರಾಮಾಯಣವು ಪ್ರಾಸಾದಿಕ ವಾಣಿಯಿಂದ ಹೊರಟು ಭಕ್ತಿರಸದ ದೇವಗಂಗಾಸ್ವರೂಪವಾಗಿ ಜನರಲ್ಲಿ ಪೂಜ್ಯತೆಯನ್ನು ಪಡೆದು ಜನಮಂಡಲಿಯನ್ನೆಲ್ಲಾ ಪವಿತ್ರಗೊಳಿಸುತ್ತ ಪ್ರಸಿದ್ಧವಾಗಿದೆ. ಆದರಲ್ಲಿರುವ ಕರುಣಾರಸವೂ ವೀರರಸವೂ ಹೊಸ ಹೊಸ ಉಪಮಾನಗಳೂ ಲೋಕಕ್ಕೆ ಆದರ್ಶರೂಪವಾಗಿವೆ. ವಾಲ್ಮೀಕಿ ರಾಮಾಯಣದಲ್ಲಿ ವಿಸ್ತರಿಸಿರುವ ವಿಷಯಗಳು ಇದರಲ್ಲಿ ಸಂಕ್ಷಿಪ್ತ ವಾಗಿಯೂ ಆದರಲ್ಲಿ ಸಂಕ್ಷಿಪ್ತವಾಗಿರುವ ಸಂಗತಿಗಳು ಇದರಲ್ಲಿ ವಿಸ್ತಾರವಾಗಿಯೂ ವಿರಾಜಿಸುತ್ತಿರುವವು.

## ದೇಶಭಾಷಾಭಿಮಾನ

ಅಯೋಧ್ಯೆಯಲ್ಲಿ ಮೊದಲನೆ ಮೂರು ಕಾಂಡಗಳ ರಾಮಾಯಣ ವನ್ನು ಮುಗಿಸಿದ್ದ ತುಲಸೀದಾಸನು ಕಾಶಿಯಲ್ಲಿ ಅಸಿಘಾಟನಲ್ಲಿ ಲೋಲಾರ್ಕಕುಂಡದ ಹತ್ತಿರ ವಾಸವಾಗಿದ್ದಾಗ ತನ್ನ ರಾಮಾಯಣ ಗ್ರಂಥವನ್ನು ಹಿಂದೀ ಭಾಷೆಯಲ್ಲಿ ಬರೆದು ಮುಗಿಸಿದನು- ಒಂದುದಿನ ಅವನು ಮಣಿಕರ್ಣಿಕಾಘಾಟನಲ್ಲಿ ಸ್ನಾನಮಾಡುತ್ತಿರುವಾಗ ಒಬ್ಬ ಸಂಸ್ಕೃತ ಪಂಡಿತನು ಬಂದು " ರಾಮಾಯಣದಂಥ ಪವಿತ್ರಗ್ರಂಥವನ್ನು ಸಂಸ್ಕೃತದಲ್ಲಿ ಬರೆಯದೆ ಹೊಲಸಾದ ಹಿಂದಿಯಲ್ಲೇಕೆ ಬರೆದೆ?" ಎಂದು ಕೇಳಲಾಗಿ " ಮಹಾಸ್ವಾಮಿ, ಸಂಸ್ಕೃತಭಾಷೆಯಲ್ಲಿ ನಾಯಿಕಾ ವರ್ಣನೆ ಮೊದಲಾದವುಗಳನ್ನು ಬರೆಯುವದಕ್ಕಿಂತ ದೇಶಭಾಷೆಯಲ್ಲಿ ಧರ್ಮ ಗ್ರಂಥವನ್ನು ಬರೆಯುವದು ಒಳ್ಳೆಯದಲ್ಲವೇ ? ಒಂದು ಚಿನ್ನದ ಬಟ್ಟಲಲ್ಲಿ ವಿಷವೂ ಒಂದು ಮಣ್ಣಿನ ಕುಡಿಕೆಯಲ್ಲಿ ಅಮೃತವೂ ಇದ್ದರೆ

ವಿವೇಕಿಗೆ ತಿಳಿಸುವದು ಉಚಿತವಲ್ಲವೇ ಹೇಳಿ ?" ಎಂದು ಹೇಳಿ ಕಳುಹಿಸಿದನು. ತುಲಸೀದಾಸನಿಗೆ ಸಂಸ್ಕೃತದಲ್ಲಿ ಪಾಂಡಿತ್ಯವಿದ್ದರೂ ಕೂಡ ಜನಸಾಮಾನ್ಯಕ್ಕೆ ಸಂಸ್ಕೃತ ಗ್ರಂಥವು ತಿಳಿಯುವದಿಲ್ಲವೆಂದು ತಿಳಿದು ತುಲಸೀದಾಸನು ದೇಶಭಾಷೆಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟನು.

## ವಿಶೇಷ ವಿಚಾರ

ತುಲಸೀದಾಸನು ಬಹುಮಟ್ಟಿಗೆ ವಿಶಿಷ್ಟಾದ್ವೈತ ಪಂಥದವನಾದರೂ ಅವನು ಶ್ರೀಶಂಕರಾಚಾರ್ಯರ ಸಂಪ್ರದಾಯದ ಮಧುಸೂದನ ಸರಸ್ವತಿಗಳಲ್ಲಿ ಬಹು ವಿಶ್ವಾಸವುಳ್ಳವನಾಗಿದ್ದನು. ಇವನು ವಿಶಿಷ್ಟಾದ್ವೈತ ಪಂಥದವನಾದರೂ ಶಿವನಿಗೂ ತಕ್ಕಷ್ಟು ಪ್ರಾಶಸ್ತ್ಯವನ್ನು ಕೊಟ್ಟು ಉದಾರಬುದ್ಧಿಯನ್ನು ವ್ಯಕ್ತಪಡಿಸಿರುತ್ತಾನೆ. ಕಾಶಿಯಲ್ಲಿ ಅವನಿದ್ದ ಸ್ಥಲದಲ್ಲಿ ಈಗ ತುಲಸೀಘಾಟ ಎಂಬ ಘಾಟು ಇರುತ್ತದೆ. ತುಲಸೀದಾಸನು ಅಲ್ಲಿಯೇ ಒಂದು ದೇವಸ್ಥಾನವನ್ನು ಕಟ್ಟಿಸಿ ಮಾರುತಿಯ ಪ್ರತಿಷ್ಠೆಯನ್ನು ಮಾಡಿರುತ್ತಾನೆ. ಇವನು ಇತರ ಸಾಧು-ಸಂತರಂತೆ ಭಿಕ್ಷುಕನಾಗಿದ್ದರೂ ಮಾನಸಿಂಗ ಮತ್ತು ಜಗತ್ಸಿಂಗ ಮೊದಲಾದ ಶ್ರೀಮಂತರು ಇವನಿಗೆ ನಡೆದುಕೊಳ್ಳುತ್ತಿದ್ದರು. ಈ ಪ್ರಕಾರ ತನ್ನ ಪ್ರಭಾವದಿಂದ ಜನರನ್ನು ಆಕರ್ಷಣೆಮಾಡಿ ತೊಂಬತ್ತೊಂದು ವರ್ಷ ಅವಿಚ್ಛಿನ್ನವಾಗಿ ಭಕ್ತಿಪಂಥಕ್ಕಾಗಿ ತನುಮನಧನಗಳನ್ನು ಧಾರೆಯೆರದು ತುಲಸೀದಾಸನು ಕ್ರಿ. ೧೬೨೩ರಲ್ಲಿ ಈ ಲೋಕಬಂಧನದಿಂದ ಮುಕ್ತನಾದನು.

# ತುಕಾರಾಮ

## ಹುಟ್ಟು

ಧರ್ಮಭೂಮಿಯಾದ ಭರತಖಂಡದಲ್ಲಿ ಧರ್ಮಮೂರ್ತಿಗಳಿಂದ ಮತ್ತು ಧರ್ಮ ಗ್ರಂಥಗಳಿಂದ ಭಾಷಾಭಿವೃದ್ಧಿಯಾಗುವ ವಾಡಿಕೆಯು ಬಹು ದಿವಸಗಳಿಂದ ನಡೆದುಕೊಂಡು ಬಂದಿರುವದು. ಸಂಸ್ಕೃತಕ್ಕೆ ಮಾತ್ರ ಅನ್ವಯಿಸುತ್ತಿದ್ದ ಆ ನಿಯಮವು ದೇಶಭಾಷೆಗೂ ಸಲ್ಲುವಂತೆ ಮಾಡಿದ ಶ್ಲಾಘನೆಯು ತುಕಾರಾಮನಿಗೆ ಬಹು ಚೆನ್ನಾಗಿ ಒಪ್ಪುವದು. ಯಾವನು ಮಹಾಸಾಧುವೂ ವರಕವಿಯೂ ಆದ ತನ್ನ ಜನ್ಮದಿಂದ ಪುಣೆಯ ಹತ್ತರ ಇಂದ್ರಾಯಣೀನದಿಯ ದಡದಲ್ಲಿರುವ ದೇಹು ಎಂಬ ಗ್ರಾಮವನ್ನು ಭೂವೈಕುಂಠದಂಥ ಪುಣ್ಯಕ್ಷೇತ್ರವಾಗಿ ಮಾಡಿರುವನೋ ಆ ಮಹಾಮಹಿಮನು ಶೂದ್ರಜಾತಿಯಲ್ಲಿ ವ್ಯಾಪಾರವೃತ್ತಿಯಲ್ಲಿದ್ದ ಬೊಲ್ಹೊಬಾ ಮತ್ತು ಕನಕಾಯಿ ಎಂಬ ಪವಿತ್ರ ದಂಪತಿಗಳ ಗರ್ಭದಿಂದ ಕ್ರಿ. ಶ. ೧೬೦೮ ರಲ್ಲಿ ಆವಿರ್ಭವಿಸಿದನು. ಆ ಮನೆತನವು ಪಂಢರ ಪುರದ ವಿಠೋಬನ ಮೇಲಿನ ಏಕನಿಷ್ಠೆಯಲ್ಲಿಯೂ, ದಾನಧರ್ಮ ಗಳನ್ನು ಮಾಡುವದರಲ್ಲಿಯೂ ಹೆಸರುಗೊಂಡಿತ್ತು. ಪೂರ್ವಿಕರ ಆ ಪುಣ್ಯವೆಲ್ಲಾ ಏಕೀಭವಿಸಿ ಮೂರ್ತಿಗೊಂಡಂತೆ ತುಕಾರಾಮನ ಪರಿ ಸ್ಥಿತಿಯು ಪರಿಣಮಿಸುವದಕ್ಕೆ ಮೊದಲಾಯಿತು.

## ಬಾಲ್ಯ

ಸಾಮಾನ್ಯವಾಗಿ ಹುಡುಗರ ಪ್ರವೃತ್ತಿಯೆಲ್ಲಾ ಹೊರಹೊರಗೆ ಹರಿದಾಡುತ್ತ ಹೋಗುವ ರೂಢಿಯೇ ಹೆಚ್ಚು. ತುಕಾರಾಮನ ಸ್ವಭಾವವು ಒಂದು ಬಗೆಯಾಗಿ ವಿಲಕ್ಷಣವಾಗಿತ್ತು. ಯಾವ ಆಟಪಾಟಗಳೂ ಯಾವ ವಿನೋದಗಳೂ ತುಕಾರಾಮನ ಮನಸ್ಸನ್ನು 'ತಮ್ಮ ಕಡೆಗೆ

ಒಲಿಸಿಕೊಳ್ಳಲಿಕ್ಕೆ ಶಕ್ಯವಾಗಲಿಲ್ಲ. ತುಕಾರಾಮನು ಚಿಕ್ಕಂದಿನಿಂದ ಒಂದುಕಡೆಯಲ್ಲಿ ತೆಪ್ಪಗೆ ಕೂತು ಏನನ್ನೋ ಏಕಮನಸ್ಕನಾಗಿ ಚಿಂತಿಸುವ ಸ್ವಭಾವದವನಾಗಿದ್ದನು. ಒಂದೊಂದು ವೇಳೆ ಅವನು ಇತರ ಕಾರ್ಯಗಳಲ್ಲಿ ತೊಡಗಿದರೂ ಕೂಡ ಅವನ ಮನಸ್ಸಿನ ಒಲಿಮೆಯು ಆ ಕಾರ್ಯಗಳ ಕಡೆಗೆ ವಿಶೇಷವಾಗಿದ್ದ ಹಾಗೆ ತೋರುತ್ತಿರಲಿಲ್ಲ. ಅವನು ಈ ಸ್ಥಿತಿಯಲ್ಲಿರುವಾಗ ಕನಕಾಯಿಯು ಮೊದಮೊದಲು ಅವನನ್ನು ದನಕಾಯುವದಕ್ಕೆ ಕಳುಹಿಸಲು ಮೊದಲುಮಾಡಿದಳು. ಈ ಕೆಲಸದಲ್ಲಿ ತುಕಾರಾಮನು ಪೂರ್ಣ ಮನಸ್ಸನ್ನು ಇಡದೆ ಹೋದದರಿಂದ ಜೊತೆಯ ಹುಡುಗರು ದಾಕ್ಷಿಣ್ಯಕ್ಕಾಗಿ ತುಕಾರಾಮನ ಕೆಲಸವನ್ನು ತಾವು ಸಾಗಿಸಬೇಕಾಗಿತ್ತು. ಕೆಲವು ದಿವಸ ಹೀಗೆ ನಡೆದ ಮೇಲೆ ಆ ಹುಡುಗರು ಬೇಸರಗೊಂಡು ಈ ವಿಚಾರವನ್ನು ಕನಕಾಯಿಯ ಕಿವಿಯ ಮೇಲೆ ಹಾಕಿದರು. ಕನಕಾಯಿಯು ತುಕಾರಾಮನ ಮೇಲೆ ಸಿಟ್ಟುಗೊಂಡು, "ಇಷ್ಟು ಕೆಲಸವು ಸಾಗದ ಮೇಲೆ ಸಾಯುವದೊಳ್ಳೇದು" ಎಂದು ಬೈದಳು. ಆ ದಿನ ಎಂದಿನಂತೆ ಜೊತೆಯ ಹುಡುಗರೊಡನೆ ದನಕಾಯುವದಕ್ಕೆ ಹೋದಂಥ ಸರಳ ಬುದ್ಧಿಯ ತುಕಾರಾಮನು ತನ್ನ ಗೆಳೆಯರನ್ನು ಕೂಡಿಸಿಕೊಂಡು "ನಮ್ಮವ್ವನು ನನಗೆ ಸಾಯಹೇಳಿದ್ದಾಳೆ; ಆದ್ದರಿಂದ ಸಾಯುವದು ಹೇಗೆಂಬದನ್ನು ಹೇಳಿರಿ" ಎಂದು ಕೇಳಿದನು. ಈ ಮಂಕನಿಂದ ತಾವು ಒಂದು ವಿನೋದದಾಟವನ್ನು ಆಡಬೇಕೆಂದು ಯೋಚಿಸಿ ಆ ಹುಡುಗರೆಲ್ಲರೂ ಅವನನ್ನು ಕಟ್ಟಿ ಹೊತ್ತು ನದಿಯ ದಂಡೆಯ ಮೇಲಿಟ್ಟು ಕಟ್ಟಿಗೆಯನ್ನು ಹೇರಿ ಹೀಗೆಯೇ ಸಾಯುವದೆಂದು ಹೇಳಿ ತಮ್ಮ ದನಕರುಗಳನ್ನಷ್ಟೇ ಹೊಡೆದುಕೊಂಡು ಕೇಕೆಯನ್ನು ಹಾಕುತ್ತ ತಮ್ಮ ತಮ್ಮ ಮನೆಗಳಿಗೆ ಹೋದರು. ಎಷ್ಟು ಹೊತ್ತಾದರೂ ದನಗಳೂ ಮಗನೂ ಬಾರದೆ ಇರುವದನ್ನು ನೋಡಿ ಕನಕಾಯಿಯು ಬಂದು ಕೇಳಿದಾಗ, ಹುಡುಗರು ನಗುತ್ತ ನಡೆದ ಸಂಗತಿಯನ್ನು ಹೇಳಿದರು. ಅದನ್ನು ಕೇಳುತ್ತಲೆ ಕನಕಾಯಿಯ ಹೊಟ್ಟೆ ಧಗ್ಗೆಂದಿತು; ಎಂತಹ ಮಂಕನಾಗಲಿ ಮಗನಲ್ಲವೇ? ಕನಕಾಯಿಯು ಗಾಬರಿಗೊಂಡು ನದಿಗೆ ಹೋಗಿ ಮಗನ ಹೆಸರನ್ನು ಹಿಡಿದು ಕೂಗುತ್ತಲೆ ತುಕಾರಾಮನು ಪ್ರತಿಧ್ವನಿಯನ್ನು

ಕೊಟ್ಟನು. ತಾಯಿಯು ಆ ದುರವಸ್ಥೆಯನ್ನು ನೋಡಿ ಮಗನನ್ನೆಬ್ಬಿಸಿ ಕರೆದುಕೊಂಡು ಬಂದು ಬುದ್ಧಿಯನ್ನು ಹೇಳಿದಳು. ತುಕಾರಾಮನಿಗೆ ತಂದೆತಾಯಿಗಳ ಮಾತೆಂದರೆ ಇಷ್ಟು ಶ್ರದ್ಧೆ ಇತ್ತು. ಅಲ್ಲಿಂದ ಮೆಲ್ಲ ಮೆಲ್ಲನೆ ತಾಯಿತಂದೆಗಳು ಅವನಿಗೆ ತಮ್ಮ ಮನೆದೇವರಾದ ವಿಠೋಬನ ಪೂಜೆಯನ್ನೂ ವ್ಯಾಪಾರವನ್ನೂ ಕಲಿಸಿ, ಹಾಗೂ ಹೀಗೂ ಗೃಹ ವ್ಯವಸ್ಥೆಯ ಭಾರವನ್ನು ಅವನ ಮೇಲೆ ಹೇರುವ ಎತ್ತುಗಡೆಯನ್ನು ಮಾಡಿದರು. ಯಾವದನ್ನೂ ಒಲ್ಲೆನೆನ್ನದೆ ತುಕಾರಾಮನು ಎಲ್ಲವನ್ನೂ ನಿರ್ವಹಿಸುತ್ತ ಬಂದನು. ಈ ಸಮಯದಲ್ಲಿ ಅವನಿಗೆ ಬರಬರುತ್ತ ನಾಮದೇವ, ಜ್ಞಾನದೇವ ಮೊದಲಾದವರ ಅಭಂಗಗಳ ನಾದ ಹತ್ತಿತು. ಆದರಲ್ಲಿ ಅವನು ತನ್ಮಯನಾಗಿ ಯಾವಾಗಲೂ ಅವುಗಳನ್ನೇ ಹಾಡಿಕೊಳ್ಳುತ್ತ ತಮ್ಮ ಮನೆಯ ಕೆಲಸಗಳನ್ನು ಮಾಡುತ್ತಿದ್ದನಲ್ಲದೆ ಅತಿಥಿಗಳನ್ನು ಆದರದಿಂದ ಸತ್ಕರಿಸುತ್ತ, ನೆರೆಹೊರೆಯವರಿಗೆಲ್ಲಾ ಪ್ರತಿಯೊಂದು ಕೆಲಸಕ್ಕೂ ನೆರವಾಗುತ್ತ, ಸಮಸ್ತರೂ ತನ್ನವರೆಂಬ ಉದಾತ್ತ ಭಾವನೆಯನ್ನಿಟ್ಟುಕೊಂಡು ವ್ಯವಹರಿಸುತ್ತ, ದಿಕ್ಕಿಲ್ಲದ ದನಕರುಗಳಿಗೆ ಹುಲ್ಲುಮೇವುಗಳನ್ನು ಹಾಕುತ್ತ, ಪರಚಿಂತನದಲ್ಲಿ ಕಾಲವನ್ನು ಕಳೆದನು. ಹೀಗಿರುವಾಗ ಮೊದಲು ಒಂದು ಲಗ್ನವಾಗಿ ಆಕೆಯು ಶ್ವಾಸರೋಗದಿಂದ ಪೀಡಿತಳಾಗಿದ್ದದರಿಂದ ಜೀಜಾಯಿ ಎಂಬ ಮತ್ತೊಬ್ಬಾಕೆಯೊಡನೆ ಎರಡನೇ ಲಗ್ನವಾಯಿತು. ದಿನದಿನಕ್ಕೆ ಆದಾಯವು ಬೆಳೆದು ಎಲ್ಲವೂ ಸುಸ್ಥಿತಿಯಲ್ಲಿ ನಾಲ್ಕಾರು ವರ್ಷಗಳವರೆಗೆ ಸಾಗಿತು.

## ದುರ್ದಶೆ

ತುಕಾರಾಮನು ಸಂಸಾರದ ಸುಖವನ್ನು ಬೆಳೆಸಿಕೊಳ್ಳುವದು ಭಗವಂತನ ಮನಸ್ಸಿಗೆ ಬರಲಿಲ್ಲವೆಂದು ತೋರುತ್ತದೆ. ಆದ್ದರಿಂದ ಮೆಲ್ಲಮೆಲ್ಲನೆ ಒಂದರ ಹಿಂದೊಂದು ಅನರ್ಥಗಳು ಧುಮುಕುವದಕ್ಕೆ ಮೊದಲಾದವು. ವೀರಕ್ಷಾಮವೊಂದು ಬಂದು ಕಾಲುಹಾಕಿತು. ತುಕಾರಾಮನ ಆದಾಯದ ಹಾದಿಗೆಲ್ಲಾ ಮುಳ್ಳುಬಿತ್ತು. ಇಷ್ಟೇ ಅಲ್ಲ; ಮನೆಯಲ್ಲಿ ಕೂಡಿಟ್ಟಿದ್ದ ಹಣಕಾಸೂ ಕಾಳುಕಡಿಯೂ ಹೋಗಿ

ನೆಯು ಕಸಾಗುಡಿಸಿದಂತಾಯಿತು. ಇಷ್ಟರಲ್ಲಿ ಹಣ್ಣುಹಣ್ಣು ಮುದು ರಾದ ತಂದೆತಾಯಿಗಳು ಸ್ವಲ್ಪ ದಿವಸಗಳಲ್ಲಿಯೇ ಒಬ್ಬರಹಿಂದೊಬ್ಬರು ಮ್ಮ ದಾರಿಯನ್ನು ಹಿಡಿದು ಹೋದರು. ಮೊದಲನೇ ಹೆಂಡತಿಯೂ ಕೆಯ ಹೊಟ್ಟೆಯಲ್ಲಿ ಹುಟ್ಟಿದ ಒಬ್ಬ ಮಗನೂ ಅನ್ನ ಅನ್ನವೆಂದು ಂಬಲಿಸುತ್ತ ಪ್ರಾಣವನ್ನು ಬಿಟ್ಟರು. ಈ ಸಮಯದಲ್ಲಿ ತುಕಾ ಾಮನು ಅವರ ಹೊಟ್ಟೆಗಾಗಿ ಹೆಗಲಿಗೆ ಜೋಳಿಗೆಯನ್ನು ಕೂಡ ಹಾಕಿ ೋಡಿದನು. ಎಲ್ಲರೂ ಇವನನ್ನು ನೋಡಿ ನಕ್ಕು ಹೀಯಾಳಿಸಿದರೇ ೊರತು ಒಬ್ಬರೂ ಕನಿಕರವನ್ನು ತೋರಿಸಲಿಲ್ಲ. ಇವೆಲ್ಲವುಗಳ ಜೊತೆಗೆ ನ್ನ ಅತ್ತಿಗೆಯೊಬ್ಬಳು ಸಾಯಲು ವಿರಕ್ತನಾಗಿದ್ದ ಅಣ್ಣನು ಮನೆ ರುಲ್ಲಿರುವದನ್ನು ಕೂಡ ಬಿಟ್ಟು ತೀರ್ಥಯಾತ್ರೆಗೆ ಹೊರಟುಹೋದನು. ದ್ದರಿಂದ ಸಂಸಾರದ ಭಾರವೆಲ್ಲಾ ತುಕಾರಾಮನ ಮೇಲೆ ಪೂರ್ಣವಾಗಿ ಿತ್ತು.

## ಏಕಾಂತವಾಸ

ಹೀಗೆ ಎಲ್ಲರೂ ಸತ್ತು ಕೆಟ್ಟು ಹೋಗಿ ತನ್ನ ಹೆಂಡತಿ ಮಕ್ಕಳು ೂಡ ತನ್ನ ಗಂಟಲಿಗೆ ಗಾಣವಾಗಿ ಇರುವದನ್ನು ನೋಡಿ ತುಕಾರಾಮ ಗೆ ಸಂಸಾರವು ಬಹಳ ಅಸಹ್ಯವೆನಿಸಿತು. ಆಗ ಅವನು ತನ್ನಲ್ಲಿ ಾನೇ ವಿಚಾರಮಾಡಿ ಈ ದುರ್ವಾಸನೆಯಿಂದ ದೂರ ಹೋಗುವದೇ ೇಕ್ಕದ್ದೆಂದು ನಿಶ್ಚಯಿಸಿ ಯಾರಿಗೂ ಹೇಳದೆ ಸಮೀಪದಲ್ಲಿದ್ದ ಒಂದು ೆಟ್ಟಕ್ಕೆ ಹೋಗಿ ಗುಹೆಯಲ್ಲಿ ಕುಳಿತು ಧ್ಯಾನಾರೂಢನಾಗಿಬಿಟ್ಟನು. ತ್ತ ಹೆಂಡತಿ ಮಕ್ಕಳು ಕಣ್ಣು ಕಣ್ಣು ಬಿಡುತ್ತ ಕೂತರು. ಇದನ್ನು ೋಡಿ ಅವನಿಗಿದ್ದ ಒಬ್ಬನೇ ಒಬ್ಬ ತಮ್ಮನು ಅವನನ್ನು ಹುಡುಕಿ ೊಂಡು ಬಂದು ಹದಿನೇಳು ದಿನಗಳ ಮೇಲೆ ಅವನನ್ನು ಕಂಡು ಮಾಧಾನಗೊಳಿಸಿ ಹುರಿದುಂಬಿಸಿ ಮನೆಗೆ ಕರೆದನು. ಅದಕ್ಕೊಪ್ಪಿ ರುತ್ತ ತುಕಾರಾಮನು ಇಂದ್ರಾಯಣೀ ನದಿಯ ದಡದಲ್ಲಿ ವಿಶ್ರಮಿಸಿ ೊಳ್ಳುತ್ತ ತಮಗೆ ಇತರರಿಂದ ಬರಬೇಕಾದ ಹಣ ಕಾಸುಗಳ ಲೆಖ್ಖ ನ್ನು ನೋಡಬೇಕೆಂದು ಅಪೇಕ್ಷಿಸಿ ತನ್ನ ತಮ್ಮನಿಗೆ ಆ ಕಾಗದ ತ್ರಗಳನ್ನು ತರಹೇಳಿದನು. ತಮ್ಮನು ಅವುಗಳನ್ನೆಲ್ಲಾ ತಂದು

ಅಣ್ಣನ ಮುಂದಿಟ್ಟನು. ಬಹು ಜನಗಳಿಂದ ಇವರಿಗೆ ಬಹಳ ಹಣ ಬರಬೇಕಾಗಿತ್ತು. ಆಗ ತುಕಾರಾಮನು ಆ ಬರಗಾಲದ ಬೇಗೆಯನ್ನು ಮನಸ್ಸಿನಲ್ಲಿ ವಿಚಾರಮಾಡಿದವನಾಗಿ ಈ ಸಮಯದಲ್ಲಿ ಹಣಕ್ಕಾಗಿ ಯಾರನ್ನೂ ಪೀಡಿಸಬಾರದೆಂದು ಯೋಚಿಸಿ ಅದಕ್ಕೆ ಮುಂದೆ ತಮಗೆ ಅವಕಾಶವೇ ಇಲ್ಲದಿರುವಂತೆ ಆ ಕಾಗದಪತ್ರಗಳನ್ನೆಲ್ಲಾ ಇಂದ್ರಾಣಿಯ ನೀರುಪಾಲು ಮಾಡಬೇಕೆಂದು ತಮ್ಮನಿಗೆ ಹೇಳಿದನು. ಪ್ರಾಪಂಚಿಕ ನಾದ ತಮ್ಮನು ಅದಕ್ಕೊಪ್ಪಲಿಲ್ಲ. ಆಗ ತುಕಾರಾಮನು ಅಲ್ಲಿಯೇ ಅದನ್ನು ಪಾಲುಮಾಡಿ ತನ್ನ ಭಾಗವನ್ನು ನದಿಯಲ್ಲಿ ಮುಳುಗಿಸಿಬಿಟ್ಟು ಊರಿಗೆ ಬಂದು ತಮ್ಮನಿಂದ ವಿಭಕ್ತನಾಗಿ ಮನೆಯಲ್ಲಿ ನಿಂತನು. ತುಕಾರಾಮನು ತಾನು ತಪಸ್ಸು ಮಾಡಿದ ಬೆಟ್ಟದ ಮೇಲೆ ಸ್ಥಾಪಿಸಿದ ಪಾದುಕೆಗಳು ಈಗಲೂ ಅಲ್ಲಿ ಪೂಜೆಯನ್ನು ಪಡೆಯುತ್ತಿವೆ. ತುಕಾರಾಮನು ಮನೆಗೆ ಬಂದರೂ ಮನೆಯ ಕೆಲಸಗಳನ್ನೇನೂ ತೆಗೆದುಕೊಳ್ಳಲಿಲ್ಲ. ಬೆಳಗಾಗುತ್ತಲೇ ಸ್ನಾನ, ವಿಠೋಬನ ಪೂಜೆ, ಅಲ್ಲಿಂದ ತನ್ನ ಗುಹೆಗೆ ಹೋಗಿ ಅಲ್ಲಿ ಧ್ಯಾನ, ಅಖಂಡ ನಾಮಸ್ಮರಣ, ಸಾಯಂಕಾಲ ವಿಠೋಬನ ದೇವಾಲಯದಲ್ಲಿ ಭಜನ — ಇವೇ ಅವನ ದಿನಚರ್ಯೆಗಳಾದವು. ಅವನಿಗೆ ಅನ್ನದ ಕಡೆಯ ಗೀಳು ಇಲ್ಲದೆ ಹೋದದರಿಂದ ಜೀಜಾಬಾಯಿಯು ತಾನಾಗಿ ಕನಿಕರದಿಂದ ಬೆಟ್ಟದತನಕ ಹೊತ್ತುಕೊಂಡು ಹೋಗಿ ಅವನ ಹೊಟ್ಟೆಗೆ ಹಾಕಬೇಕಾಗಿತ್ತು. ಒಮ್ಮೆ ಆಕೆಯು ಗಂಡನಿಗೆ ಎಡೆಯನ್ನು ಹೊತ್ತುಕೊಂಡು ಹೋಗುತ್ತ ದಾರಿಯಲ್ಲಿ ದೊಡ್ಡದೊಂದು ಮುಳ್ಳನ್ನು ತುಳಿದು ಅದರಿಂದ ಅಪಾರ ದುಃಖವನ್ನು ಅನುಭವಿಸಿ, ತಂದಿದ್ದ ಆಹಾರವನ್ನು ಚೆಲ್ಲಿಕೊಂಡು, ಬರಿಗೈಯ್ಯಲ್ಲಿ ಗಂಡನನ್ನು ಕಾಣಬೇಕಾಯಿತು. ಅದನ್ನು ನೋಡಿ ತುಕಾರಾಮನ ಮನಸ್ಸು ಕರಗಲು ಅಂದಿನಿಂದ ಅವನು ಆ ಬೆಟ್ಟವನ್ನು ಬಿಟ್ಟು ಮನೆಯಲ್ಲಿಯೇ ಇರುವದಕ್ಕಾರಂಭಿಸಿದನು. ಅಷ್ಟೇ ಅಲ್ಲ, ಒಂದೊಂದು ವೇಳೆ ಭಿಕ್ಷವನ್ನು ಬೇಡಿದ್ದಲ್ಲದೆ ತನ್ನ ಉಪಾಸನೆಗೆ ಅಡ್ಡಬಾರದಹಾಗೆ ಹೊಟ್ಟೆಗಾಗಿ ಏನಾದರೊಂದು ಉದ್ಯೋಗವನ್ನು ಮಾಡುವದಕ್ಕೆ ಸಿದ್ಧನಾದನು.

## ಉಪಾಸನೆ ಮತ್ತು ವ್ಯವಹಾರ

ಒಂದುದಿನ ಬೆಳಗಿನ ಜಾವದಲ್ಲಿ ಕನಸಿನಲ್ಲಿ ತಾನು ಗಂಗಾ ಸ್ನಾನಕ್ಕೆ ಹೋಗುತ್ತಿದ್ದಾಗ ಒಬ್ಬ ಬ್ರಾಹ್ಮಣನು ಬಂದು ರಾಮಕೃಷ್ಣ ಮಂತ್ರವನ್ನು ಉಪದೇಶ ಮಾಡಿದಂತೆ ಆಯಿತು. ಅದರ ಸಿದ್ಧಿಯನ್ನು ಪಡೆಯಬೇಕೆಂದು ಅವನು ನಿದ್ರೆಯನ್ನು ಬರಗೊಡದೆ ಇರುವದಕ್ಕಾಗಿ ತನ್ನ ಜುಟ್ಟನ್ನು ಜಂತೆಗೆ ಕಟ್ಟಿ ನಾಮಸ್ಮರಣೆಯನ್ನು ಮಾಡುತ್ತಿದ್ದನು. ಒಂದುದಿನ ನದಿಯ ದಂಡೆಯ ಮೇಲೆ ಹಾಡಿಕೊಂಡು ಕೂತಿರುವ ತುಕಾರಾಮನನ್ನು ನೋಡಿ ಒಬ್ಬ ಒಕ್ಕಲಿಗನು ಇವನನ್ನು ತನ್ನ ಹೊಲ ವನ್ನು ಕಾಯಲಿಕ್ಕಿಟ್ಟು ತಾನು ಗ್ರಾಮಾಂತರಕ್ಕೆ ಹೋದನು. ಇತ್ತ ತುಕಾರಾಮನು ನಾಮಸ್ಮರಣೆಯಲ್ಲಿ ಮಗ್ನನಾಗಿರುವಾಗ ಬೆಳೆದು ನಿಂತಿದ್ದ ಪೈರನ್ನೆಲ್ಲ ಪಕ್ಷಿಗಳು ಬರಿದು ಮಾಡಿದ್ದವು. ಹೊಲದವನು ಹಿಂದಿರುಗಿ ಬಂದು ಪೈರೆಲ್ಲಾ ಬರಿದಾಗಿ ನಿಂತಿರುವದನ್ನು ನೋಡಿ ಇವ ನನ್ನು ಹೊಡೆದು ಬಡಿದು ನಾಲ್ವರ ಮುಂದೆ ನಿಲ್ಲಿಸಿ ಅದರ ನಷ್ಟವನ್ನು ತುಂಬಿಕೊಡುವೆನೆಂದು ಇವನಿಂದ ಪತ್ರವನ್ನು ಬರೆಸಿಕೊಂಡನು. ಆಮೇಲೆ ಅದರಲ್ಲಿ ಹೇಗೋ ಬಹು ಹುಲಸಾಗಿ ಬೆಳೆಬಂತು. ಪಾಪ ಭೀರುವಾಗಿದ್ದ ಆ ಹೊಲದವನು ತನಗೆ ಬಂದ ಹೆಚ್ಚಿನ ಆದಾಯ ವನ್ನು ತುಕಾರಾಮನಿಗೇ ಕೊಡಹೋದನು. ತುಕಾರಾಮನು ತಾನು ನಿಷ್ಕಾರಣವಾಗಿ ಪರಿಗ್ರಹ ಮಾಡುವವನಲ್ಲವೆಂದು ಹೇಳಿಬಿಟ್ಟನು. ಆಮೇಲೆ ಹೊಲದವನು ಆ ಹಣವನ್ನು ತುಕಾರಾಮನ ಪೂರ್ವಿಕರ ವಿಠೋಬನ ದೇವಾಲಯದ ಜೀರ್ಣೋದ್ಧಾರಕ್ಕೆ ವಿನಿಯೋಗ ಮಾಡಿ ದನು. ಮತ್ತೊಂದು ವೇಳೆ ತುಕಾರಾಮನು ಹಾದುಹೋಗುವಾಗ ಪೈರಿನ ಮೇಲೆ ಕುಳಿತಿದ್ದ ಪಕ್ಷಿಗಳು ಬೆದರಿ ಏಳಲು, ತನ್ನಿಂದ ಅವುಗಳ ವಿಹಾರಕ್ಕೆ ಅಡ್ಡಿಯಾಗಬಾರದೆಂದು ಕೊನೆಗೆ ಆವು ತನ್ನ ಮೈಮೇಲೆ ಕುಳಿತು ನಿರ್ಭಯದಿಂದ ತಿನ್ನುವಂತೆ ಆಗುವವರಿಗೂ ಅಲುಗಾಡದಂತೆ ಕೂತುಬಿಟ್ಟನು. ಈ ರೀತಿಯಾಗಿ ಭೂತದಯೆಯನ್ನು ತೋರಿಸುತ್ತಿದ್ದ ತುಕಾರಾಮನಿಗೆ ಒಂದುದಿನ ಕನಸಿನಲ್ಲಿ ನಾಮದೇವನು ಪಾಂಡುರಂಗ ನೊಡನೆ ಬಂದು ತಾನು ಮಾಡಿರುವ ಅಭಂಗಗಳ ಸಂಖ್ಯೆಯು ನೂರು ಕೋಟಿಯನ್ನು ಮುಟ್ಟುವಂತೆ ನೀನು ಪೂರ್ಣಮಾಡೆಂದು ಹೇಳಿದ

ಹಾಗೆ ಆಯಿತು. ಅಂದಿನಿಂದ ಅವನಿಗೆ ಕವಿತೆಯ ಲಹರಿ ಹತ್ತಿತು. ಇದರ ಜೊತೆಗೆ ಅವನಿಗೆ ಕೀರ್ತನಕಾರರ ಸಮಾಗಮವು ಹೆಚ್ಚಾಗಿ ಅವರ ಹಿಮ್ಮೇಳಕ್ಕೆ ನಿಲ್ಲುವದು ಮೊದಲಾದ ಅಭ್ಯಾಸವಾಗಿ ಕೊನೆಗೆ ತುಕಾರಾಮನೇ ಕೀರ್ತನಕ್ಕೆ ನಿಂತು ರಂಗಸ್ಥಲದಲ್ಲಿಯೇ ಹೊಸಹೊಸ ಅಭಂಗಗಳನ್ನು ಮಾಡಿ ಹೃದಯಂಗಮವಾಗಿ ಹಾಡುವದಕ್ಕಾರಂಭಿಸುತ್ತಲೇ ಜನರೆಲ್ಲರೂ ಚಿತ್ರದ ಪ್ರತಿಮೆಗಳಾಗುತ್ತ ಬಂದರು. ವೇದ ವೇದಾಂತಗಳ ತಿರುಳೆಲ್ಲಾ ಸ್ವಯಂಸ್ಫೂರ್ತಿಯಿಂದ ಅಭಂಗಗಳಲ್ಲಿ ಹರಿಯುತ್ತಲೇ ಎಲ್ಲರ ಕಿವಿಗೂ ಅಮೃತದ ಸೋನೆ ಸುರಿದಂತಾಗುತ್ತಿತ್ತು.

## ಕಷ್ಟಸಹನ

ಶೂದ್ರನಾದ ತುಕಾರಾಮನಿಗೆ ಬ್ರಾಹ್ಮಣನಾದ ತನಗಿಂತಲೂ ಹೆಚ್ಚು ಘನತೆ ಸಿಕ್ಕುತ್ತಿರುವದನ್ನು ಕಂಡು ಮುಂಬಾಜಿ ಎಂಬವನು ಹೊಟ್ಟೆಯಲ್ಲಿ ಉರಿಬಿದ್ದವನಾಗಿ ತುಕಾರಾಮನ ಮೇಲೆ ತನ್ನ ರೊಚ್ಚನ್ನು ತೀರಿಸಿಕೊಳ್ಳುವ ದಾರಿಯನ್ನು ನೋಡುತ್ತಿದ್ದನು. ಒಮ್ಮೆ ವಿಠೋಬನ ದೇವಸ್ಥಾನದ ಹಾದಿಯಲ್ಲಿ ಮುಂಬಾಜಿಯು ತೋಟಕ್ಕೆ ಬೇಲಿಯನ್ನು ಹಾಕಿಸಿದ್ದನು. ಒಂದು ಕೀರ್ತನದ ದಿನ ಜನರಿಗೆ ಮುಳ್ಳುಗಿಡಗಳಿಂದ ತೊಂದರೆಯಾಗುವದೆಂದು ತುಕಾರಾಮನು ಅವುಗಳನ್ನು ತೆಗೆದು ದಾರಿಯನ್ನು ಸರಿಮಾಡಿದನು. ಇದನ್ನೊಂದು ಅಪರಾಧವಾಗಿ ಭಾವಿಸಿ ಆ ಬ್ರಾಹ್ಮಣನು ತುಕಾರಾಮನನನ್ನು ಸಾಯುವಹಾಗೆ ಬಡಿದನು. ಆದರೂ ಸಹನಮಾಡಿಕೊಂಡ ತುಕಾರಾಮನು ಮರುದಿನ ಆ ಬ್ರಾಹ್ಮಣನ ಬಳಿಗೆ ಬಂದು ಕ್ಷಮಿಸಬೇಕೆಂದು ಕೇಳಿಕೊಂಡನು. ಅಷ್ಟರಲ್ಲಿ ತುಕಾರಾಮನ ಸಾಧುತ್ವದ ಮಹಿಮೆಯು ಆ ಬ್ರಾಹ್ಮಣನಿಗೆ ತಿಳಿದು ಅವನು ತಾನೇ ತುಕಾರಾಮನ ಶಿಷ್ಯನಾದನು. ವಾಘೋಲಿ ಎಂಬ ಗ್ರಾಮದಲ್ಲಿ ರಾಮೇಶ್ವರಭಟ್ಟನೆಂಬ ಸ್ವಪ್ರತಿಷ್ಠಾಕಾಮಿಯಾದ ಒಬ್ಬ ಬ್ರಾಹ್ಮಣನು ರಾಜಕೀಯಾಧಿಕಾರಿಗಳನ್ನು ಪ್ರಸನ್ನರನ್ನಾಗಿ ಮಾಡಿಕೊಂಡು ದ್ವೇಷಬುದ್ಧಿಯಿಂದ ತುಕಾರಾಮನನ್ನು ಊರುಬಿಟ್ಟು ಹೋಗುವಂತೆ ಮಾಡಿದನು. ವಿಠೋಬನನ್ನು ಬಿಟ್ಟು ಹೋಗಲಾರದೆ ತುಕಾರಾಮನು ಆ ಭಟ್ಟನಿಗೆ ಶರಣುಹೋಗಲು ಅವನು ಅವನ ಅಭಂಗಗಳನ್ನೆಲ್ಲಾ ನದಿಯಲ್ಲೊಗೆದರೆ ಇರಬಹುದೆಂದು ಒಪ್ಪಿದನು.

ಹಾಗೆಯೇ ಆಗಲೆಂದು ತುಕಾರಾಮನು ಉಪಾಯಾಂತರವಿಲ್ಲದೆ ತನ್ನ ಗ್ರಂಥಗಳನ್ನೆಲ್ಲಾ ನೀರುಪಾಲು ಮಾಡಿ ಬಂದು ಚಿಂತೆಯಿಂದ ಮಲಗಿರುವಾಗ ಸ್ವಪ್ನವಾದ ಪ್ರಕಾರ ಮರುದಿನ ಹೋಗಿ ನೋಡಲಾಗಿ ನದಿಯ ದಡದಲ್ಲಿ ಆ ಪುಸ್ತಕದ ಗಂಟೀ ಸುರಕ್ಷಿತವಾಗಿ ಬಂದು ಬಿದ್ದಿತ್ತೆಂದು ಹೇಳುತ್ತಾರೆ. ಈ ರೀತಿಯಲ್ಲಿ ತುಕಾರಾಮನ ಮಹಿಮೆಯು ಅಭಿವ್ಯಕ್ತವಾದ ಉದಾಹರಣೆಗಳು ಬಹಳ ಇವೆ. ಅಂತು ತುಕಾರಾಮನು ತಾನು ಉಪದೇಶಕನಾಗಿ ಶಿಷ್ಯಸಂಗ್ರಹವನ್ನು ಮಾಡದೆ ಇದ್ದರೂ ಅನೇಕರು ಅವನಿಗೆ ಪೂಜ್ಯಬುದ್ಧಿಯಿಂದ ನಡೆದುಕೊಳ್ಳುವವರಾದರು. ಅವನ ಗ್ರಂಥಗಳಿಂದ ಮಹಾರಾಷ್ಟ್ರ ಭಾಷೆಗೆ ಅನ್ಯಾದೃಶವಾದ ಅಭ್ಯುದಯವುಂಟಾಯಿತು. ಅವನು ಬರೆದ ಕವಿತೆಗಳ ಸಂಖ್ಯೆಯು ನಾಮದೇವನ ಕವಿತೆಗಳ ಜೊತೆಗೆ ಸೇರಿ ನೂರುಕೋಟಿಯಾಗದಿದ್ದರೂ ಬಹು ದೊಡ್ಡ ಸಂಗ್ರಹವಾಯಿತೆನ್ನಲಿಕ್ಕೆ ಅಡ್ಡಿ ಇಲ್ಲ. ದೇಶಭಾಷೆಗಳಲ್ಲಿ ಉದ್ದಾಮ ಕವಿಗಳ ಗಣನೆ ಮಾಡುವ ಪ್ರಸಂಗ ಬಂದರೆ ತುಕಾರಾಮನ ಹೆಸರು ಮೊದಲು ಬರುವಹಾಗಿರುವದು.

## ವೈರಾಗ್ಯ ಪ್ರದರ್ಶನ

ತುಕಾರಾಮನ ಯಶೋದುಂದುಭಿಯು ಶಿವಾಜಿ ಮಹಾರಾಜನ ಕಿವಿಯಲ್ಲಿ ಭೋರ್ಗರೆಯಲು ಸಾಧುಪ್ರಿಯನಾದ ಶಿವಾಜಿಯು ತುಕಾರಾಮನನ್ನು ತನ್ನ ಬಳಿಗೆ ಬರಮಾಡಿಕೊಳ್ಳಬೇಕೆಂದು ರಾಜಮರ್ಯಾದೆಯೊಡನೆ ಆಮಂತ್ರಣವನ್ನು ಕಳುಹಿಸಿದನು. ತುಕಾರಾಮನು ಈ ಆಡಂಬರವು ತನಗೆ ಬೇಕಿಲ್ಲವೆಂದು ಹೇಳಿ ಕೆಲವು ರಾಜನೀತಿಗಳನ್ನು ಬರೆದು ಕಳುಹಿಸಿಬಿಟ್ಟನು. ಆಮೇಲೆ ಶಿವಾಜಿಯು ಒಂದುಸಲ ಪಂಢರಪುರದಲ್ಲಿ ದೊಡ್ಡ ಸಾಧುಸಭೆಯಲ್ಲಿ ಸಾಧುಸತ್ಕಾರವನ್ನು ಮಾಡುವದಕ್ಕಾರಂಭಿಸಿ ತುಕಾರಾಮನಿಗೂ ಅಮೂಲ್ಯ ದ್ರವ್ಯಗಳನ್ನೂ ನಾಲ್ಕು ಗ್ರಾಮುಗಳನ್ನೂ ಮಿಾಸಲಾಗಿ ತೆಗೆದಿಟ್ಟನು. ಇದರ ಸುಳಿವನ್ನರಿತು ತುಕಾರಾಮನು ಅವನಿಗೆ ಚಳ್ಳೀ ಹಣ್ಣನ್ನು ತಿನ್ನಿಸಿ ಆ ಸ್ಥಲವನ್ನು ಬಿಟ್ಟುಹೋದನು. ಆಮೇಲೆ ಶಿವಾಜಿಯು ತುಕಾರಾಮನ ವೈರಾಗ್ಯಕ್ಕೆ ಬೆರಗಾದನು.

## ಅಂತಿಮಕಾಲ

ತುಕಾರಾಮನ ಪತ್ನಿಯು ಪರಮಸಾಧ್ವಿಯೇನೋ ನಿಜ. ಆದರೆ ತುಕಾರಾಮನ ಹೆಂಡತಿಯಾಗುವದಕ್ಕೆ ಬೇಕಾದ ಕೆಲವು ಗುಣಗಳು ಆಕೆಯಲ್ಲಿರಲಿಲ್ಲ. ಇದರಿಂದ ತುಕಾರಾಮನು ಬೇಸತ್ತು ಮತ್ತೊಮ್ಮೆ ಕಾಡಿಗೆ ತಪ್ಪಿಸಿಕೊಂಡು ಹೋಗಿದ್ದನು. ಅವನ ಹೆಂಡತಿಯು ಹೋಗಿ ಮತ್ತೆ ಸಮಾಧಾನ ಮಾಡಿ ಕರೆತಂದಳು. ಆಮೇಲೆ ಹೆಣ್ಣುಮಕ್ಕಳ ಲಗ್ನವಾಗಬೇಕೆಂದು ಆಕೆ ಆಗಾಗ್ಗೆ ಹೇಳತೊಡಗಲು ತುಕಾರಾಮನು ಹೊರಗೆ ಕಣ್ಣಿಗೆ ಬಿದ್ದ ಮೂವರು ಹುಡುಗರನ್ನು ಕರೆದುತಂದು ಮೂವರು ಹುಡುಗಿಯರನ್ನೂ ಅವರ ಜೊತೆಯಲ್ಲಿ ನಿಲ್ಲಿಸಿ ತಲೆಯ ಮೇಲೆ ಮಂತ್ರಾಕ್ಷತೆಯನ್ನು ಹಾಕಿ ಮದುವೆಯಾಯಿತೆಂದನು. ಆ ಹುಡುಗರ ಕಡೆಯವರು ಪವಿತ್ರವಾದ ಮನೆತನದ ಸಂಬಂಧದ ಲಾಭ ವಾಯಿತೆಂದು ಆಮೇಲೆ ಆ ಲಗ್ನವನ್ನು ತಾವು ಸಾಂಗವಾಗಿ ಮಾಡಿದರು. ಕೊನೆಗೆ ಕ್ರಿ. ಶ. ೧೬೪೯ ರಲ್ಲಿ ಒಂದು ದಿನ ತಾನು ವೈಕುಂಠಕ್ಕೆ ಪ್ರಯಾಣ ಮಾಡುವೆನೆಂದು ಹೇಳಿ ಹೆಂಡತಿಯನ್ನು ಕರೆದನು. ಗರ್ಭಿಣಿಯಾಗಿದ್ದ ಆಕೆಯು ಅದನ್ನೊಂದು ವಿನೋದವಾಗಿ ಭಾವಿಸಿ ತಾನು ಮಕ್ಕಳನ್ನು ಬಿಟ್ಟು ಬರಲಾರೆನೆಂದು ಹೇಳಿಬಿಟ್ಟಳು. ಆಗ ತುಕಾರಾಮನು ವಿಠೋಬನಿಗೆ ನಮಸ್ಕಾರ ಮಾಡಿ ಎಲ್ಲರಿಗೂ ಹೋಗಿಬರುತ್ತೇನೆಂದು ಹೇಳಿ ನಾಮಘೋಷದೊಡನೆ ನದಿಯವರೆಗೆ ಹೋಗಿ ಅಲ್ಲಿ ವೈಕುಂಠವಾಸಿಯಾಗಿಬಿಟ್ಟನು. ಬಾಯಿಂದ ಉಪದೇಶಕನಾಗಿರದೆ ಕೃತಿಯಿಂದ ಉಪದೇಶಕನಾಗಿದ್ದ ತುಕಾರಾಮನ ಚರಿತ್ರೆಯು ಕವಿತೆಯ ದೃಷ್ಟಿಯಿಂದಲೂ ಸಾಧುತ್ವದ ದೃಷ್ಟಿಯಿಂದಲೂ ಸುವರ್ಣಾಕ್ಷರಗಳಿಂದ ಬರೆದಿಡತಕ್ಕದ್ದಾಗಿದೆ.

---

# ಶಿವಾಜಿ

## ಹುಟ್ಟು

ಎಲ್ಲ ಜನರೂ ಏಕಮುಖರಾಗಿ ತಮ್ಮ ಜನಾಂಗಕ್ಕೆ ಒಂದು ಮಹತ್ವವನ್ನು ಆಕಾಂಕ್ಷೆಮಾಡಿದರೆ ಸರ್ವಾಂತರ್ಯಾಮಿಯಾದ ಭಗವಂತನು ಒಂದುದಿನ ಅದನ್ನು ಸಿದ್ಧಿಗೊಯ್ದೇ ಒಯ್ಯುವನು. ಸ್ವರಾಜ್ಯಕ್ಕಾಗಿ ಎಷ್ಟೋ ದಿನಗಳಿಂದ ಹೆಣಗುತ್ತಿದ್ದ ಮಹಾರಾಷ್ಟ್ರಕ್ಕೆ ಹದಿನಾರನೇ ಶತಮಾನದಲ್ಲಿ ಇಷ್ಟಸಿದ್ಧಿಯಾದದ್ದು ಆ ನಿಯಮಕ್ಕೊಂದು ಒಳ್ಳೇ ನಿದರ್ಶನವಾಗಿದೆ. ಮಹಾರಾಷ್ಟ್ರದಲ್ಲಿ ಭೋಸಲೆಯೆಂಬ ಹೆಸರಿನ ಮನೆತನದಲ್ಲಿ ಷಾಜಿ (ಶಹಾಜಿ) ಎಂಬ ಗೃಹಸ್ಥನಿದ್ದನು. ಆತನು ಎಷ್ಟೋಸಲ ಮದಾಂಧರಾದ ಮೊಗಲರ ಮಗ್ಗಲನ್ನು ಮುರಿದು ಮೂಲೆಗೊತ್ತಿ ಪ್ರಸಿದ್ಧಿಯನ್ನು ಪಡೆದಿದ್ದನು. ಆದರೂ ಆಗಿನ ಕಾಲದಲ್ಲಿ ಅವನ ಬಂಧುವರ್ಗದವರೆಷ್ಟೋ ಜನರು ಉಪಾಯಾಂತರವನ್ನು ಕಾಣದೆ ಉತ್ತರದಲ್ಲಿ ದಿಲ್ಲೀಶ್ವರರಾದ ಮೊಗಲ ಚಕ್ರವರ್ತಿಗಳ ಆಶ್ರಯವನ್ನೂ ದಕ್ಷಿಣದಲ್ಲಿ ವಿಜಾಪುರದಲ್ಲಿ ಮೆರೆಯುತ್ತಿದ್ದ ಸುಲ್ತಾನರ ಆಶ್ರಯವನ್ನೂ ಪಡೆದು ದಿನಗಳನ್ನು ನೂಕುತ್ತಿದ್ದರು. ಮಹಾರಾಷ್ಟ್ರದ ಅದೃಷ್ಟವಿನ್ನೂ ಪರಿಪಕ್ವವಾಗಿರಲಿಲ್ಲವಾದ್ದರಿಂದ ಮಹಾವೀರನಾದ ಶಹಾಜಿಯು ಸ್ವರಾಜ್ಯಸ್ಥಾಪನೆಯನ್ನು ಲಕ್ಷ್ಯವಾಗಿಟ್ಟುಕೊಂಡು ಅಹಮ್ಮದನಗರದ ನಿಜಾಮಶಾಹಿಯ ಛತ್ರಚ್ಛಾಯೆಯಲ್ಲಿ ತನ್ನ ಬೆಳಕನ್ನು ಬೀರುತ್ತಿದ್ದನು. ಅವನ ಪ್ರತಿಭೆಗಾಗಿ ಅವನಿಗೆ ನಿಜಾಮಶಾಹಿಯಿಂದ ಪುಣೆಯ ಪ್ರಾಂತವೆಲ್ಲಾ ಜಹಗೀರಿಯಾಗಿ ದೊರೆತಿತ್ತು. ಶಹಾಜಿಯು ರಾಜಕಾರ್ಯಕ್ಕಾಗಿ ಊರೂರುಗಳನ್ನು ತಿರುಗಬೇಕಾಗಿದ್ದದರಿಂದ ಕುಟುಂಬವನ್ನು ತನ್ನೊಡನೆ ಕರೆದುಕೊಂಡು ಹೋಗದೆ ಅವರನ್ನೆಲ್ಲ ತನ್ನ ಜಹಗೀರಿಯಲ್ಲಿಯೇ ಸುರಕ್ಷಿತವಾಗಿಟ್ಟಿದ್ದನು.

ಅವನ ಹೆಂಡತಿಯಾದ ಜೀಜಾಬಾಯಿಯು ಒಳ್ಳೇ ಶೂರರ ಮನೆತನದಲ್ಲಿ ಹುಟ್ಟಿದಾಕೆಯಾಗಿದ್ದು ದೇಹದೃಷ್ಟಿಯಿಂದ ಸ್ತ್ರೀಯಾದರೂ ಮನಸ್ಸಿನಿಂದ ಸಾಹಸಪ್ರಿಯಳಾಗಿದ್ದದರಿಂದ ತನ್ನ ಪತಿಯ ಸಾಕ್ಷಾತ್ಸನ್ನಿಧಿಯನ್ನೇ ಸುಖಕರವಾಗಿ ಭಾವಿಸುವದಕ್ಕಿಂತಲೂ ತನ್ನ ವಂಶದ ಉನ್ನತಿಗೆ ಸಾಧಕವಾದ ಆ ತನ್ನ ಪತಿಯ ಪೌರುಷ ಕಾರ್ಯಗಳ ಕಡೆಗೆ ಲಕ್ಷ್ಯವನ್ನಿಟ್ಟು ಆನಂದಪಡುವವಳಾಗಿದ್ದಳು. ತನ್ನ ತಂದೆಯ ವಂಶದಲ್ಲಿ ಮಹಾರಾಷ್ಟ್ರರ ಮನಸ್ಸಿನ ಮಬ್ಬನ್ನ ಪಹರಿಸುವ ಸ್ವರಾಜ್ಯ ಸ್ಥಾಪಕನಾದ ಸೂರ್ಯನು ಉದಯಿಸುವನೆಂಬದೊಂದು ಸುದ್ದಿಯು ಈಕೆಯ ಕಿವಿಗೆ ಬಿದ್ದಿತ್ತು. ಅಂಥ ವೀರನನ್ನು ಹಡೆಯುವ ಯೋಗವನ್ನು ತಾನು ಪಡೆದು ತನ್ನ ಪತಿಯ ಮಹತ್ವಾಕಾಂಕ್ಷೆಯನ್ನು ಪೂರ್ಣ ಮಾಡಬೇಕೆಂದು ಜೀಜಾಬಾಯಿಯು ಭವಾನಿಗೆ ಬಹುಬಗೆಯಿಂದ ಶರಣುಹೋದಳು. ಅದರ ಫಲವಾಗಿ ಆಕೆಯ ಗರ್ಭದಲ್ಲಿ ಕ್ರಿ. ಶ. ೧೬೨೭ ರಲ್ಲಿ ಶಿವನೇರೆಂಬ ಕೋಟೆಯಲ್ಲಿ ನಮ್ಮ ಕಥಾನಾಯಕನ ಆವಿರ್ಭಾವವಾಯಿತು. ಶಿವಾಬಾಯಿಯ ಪ್ರಸಾದದಿಂದ ಹುಟ್ಟಿದವನಾದ್ದರಿಂದ ಇವನನ್ನು ಬಂಧುವರ್ಗದವರು ಶಿವಾಜಿಯೆಂದು ಕರೆದು ಭವಾನಿಯ ವಿಷಯಕವಾದ ತಮ್ಮ ಕೃತಜ್ಞತೆಯನ್ನು ವ್ಯಕ್ತಗೊಳಿಸಿದರು.

## ಶಿವಾಜಿಯ ಚಿಕ್ಕಂದಿನ ಶಿಕ್ಷಣ

ಶಿವಾಜಿಯು ಗರ್ಭದಲ್ಲಿದ್ದಾಗಲೇ ಜೀಜಾಬಾಯಿಯ ಮನಸ್ಸಿನಲ್ಲಿ ಮತ್ತರಾದ ಮುಸಲ್ಮಾನರ ಮೇರೆದಪ್ಪಿದ ಕಾರ್ಯಗಳಿಂದ ಮಹತ್ತಾದ ಕಳವಳವುಂಟಾಗಿ ಅವರನ್ನು ಮುರಿಬಡಿಯುವ ಉತ್ಸಾಹವು ಉಕ್ಕೇರುತ್ತಿದ್ದದರಿಂದ ಆ ಸಂಸ್ಕಾರವೆಲ್ಲಾ ಶಿವಾಜಿಯಲ್ಲಿ ಆಗಿನಿಂದಲೇ ಮನೆಮಾಡಿಕೊಳ್ಳುತ್ತ ಬಂದು ಗರ್ಭದಲ್ಲಿಯೇ ಶಿಕ್ಷಣವಾಯಿತೆಂದು ಹೇಳಬೇಕಾಗುತ್ತದೆ. ಇನ್ನು ಜನ್ಮವಾದ ಮೇಲೆ ಪಿತೃಸಾನ್ನಿಧ್ಯ ಸುಖವು ಕಡಿಮೆಯಾಗಿದ್ದದರಿಂದಲಂತೂ ಶಿವಾಜಿಯು ಯಾವಾಗಲೂ ತಾಯ ಬಳಿಯಲ್ಲಿಯೇ ಇದ್ದು ವೀರರಸಪ್ರಧಾನವಾದ ತನ್ನ ತಾಯಿಯ ಉಪದೇಶವನ್ನೇ ಹೆಚ್ಚಾಗಿ ಪಡೆಯಬೇಕಾಗಿತ್ತು. ಲೋಕದಲ್ಲಿ ಮಕ್ಕಳಿಗೆ

ತಂದೆಯ ಉಪದೇಶಕ್ಕಿಂತಲೂ ತಾಯಿಯ ಉಪದೇಶವು ಹೆಚ್ಚಾಗಿ ಕಚ್ಚಿ ಹಿಡಿಯುವದು. ಇದರ ಜೊತೆಗೆ ತನ್ನ ಜನ್ಮಭೂಮಿಯು ಗುಡ್ಡಗಾಡಾಗಿದ್ದದರಿಂದ ಅಲ್ಲಿಯ ಜನರ ಸರ್ವಸಾಮಾನ್ಯವಾದ ಉದ್ಯೋಗಶೀಲತೆ, ಹಿಡಿದ ಪಟ್ಟನ್ನು ಬಿಡದಿರೋಣ, ಕಠಿನ ಪ್ರಸಂಗಗಳಲ್ಲಿ ಎದೆಗೆಡದಿರೋಣ ಮುಂತಾದ ಗುಣಗಳು ಶಿವಾಜಿಯಲ್ಲಿ ತಮಗೆ ತಾವೇ ಬೆಳೆಯುತ್ತಿದ್ದರೂ ಇವುಗಳ ಜೊತೆಗೆ ಚಿನ್ನಕ್ಕೆ ಪುಟಗೊಟ್ಟಂತೆ ಶಿವಾಜಿಗೆ ಇನ್ನೊಂದು ಸೌಕರ್ಯವಿತ್ತು. ಶಹಾಜಿಯಿಂದ ಪುಣೆಯ ಪ್ರಾಂತಕ್ಕೆ ಸರ್ವಾಧಿಕಾರಿಯಾಗಿ ನೇಮಕವಾಗಿದ್ದ ದಾದಾ ಕೊಂಡದೇವನೆಂಬ ಬ್ರಾಹ್ಮಣನು ಶಿವಾಜಿಯ ಶಿಕ್ಷಣ ವಿಷಯಕ್ಕೆ ಹೆಚ್ಚಿನ ಲಕ್ಷ್ಯವನ್ನು ಕೊಡುತ್ತಿದ್ದನು. ಕುದುರೆಯ ಸವಾರಿ, ಕತ್ತಿ ಮೊದಲಾದವುಗಳ ಸಾಧನೆ—ಇಂಥ ಕ್ಷತ್ರಿಯೋಚಿತ ವಿದ್ಯೆಗಳಲ್ಲಿ ಶಿವಾಜಿಗೆ ಉತ್ತಮವಾದ ಶಿಕ್ಷಣವು ನಡೆಯಿತು. ಅಕ್ಷರಾಭ್ಯಾಸವೂ ಚೆನ್ನಾಗಿ ಸಾಗಿತು. ಇದಲ್ಲದೆ ದಾದಾಜಿಕೊಂಡದೇವನು ಮಹಾಭಗವದ್ಭಕ್ತನಾದ್ದರಿಂದ ಅವನ ಸಹವಾಸದಿಂದ ಶಿವಾಜಿಗೆ ಕೀರ್ತನ, ಭಜನ, ಪುರಾಣ, ಮೊದಲಾದವುಗಳ ರುಚಿ ಹತ್ತಿತು. ಭಾವನಾಮಯವಾದ ಮನಸ್ಸಿನ ಶಿವಾಜಿಗೆ ಆ ಕೀರ್ತನ ಪುರಾಣಾದಿಗಳಿಂದ ಪೂರ್ವಿಕ ಪುರಾಣಪುರುಷರ ಪ್ರತಿಭಾವಿಶೇಷವು ಕಣ್ಣಿಗೆ ಕಟ್ಟಿದಂತೆ ಆಗಿ ಭೀಮಾರ್ಜುನ ಮೊದಲಾದವರ ಪೌರುಷಗಳನ್ನು ಕೇಳಿದ ಪ್ರತಿಯೊಂದು ಸಂದರ್ಭದಲ್ಲಿಯೂ ಶಿವಾಜಿಗೆ ರೋಮಾಂಚವುಂಟಾಗುತ್ತಿತ್ತು. ಪುರಾಣಪದ್ಧತಿಯನ್ನೂ ಕೀರ್ತನ ಪದ್ಧತಿಯನ್ನೂ ಪ್ರಚಾರಕ್ಕೆ ತಂದ ಉದ್ದೇಶವು ಆಗ ಸಾರ್ಥಕವಾಯಿತೆಂಬಂತೆ ಎಂದಿಗೆ ತಾನು ತನ್ನ ವಂಶಾನುರೂಪವಾದ ಗಂಡಸುತನವನ್ನು ತೋರಿ ಹಿರಿಯರ ಹೆಸರನ್ನುಳಿಸುವೆನೋ ಎಂದು ಅವನ ಕಣ್ಣುಗಳಿಂದ ದಡದಡ ನೀರು ಸುರಿಯುತ್ತಿತ್ತು. ದಾದಾಜಿಕೊಂಡದೇವನು ಶಿವಾಜಿಯ ಮನಸ್ಸನ್ನು ಈ ರೀತಿಯಲ್ಲಿ ಪರಿಪಕ್ವಗೊಳಿಸಿದ್ದಲ್ಲದೆ ಆ ಜಹಗೀರಿಯ ಸರ್ವವ್ಯವಹಾರದಲ್ಲಿಯೂ ಶಿವಾಜಿಯನ್ನು ಒಳಹೊಗಿಸಿ ಎಲ್ಲಾ ಕಾರ್ಯಭಾರಗಳ ಅನುಭವವನ್ನೂ ಮಾಡಿಕೊಟ್ಟನು. ಮತ್ತು ವಾದವಿವಾದಗಳು ಬಂದಾಗ ಶಿವಾಜಿಯು ನ್ಯಾಯವನ್ನು ಕಂಡುಹಿಡಿದು ಹೇಳುವ ಸಾಮರ್ಥ್ಯವನ್ನೂ ಕೂಡ ತಂದುಕೊಟ್ಟನು. ಶಿವಾಜಿಯು

ತಂದೆಯ ಬಳಿಯಲ್ಲಿ ಬಹುಕಾಲವಿರದಿದ್ದರೂ ತಂದೆಯಿಂದ ದೊರೆಯು ಬೇಕಾದ ಶಿಕ್ಷಣವೇನೂ ಅವನಿಗೆ ತಪ್ಪಲಿಲ್ಲ. ಶಿವಾಜಿಯು ಆಗಾಗ ತನ್ನ ಕುಟುಂಬವನ್ನು ವಿಜಾಪುರಕ್ಕೆ ಕರೆದುಕೊಂಡು ಹೋಗುತ್ತಿದ್ದನು. ಅಲ್ಲಿದ್ದ ಸಮಯದಲ್ಲಿ ಶಹಾಜಿಯು ಶಿವಾಜಿಗೆ ದಂಡಿನ ವ್ಯವಸ್ಥೆ, ಕ್ರಮ ಪದ್ಧತಿ, ಆಯುಧಶಾಲೆ ಮೊದಲಾದವುಗಳನ್ನೆಲ್ಲ ತೋರಿಸಿ ಅವುಗಳ ರಹಸ್ಯವನ್ನೂ ಆಡಳಿತದ ಜೀವಾಳವನ್ನೂ ತಿಳಿಸಿದನು. ಬೆರಳು ತೋರಿಸಿದರೆ ಹಸ್ತವನ್ನು ನುಂಗುವ ಶಿವಾಜಿಯು ಇಷ್ಟು ಶಿಕ್ಷಣದ ಮೂಲಧನದಿಂದ ಮುಂದಿನ ವ್ಯವಹಾರವನ್ನು ಮೊದಲು ಮಾಡಿದನು.

## ಸ್ವಾಭಿಮಾನ

ಶಿವಾಜಿಯು ಹದಿನಾಲ್ಕು ವರ್ಷದವನಿದ್ದಾಗ ಶಹಾಜಿಯು ಒಮ್ಮೆ ಅವನನ್ನು ವಿಜಾಪುರಕ್ಕೆ ಕರೆದುಕೊಂಡು ಹೋಗಿದ್ದನು. ಮಗನಿಗೆ ರಾಜಮರ್ಯಾದೆಗಳನ್ನೆಲ್ಲ ತಿಳಿಸಿಕೊಡಬೇಕೆಂದು ಶಹಾಜಿಯು ಆಸ್ಥಾನದಲ್ಲಿ ಸುಲ್ತಾನರಿಗೆ ಬಗ್ಗಿ ಸಲಾಮು ಮಾಡುವದೇ ಮುಂತಾದ ಪದ್ಧತಿಗಳನ್ನು ಶಿವಾಜಿಗೆ ಹೇಳಿಕೊಟ್ಟನು. ಇದು ಮಾತ್ರ ಶಿವಾಜಿಯ ಮನಸ್ಸಿಗೆ ಎಷ್ಟುಮಾತ್ರವೂ ಬರುತ್ತಿರಲಿಲ್ಲ. ಆದರೂ ಶಿವಾಜಿಯು ಎಂದೆಂದಿಗೂ ತಂದೆತಾಯಿಗಳ ಮಾತಿಗೆ ಬದಲು ಹೇಳತಕ್ಕವನಲ್ಲ. ಮನೆಯಲ್ಲಿ ಅರ್ಧಾಂಗೀಕಾರವನ್ನು ತೋರಿಸಿ ಶಿವಾಜಿಯು ಆಸ್ಥಾನಕ್ಕೆ ಹೋದಾಗ ಬಗ್ಗಿ ಸಲಾಮು ಮಾಡದೆ ಸಲಾಮಿನ ಶಾಸ್ತ್ರವನ್ನು ಮುಗಿಸಿದನು. ಪ್ರತಿದಿನವೂ ಎಚ್ಚರಿಕೆಯನ್ನು ಕೊಟ್ಟರೂ ಹಾಗೆ ಮಾಡದಿರುವದಕ್ಕೆ ಕಾರಣವೇನೆಂದು ಕೇಳಿದಾಗ ಎಷ್ಟು ನೆನಪಿನಲ್ಲಿಟ್ಟುಕೊಂಡರೂ ಅದು ಆ ಕಾಲಕ್ಕೆ ಮರೆತುಹೋಗುವದೆಂದು ಶಿವಾಜಿಯು ಹಾರಿಸಿಬಿಡುತ್ತಿದ್ದನು.

## ಗೋವಿನ ಮೇಲೆ ಪೂಜ್ಯಬುದ್ಧಿ

ಪುರಾಣ ಪುಣ್ಯಕಥೆಗಳ ಶ್ರವಣ ಮೊದಲಾದವುಗಳಿಂದ ಶಿವಾಜಿಗೆ ಧರ್ಮನಿರತರಾದ ಬ್ರಾಹ್ಮಣರಲ್ಲಿ ಒಂದು ಬಗೆಯ ಪೂಜ್ಯಬುದ್ಧಿಯುಂಟಾಗಿತ್ತಲ್ಲದೆ ಮನೆಯಲ್ಲಿ ತನ್ನ ತಾಯಿ ಪ್ರತಿದಿನವೂ ಮಾಡುತ್ತಿದ್ದ

ಗೋಪೂಜೆಯನ್ನು ನೋಡಿನೋಡಿ ಗೋಮಾತೆಯ ಮೇಲಿನ ಪ್ರೀತಿಯೂ ಅತಿಶಯವಾಗಿತ್ತು. ಗೋವಿನ ಹಿಂಸೆಯನ್ನು ಕಣ್ಣಾರೆ ನೋಡುವ ದೆಂದರೆ ಶಿವಾಜಿಗೆ ಶಕ್ಯವಿರಲಿಲ್ಲ. ವಿಜಾಪುರದಲ್ಲಿ ತಂದೆಯ ಬಳಿಯಲ್ಲಿದ್ದಾಗ ಒಂದುದಿನ ಶಿವಾಜಿಯು ಕಟಕರವನ ಕೈಗೆ ಸಿಕ್ಕಿದ್ದ ಗೋವನ್ನು ತನ್ನ ಬಾಹುಬಲದಿಂದ ರಕ್ಷಿಸಿದನು. ಈ ದೂರು ಸುಲ್ತಾನನ ಕಿವಿಯವರೆಗೆ ಮುಟ್ಟಿತು. ಗೋಹಿಂಸೆಯ ಸುದ್ದಿಯೇ ಶಿವಾಜಿಗೆ ಸರಿಬೀಳದೆ ಇದ್ದದ್ದನ್ನು ನೋಡಿ ಸುಲ್ತಾನನಿಗೆ ಹಿಂದುಗಳ ಮನಸ್ಸನ್ನು ಇಷ್ಟುಮಟ್ಟಿಗೆ ನೋಯಿಸಬಾರದೆಂಬ ಕನಿಕರವುಂಟಾಯಿತು. ಶಹಾಜಿಯಂಥ ಮಹಶೂರನನ್ನು ಆಸ್ಥಾನದಲ್ಲಿಟ್ಟುಕೊಳ್ಳಬೇಕಾದರೆ ಇಂಥ ಹೃದಯುದ್ರಾವಕವಾದ ಕೃತ್ಯಕ್ಕೆ ಅವಕಾಶವನ್ನು ಕೊಡಬಾರದೆಂದು ತನ್ನ ರಾಜ್ಯದಲ್ಲಿ ಗೋವಧೆಯ ಹೆಸರೇ ಇಲ್ಲದಂತೆ ಮಾಡಿದನು. ಮತ್ತೊಂದು ದಿನ ಒಬ್ಬ ಕಟಕನು ಗೋವಧೆಗಾಗಿ ಕೈಎತ್ತಿದಾಗ ಶಿವಾಜಿಯು ಸಿಂಹದ ಮರಿಯಂತೆ ಬಂದು ಆ ಕಟಕರವನನ್ನೇ ಬಲಿಗೊಟ್ಟನು. ಇದನ್ನು ಕೇಳಿ ತಂದೆತಾಯಿಗಳು ಇಷ್ಟು ಅಲ್ಪವಿಷಯಕ್ಕೆ ಇಷ್ಟರಮಟ್ಟಿಗೆ ಮೇಲೆಬಿದ್ದು ಹೋಗುವದು ಯೋಗ್ಯವಲ್ಲವೆಂದು ಎಷ್ಟೆಷ್ಟು ತಿಳಿಯಹೇಳಿದರೂ ಶಿವಾಜಿಯು ಬ್ರಾಹ್ಮಣರ ಅವಮಾನವನ್ನೂ ಗೋಗಳ ವ್ಯಥೆಯನ್ನೂ ನೋಡಿದೊಡನೆ ತನಗೆ ಏನುಮಾಡಿದರೂ ಮೈಮೇಲೆ ಎಚ್ಚರಿರುವದಿಲ್ಲವೆಂದು ಹೇಳಿ ಇದೊಂದು ವಿಷಯಕ್ಕೆ ತನ್ನನ್ನು ಮನ್ನಿಸಬೇಕೆಂದು ಸೆರಗೊಡ್ಡಿ ಬೇಡಿಕೊಂಡನು. ಮಗನಿಗೆ ಧರ್ಮದಲ್ಲಿ ಈ ರೀತಿಯಲ್ಲಿರುವ ಅಭಿನಿವೇಶವು ತಂದೆತಾಯಿಗಳ ಅಂತರಂಗಕ್ಕೂ ಹಿತವಾಗಿಯೇ ಇತ್ತು. ಆದರೆ ಇಷ್ಟು ಭಾವನಾಮಯನಾದ ಶಿವಾಜಿಯನ್ನು ಮುಸಲ್ಮಾನರ ಮಧ್ಯದಲ್ಲಿಟ್ಟುಕೊಂಡಿರುವದು ನೆಟ್ಟಗಲ್ಲವೆಂದು ಶಹಾಜಿಯು ಹೆಂಡತಿಯನ್ನೂ ಮಗನನ್ನೂ ಮತ್ತೆ ಪುಣೆಗೆ ಕಳುಹಿಸಿದನು.

## ಶಿವಾಜಿಯು ಅರಿಸಿಕೊಂಡ ಕರ್ತವ್ಯ

ಆಮೇಲೆ ಶಿವಾಜಿಗೆ ಹಾಗೂ ಹೀಗೂ ವಯಸ್ಸು ಬರಬರುತ್ತ ತಾನೇನು ಮಾಡಬೇಕೆಂಬ ವಿಚಾರವು ಹುಟ್ಟಿತು. ಹೊಟ್ಟೆಬಟ್ಟೆಗೇನೂ

ಕಡಿಮೆಯಾಗಿರಲಿಲ್ಲ ಬರೀ ಹೊಟ್ಟೆಬಟ್ಟೆಯ ವಿಚಾರವು ಶಿವಾಜಿಯ ಮನಸ್ಸಿಗೇ ಬರುತ್ತಿರಲಿಲ್ಲ. ದೇಶದ ಸ್ಥಿತಿಗತಿಯೇನೆಂಬ ಕಲ್ಪನೆಯೇ ಅವನ ತಲೆಯೊಳಗೆ ತುಂಬಿತುಳುಕುತ್ತಿತ್ತು. ಏಕೆಂದರೆ ನಿಜಾಮ ಶಾಹಿಯ ಅರಸುತನದ ಮೇಲೆ ವಿಜಾಪುರದವರ ಅರಸುತನವು ಕಾಲು ಹಾಕಿತ್ತು. ವಿಜಾಪುರದ ವ್ಯವಸ್ಥೆಯೂ ಚನ್ನಾಗಿ ರೂಢಿಗೊಂಡಿರಲಿಲ್ಲ. ದೇಶದಲ್ಲೆಲ್ಲ ಕಳ್ಳಕಾಕರ ಹಾವಳಿ ಹೆಚ್ಚಾಗಿತ್ತು. ಮುಸಲ್ಮಾನರು ತಮ್ಮವರ ಆಳಿಕೆಯ ಒಣ ಹೆಮ್ಮೆಯಿಂದ ಹಿಂದುಗಳನ್ನು ಕಸಕ್ಕಿಂತ ಕಡಿಮೆಯಾಗಿ ಕಾಣುತ್ತಿದ್ದರು. ಆದ್ದರಿಂದ ಶಿವಾಜಿಗೆ ಮೊದಲು ತನ್ನ ದೇಶೀಯರ ಅಧೋಗತಿಯನ್ನು ತಪ್ಪಿಸಬೇಕೆಂಬ ಉತ್ಕಟವಾದ ಇಚ್ಛೆಯುಂಟಾಯಿತು. ಇದಕ್ಕಾಗಿ ಸ್ವರಾಜ್ಯವನ್ನು ಸ್ಥಾಪಿಸಿದ ಹೊರತು ಉಳಿಬಾಳಿಲ್ಲವೆಂದು ಶಿವಾಜಿಯು ಸಹ್ಯಾದ್ರಿಯ ಮೇಲೆಲ್ಲ ತಿರುಗಾಡಿ ಸ್ಥಾನವಿಶೇಷಗಳನ್ನೆಲ್ಲ ಗೊತ್ತುಮಾಡಿಕೊಂಡು ಜನಮಂಡ ಲದ ಅಭಿಪ್ರಾಯಗಳನ್ನು ಅಲ್ಲಲ್ಲಿ ಆಗಳು ಹಿಸಿಕಿನೋಡಿ ತನ್ನದೊಂದು ಪರಿಸ್ಥಿತಿಯನ್ನು ಬೇರೆಯಾಗಿ ಕಲ್ಪನೆ ಮಾಡಿಕೊಂಡನು. ಧಿಟ್ಟರೂ ಗಟ್ಟಿಗರೂ ಆದ ಕೆಲವು ಮರಾಠರನ್ನು ತನ್ನ ಅನುಯಾಯಿಗಳನ್ನಾಗಿ ಆರಿಸಿಕೊಂಡು ಶಿವಾಜಿಯು ಅವರ ಸಹಾಯದಿಂದ ಮೆಲ್ಲಮೆಲ್ಲನೆ ಸುತ್ತ ಮುತ್ತಣ ಮುಸಲ್ಮಾನರ ಊರುಗಳ ಮೇಲೆ ತನ್ನ ಕೈತೋರಿಸುವದಕ್ಕೆ ಮೊದಲುಮಾಡಿದನು. ಬಲಾಢ್ಯರಾದ ಮುಸಲ್ಮಾನರೊಡನೆ ಪ್ರತಿ ಭಟಿಸುವದು ಹಾನಿಕರವಾದೀತೆಂದು ದಾದಾಜಿಯು ಅಭಿಪ್ರಾಯ ಪಟ್ಟರೂ ಶತ್ರುಗಳೊಡನೆ ಹೋರಾಡಬೇಕಾದ ಸಂದರ್ಭದಲ್ಲಿ ಶಕ್ತಿಯು ಸಾಲದಂತೆ ತೋರಿದಾಗ ಯುಕ್ತಿಯನ್ನಾದರೂ ಮಾಡಿ ದುಷ್ಟನಿಗ್ರಹ ವನ್ನು ಮಾಡಿಯೇ ತೀರಬೇಕೆಂದು ಶಿವಾಜಿಯು ಹಿಡಿದ ಪಟ್ಟನ್ನು ಬಲ ವಾಗಿ ಹಿಡಿದೇ ಹಿಡಿದನು.

## ಹಾವಳಿ

ಕ್ರಿ. ಶ. ೧೬೪೭ರಲ್ಲಿ ದಾದಾಜಿಯು ಸಾಯುತ್ತಲೇ ಶಿವಾಜಿಯು ತನ್ನ ದೇಶದ ಆಡಳಿತವನ್ನೆಲ್ಲಾ ಹಿಡಿಕೆಯೊಳಗೆ ತೆಗೆದುಕೊಂಡನು. ಹುಡುಗನೆಂದು ಮಾತು ಕೇಳದವರನ್ನೆಲ್ಲಾ ಕೆಲಸದಿಂದ ದೂರಮಾಡಿ

ಬಿಟ್ಟು ದೇಶದ ಸುಸ್ಥಿತಿಗೆ ತಕ್ಕ ವ್ಯವಸ್ಥೆಯನ್ನು ಮಾಡಿ ತಾಯಿಗೂ ಭವಾನಿಗೂ ನಮಸ್ಕರಿಸಿ ತನ್ನ ದಂಡಾಳುಗಳನ್ನು ಕರೆದುಕೊಂಡು "ಹರಹರ ಮಹಾದೇವ" ಎಂದು ವಿಜಯಯಾತ್ರೆಗೆ ಆರಂಭಿಸಿದನು. ನಮ್ಮ ಜನಗಳನ್ನು ತಳಕ್ಕೆ ತುಳಿದು ತಮ್ಮ ಬೇಳೆಯ ಕಾಳನ್ನು ಬೇಯಿಸಿ ಕೊಳ್ಳುವ ವಿಜಾಪುರದ ಮುಸಲ್ಮಾನರ ಪ್ರಭುತ್ವಕ್ಕೆ ಸಹಾಯಕರಾದವ ರಿಗೆ ತನ್ನ ಪ್ರತಿಭೆಯನ್ನು ಮನಗಾಣಿಸಬೇಕೆಂದು ಅವನು ತಾರಣ, ಉತ್ತರ ಕೊಂಕಣ, ಜಾವಳಿ, ಪ್ರತಾಪಗಡ ಮೊದಲಾದವುಗಳನ್ನೆಲ್ಲ ಲೀಲಾಮಾತ್ರದಿಂದ ಆಪೋಶನವಾಗಿ ತೆಗೆದುಕೊಂಡು ಕೆಲಕೆಲವು ಕಡೆ ಯಲ್ಲಿ ಹೊಸ ಕೋಟೆಗಳನ್ನು ಕಟ್ಟಿಸಿದನಲ್ಲದೆ ಪ್ರತಾಪಗಡದ ಕೋಟೆ ಯಲ್ಲಿ ತನ್ನ ಕುಲದೇವತೆಯಾದ ಭವಾನಿಯನ್ನು ಪ್ರತಿಷ್ಠೆ ಮಾಡಿದನು. ಈ ಹಾವಳಿಯಲ್ಲಿ ಸೋತವರು ಶರಣು ಹೊಕ್ಕರೆ ಅವರನ್ನು ತನ್ನ ಕೈಕೆಳಗಿನ ಅಧಿಕಾರಿಗಳನ್ನಾಗಿ ಮಾಡಿಕೊಳ್ಳುತ್ತಿದ್ದನು. ಹೀಗೆ ವಿಜಾ ಪುರದವರಿಗೆ ಸೇರಿದ ಸುತ್ತಮುತ್ತಣ ಪ್ರಾಂತಗಳನ್ನು ನುಂಗಿದ್ದಲ್ಲದೆ ಆ ಸಮಯದಲ್ಲಿ ದಿಲ್ಲೀಶ್ವರನಾದ ಔರಂಗಜೇಬನು ಗೋವಲಕೊಂಡದ ಮೇಲೆ ದಾಳಿಯನ್ನು ಹೂಡಿದ್ದರಿಂದ ಅವರಿಬ್ಬರ ಕದನದ ಸಂಧಿಯ ಸಮಯವನ್ನು ಸಾಧಿಸಿಕೊಂಡಿದ್ದು ಮೊಗಲರ ಸ್ಥಾನಗಳನ್ನು ಕೂಡ ಸ್ವಾಹಾಕಾರ ಮಾಡಿದನು. ಮೈಗೊಟ್ಟು ಯುದ್ಧಮಾಡುವದು ಕಠಿನ ಪ್ರಸಂಗವೆಂದು ಕಂಡ ಸಂದರ್ಭದಲ್ಲಿ ಜನರು ಮೈಮರೆತಿರುವಾಗ ಮುತ್ತಿಗೆಯನ್ನು ಹಾಕಿ ಆ ಮೊಗಲರ ಭೋಗಭೂಮಿಗಳಲ್ಲಿ ಸಿಕ್ಕಿ ದ್ದನ್ನೆಲ್ಲಾ ದೋಚಿಕೊಂಡು ಹೋಗುವ ಪದ್ಧತಿಯನ್ನು ಹೂಡಿದನು. ಇದನ್ನು ನೋಡಿ ಔರಂಗಜೇಬನು ಇವನ ಸೊಕ್ಕಡಗಿಸಬೇಕೆಂದು ಇವನ ಮೇಲೊಂದು ಸೇನೆಯನ್ನಟ್ಟಿದನು. ಮೊಗಲ ಸೇನೆಯ ಆರ್ಭಟದಿಂದ ಶಿವಾಜಿಯು ಎಷ್ಟೋ ಕಡೆಗಳಲ್ಲಿ ಹಿಮ್ಮೆಟ್ಟಬೇಕಾಗಿ ಬಂತು. ಯುಕ್ತಿಪರನಾದ ಶಿವಾಜಿಯು ಇಷ್ಟಾದರೂ ಮೊಗಲರ ಕೈಗೆ ಸಿಕ್ಕದೆ ಇದ್ದದ್ದಲ್ಲದೆ ಮೊಗಲರೊಡನೆ ಸಂಧಿಮಾಡಿಕೊಳ್ಳುವದೇ ಕಾಲೋಚಿತವೆಂದು ತಿಳಿದು ಮೊಗಲರಿಗೆ ಹೇಳಿಕಳುಹಿಸಿದನು. ಆಗ ಮಳೆಗಾಲವಾರಂಭವಾಗಿ ಅವರೂ ಕೈಸೋತಿದ್ದರು. ಆದ್ದರಿಂದ ಔರಂಗಜೇಬನು ತನಗೆ ಮನಸ್ಸಿಲ್ಲದಿದ್ದರೂ ಶಿವಾಜಿಯ ಕಡೆಯ ರಾಯ

ಭಾರಿಯೊಬ್ಬನಿಗೆ ತನ್ನ ಸ್ಥಾನದಲ್ಲಿ ಅವಕಾಶವನ್ನು ಕೊಟ್ಟು ಶಿವಾಜಿಯೊಡನೆ ಸಮಾಧಾನದ ಶಾಸ್ತ್ರವನ್ನು ಮಾಡಿಕೊಳ್ಳಬೇಕಾಯಿತು.

## ಅಫಜಲಖಾನನ ಪರಿಸಮಾಪ್ತಿ

ಲೋಕದಲ್ಲಿ ಅಭ್ಯುದಯಕ್ಕೆ ಬಹು ವಿಘ್ನಗಳು. ಶಿವಾಜಿಯು ಔರಂಗಜೇಬನ ಬೀಸುವ ದೊಣ್ಣೆಯನ್ನು ತಪ್ಪಿಸಿಕೊಂಡರೂ ಬಹು ದಿವಸ ಶಾಂತಿಯಿಂದಿರುವದಾಗಲಿಲ್ಲ. ಔರಂಗಜೇಬನ ಕಾಟವನ್ನು ಕಳೆದುಕೊಳ್ಳುತ್ತಲೇ ಶಿವಾಜಿಯ ಮೇಲೆ ವಿಜಾಪುರದವರ ಕಣ್ಣು ಬಿತ್ತು. ಶರಣಾಗತನಾಗುವ ಪಕ್ಷದಲ್ಲಿ ಶಿವಾಜಿಯನ್ನು ಹಿಡಿದು ತರಿಸಬೇಕೆಂದೂ ಶರಣಾಗತನಾಗದಿದ್ದರೆ ಅವನನ್ನು ಮುಗಿಸಿಯೇ ಬಿಡಬೇಕೆಂದೂ ಆದಿಲ ಶಾಹನ ಮನಸ್ಸಾಯಿತು. ಆದ್ದರಿಂದ ಅವನು ಯುದ್ಧದಲ್ಲಿಯೇ ಅಲ್ಲದೆ ಯುಕ್ತಿಯಲ್ಲಿಯೂ ಕೂಡ ಹೆಸರಾಗಿದ್ದ ಅಫಜಲಖಾನನೆಂಬ ಪ್ರಸಿದ್ಧ ಸೇನಾಪತಿಗೆ ತಾಂಬೂಲವನ್ನು ಕೊಟ್ಟು ಹೊರಡಿಸಿದನು. ರಣಭೇರಿಯನ್ನು ಹೊಡೆಯುತ್ತಲೇ ಕೆಲವು ಅಪಶಕುನಗಳಾದವು. ಅವುಗಳಲ್ಲಿ ಶ್ರದ್ಧೆ ಇಲ್ಲದ ಅಫಜಲನು ತನ್ನ ಬಾಹುಬಲವನ್ನು ಬೀರುತ್ತ ಹೊರಟು ಶಿವಾಜಿಯ ಮನಸ್ಸು ನೋಯುವಂತೆ ಅವನ ಮನೋದೇವತೆಯಾದ ತುಲಜಾಪುರದ ಭವಾನಿಯ ವಿಗ್ರಹವನ್ನು ಒಡೆದು ಪುಡಿಪುಡಿ ಮಾಡಿ ಪಂಢರಪುರ ಮೊದಲಾದ ಕಡೆಗಳಲ್ಲಿಯೂ ಆ ಬಗೆಯ ತನ್ನ ಕೈಚಟವನ್ನು ತೀರಿಸಿಕೊಂಡನು. ಈ ಸುದ್ದಿಯನ್ನು ಕೇಳಿ ಶಿವಾಜಿಯು ಹೊರಟು ಸಾತಾರೆಯ ಹತ್ತರದ ವಾಯಿಯೆಂಬ ಊರಿಗೆ ಬಂದಿದ್ದನು. ಅಫಜಲನ ಸೇನೆಯೂ ಅಲ್ಲಿಗೆ ಬಂತು. ಅಫಜಲನು ಇಂಥ ಕೆಚ್ಚೆದೆಯವರೊಡನೆ ದಂಡೋಪಾಯಕ್ಕಿಂತಲೂ ಮೋಸವೇ ಮೇಲೆಂದು ನೆನೆದು ಶಿವಾಜಿಯನ್ನುದ್ದೇಶಿಸಿ ಒಂದು ಪತ್ರವನ್ನು ಬರೆದನು. "ನಿಮ್ಮ ತಂದೆ ನನಗೆ ತುಂಬ ಸ್ನೇಹಿತನು. ನೀನೂ ನಮ್ಮ ಮಿತ್ರನಾದರೆ ನಿನ್ನ ಪ್ರದೇಶಗಳು ನಿನಗೇ ಉಳಿಯುವಂತೆ ನಾನು ಮಾಡುವೆನು" ಎಂಬುದು ಆದರ ತಾತ್ಪರ್ಯವಾಗಿತ್ತು. ಹೀಗೆ ಪತ್ರವನ್ನು ಬರೆದು ಒಬ್ಬ ದೂತನೊಡನೆ ಕಳುಹಿಸಿದ ಈ ಸಮಯದಲ್ಲಿ ಯುದ್ಧಕ್ಕೆ ತಲೆಗೊಡುವದು ಶಿವಾಜಿಗೂ ಬೇಕಾಗಿರಲಿಲ್ಲ. ಏಕಂದರೆ, ತನ್ನವರು

ಅಷ್ಟು ಪ್ರಬಲವಾದ ಯುದ್ಧಕ್ಕೆ ಮೈಗೊಡಬಲ್ಲವರಾಗಿರಲಿಲ್ಲ. ಈ ಸ್ಥಿತಿಯಲ್ಲಿ ಒಂದರಮೇಲೊಂದು ಜಯವನ್ನೇ ಪಡೆಯುತ್ತ ಬಂದಿರುವ ಇವನಿಗೆ ಏನು ಮಾಡಬೇಕೆಂದು ಚಿಂತಾಕ್ರಾಂತನಾಗಿ ಮಲಗಿದಾಗ ಶಿವಾಜಿಗೆ ಕನಸಿನಲ್ಲಿ ಭವಾನಿಯ ದರ್ಶನವಾಯಿತಂತೆ. ಒಡನೆ ಎದ್ದು ಅವನು ಅಫಜಲನ ದೂತನನ್ನು ಸತ್ಕರಿಸಿ ತನ್ನ ಮನೆ ಇರುವ ಪ್ರತಾಪ ಗಡದಲ್ಲಿ ಇಬ್ಬರೂ ಒಂದುಕಡೆ ಸೇರುವ ಅವಕಾಶವನ್ನು ಕಲ್ಪಿಸುವೆ ನೆಂದು ಒಪ್ಪಿಗೆಯನ್ನು ಹೇಳಿ ತಾನು ಅಲ್ಲಿಗೆ ಹೋದನು. ಅಫಜಲನು ತನ್ನ ಸೇನೆಯನ್ನು ತನ್ನ ಹಿಂದೆ ಅಲ್ಲಲ್ಲಿಯೇ ಅಡಗಿಸಿ ಪ್ರತಾಪಗಡಕ್ಕೆ ಬಂದನು. ಕೋಟೆಯ ಕೆಳಗೆ ಒಂದು ಡೇರೆಯು ಈ ಸಮಾಗಮಕ್ಕಾಗಿ ನಿರ್ಮಿತವಾಗಿತ್ತು. ಬರೀ ಇಬ್ಬರು ಅಂಗರಕ್ಷಕರೊಡನೆ ಅಫಜಲಖಾನನು ಆ ಡೇರೆಯೊಳಕ್ಕೆ ಬಂದು ಆ ರಾಜಯೋಗ್ಯವಾದ ಅಟ್ಟಹಾಸವನ್ನು ನೋಡಿ ಇವನಿಗಿಷ್ಟೇಕೆಂದು ಕಣ್ಣು ಕೆಂಪಗೆ ಮಾಡಿಕೊಂಡು ಕುಳಿತನು. ಅಷ್ಟುಹೊತ್ತಿಗೆ ಶಿವಾಜಿಯು ಹೇಗೆ ಸಮಯ ಬಂದೀತೋ ಎಂದು ಒಳಗೆ ಕಬ್ಬಿಣದ ಕವಚವನ್ನು ತೊಟ್ಟು ತಲೆಗೆ ಕಬ್ಬಿಣದ ಕುಲಾಯಿ ಯನ್ನಿಟ್ಟು ಎಡಗೈ ಬೆರಳುಗಳಿಗೆ ಉಕ್ಕಿನ ಉಗುರುಗಳನ್ನು ಹಾಕಿ ಬಲಗೈ ತೋಳಿನಲ್ಲಿ ಒಂದು ಕತ್ತಿಯನ್ನಡಗಿಸಿಕೊಂಡು ಮೇಲೆ ಸರ್ವ ಸಾಮಾನ್ಯವಾದ ಉಡುಪನ್ನು ಹಾಕಿಕೊಂಡು ಬರೀ ಇಬ್ಬರು ಸೇವಕ ರೊಡನೆ ಡೇರೆಯನ್ನು ಪ್ರವೇಶಿಸಿ ಅಫಜಲನಿಗೆ ಬಗ್ಗಿ ವಂದನೆಯನ್ನು ಮಾಡಿದನು. ಖಾನನು ಎದ್ದುಬಂದು ತಬ್ಬಿಕೊಂಡು ಎಡಗೈಯಿಂದ ಶಿವಾಜಿಯ ಕತ್ತಿಯನ್ನು ಹಿಡಿದು ಬಲಗೈಯಿಂದ ಅವನ ಪಕ್ಕಕ್ಕೊಂದು ಕತ್ತಿಯ ಪೆಟ್ಟನ್ನು ಕೊಟ್ಟನು. ಒಳಗೆ ಉಕ್ಕಿನಂಗಿ ಇದ್ದದರಿಂದ ಅದು ನಾಟಲಿಲ್ಲ. ಆದರೂ ಶಿವಾಜಿಯು ಒಳಗೆ ಮನಸ್ಸಿನಲ್ಲಿ ತನ್ನ ತಾಯಿ ಯನ್ನೂ ಭವಾನಿಯನ್ನೂ ಸ್ಮರಿಸುತ್ತ ಹೊರಗೆ ಅತಿ ವೇದನೆಯಿಂದ ನರಳುವವನಂತೆ ನಟಿಸಿ ತನ್ನ ಎಡಗೈಯನ್ನು ಖಾನನ ಸೊಂಟಕ್ಕೆ ಸುತ್ತಿ ಉಕ್ಕಿನ ಉಗುರುಗಳಿಂದ ಅವನ ಕರುಳನ್ನು ಕಿತ್ತು ಬಲಗೈಯ ಕತ್ತಿಯಿಂದ ಚುಚ್ಚಿದನು. ಒಡನೆ ಖಾನನ ಕೈಹಿಡಿತವು ಸಡಿಲಿತು. ಶಿವಾಜಿಯು ತತ್ಕಾಲದಲ್ಲಿಯೇ ಅಲ್ಲಿಂದ ಓಡಿ ತನ್ನವರ ಗುಂಪಿಗೆ ಸೇರಿ ಕೊಂಡನು. ಅಷ್ಟರಲ್ಲಿ ಖಾನನು ಅಪಸ್ವರದಿಂದ ಕೂಗಿಕೊಳ್ಳಲು

ಅವನ ಅಂಗರಕ್ಷಕರಲ್ಲೊಬ್ಬನು ಓಡಿಬಂದು ಶಿವಾಜಿಯ ತಲೆಯ ಮೇಲೆ ಕತ್ತಿಯನ್ನು ಪ್ರಯೋಗಿಸಿದನು. ಒಳಗೆ ಉಕ್ಕಿನ ಕುಲಾಯಿಯಿದ್ದದರಿಂದ ಅದು ಹಾಯಲಿಲ್ಲ. ಅಷ್ಟುಹೊತ್ತಿಗೆ ಶಿವಾಜಿಯ ಅಂಗರಕ್ಷಕನೊಬ್ಬನು ಬಂದು ಹಿಂದಿದ್ದ ಮೃತ್ಯುವಿಗೆ ಮೃತ್ಯುವಾದನು. ಈ ಗದ್ದಲದಲ್ಲಿ ಖಾನನ ಕಡೆಯವರು ಅವನನ್ನು ತಮ್ಮ ಬಿಡಾರಕ್ಕೊಯ್ಯುತ್ತಿರಲು ಶಿವಾಜಿಯ ಇನ್ನೊಬ್ಬ ಅಂಗರಕ್ಷಕನು ಬಂದು ಆ ವಾಹಕರ ಕಾಲುಮುರಿದು ಪಾಲಕಿಯನ್ನು ಕೆಡವಿ ಅಫಜಲನ ತಲೆಯನ್ನು ಚೆಂಡಾಡಿ ಬಿಟ್ಟನು. ಆಮೇಲೆ ನಾಲ್ಕುಕಡೆಯಿಂದಲೂ ಮರಾಠರು ಬಂದು ಮುತ್ತಿ ಅನಾಯಕವಾದ ಆ ಸೇನೆಗೆ ಚಿತ್ರಹಿಂಸೆಯನ್ನು ಮಾಡಿದರು. ಆ ಪ್ರದೇಶದ ಪ್ರತಿಯೊಂದು ಪೊದೆಯಲ್ಲಿಯೂ ಮರಾಠಾ ಹುಲಿಗಳು ಅವಿತುಕೊಂಡಿರುವವೆಂದು ಶತ್ರುಸೇನೆಯವರ ಎದೆ ಹೊಡೆದುಕೊಳ್ಳುವಂತಾಯಿತು. ಈ ಸಮಯದಲ್ಲಿ ಲೆಕ್ಕವಿಲ್ಲದಷ್ಟು ಸೈನಿಕರು ಸೆರೆಸಿಕ್ಕಿದರು. ಅಪಾರ ಧನರಾಶಿಯು ಭಂಡಾರಕ್ಕೆ ಬಂದು ಬಿತ್ತು. ಈ ಹಣದಿಂದ ಶಿವಾಜಿಯು ತನ್ನ ಅಧಿಕಾರಿಗಳಿಗೆಲ್ಲ ಕೈತುಂಬ ಬಹುಮಾನ ಕೊಟ್ಟದ್ದಲ್ಲದೆ ಬಹು ಬೆಲೆಯುಳ್ಳ ವಸ್ತ್ರಾಭರಣಗಳನ್ನೂ ತನ್ನವರಿಗೆ ಹಂಚಿದನು. ತನ್ನ ಹಿಂದೆಬಂದು ಯುದ್ಧದಲ್ಲಿ ಸತ್ತವರ ಮನೆಯವರಿಗೆ ಕೂಡ ಸಮೃದ್ಧಿಯಾದ ದ್ರವ್ಯವು ಸಿಕ್ಕಿತು. ಇಲ್ಲಿಗೆ ವಿಜಾಪುರದ ಮುಖದ ಮೇಲೆ ಚೆನ್ನಾಗಿ ಮಶಿಯನ್ನು ಬಳಿದಂತಾಯಿತು. ಮರಾಠರು ಈ ರೀತಿಯ ವಾರ್ತೆಯನ್ನು ಎಲ್ಲೆಲ್ಲಿಯೂ ಹಾಡುಕಟ್ಟಿ ಹಾಡಿದರು. ಈ ಪ್ರಕಾರ ಶಿವಾಜಿಯು ಮೋಸದ ಮುಂದೆ ಮೋಸವನ್ನೇ ಹೂಡಿ ಪಾರಾದನು.

## ಶಾಹಿಸ್ತಖಾನನಿಗೆ ಗುಟುಕು ನೀರು ಕುಡಿಸಿದ್ದು

ಶಿವಾಜಿಯ ಹಾವಳಿಯು ಮರಕಳಿಸಿತು. ಇದೆಲ್ಲ ವರ್ತಮಾನಗಳನ್ನು ಕೇಳಿ ಔರಂಗಜೇಬನು ಶಿವಾಜಿಯ ಆಟವನ್ನು ಮುಗಿಸಿಯೇ ಬಿಡಬೇಕೆಂದು ನಿಶ್ಚಯಿಸಿದನು. ಆಗ ಅವನಲ್ಲಿ ಶಾಹಿಸ್ತಖಾನನೆಂಬ ಒಳ್ಳೇ ಹೆಸರಾದ ಸೇನಾಪತಿಯಿದ್ದನು. ಅವನು ಔರಂಗಜೇಬನ ಮನಸ್ಸನ್ನು ಹಿರಿಹಿರಿ ಹಿಗ್ಗಿಸುವೆನೆಂದು ತಾಂಬೂಲವನ್ನು ತೆಗೆದು

ಕೊಂಡು ಹೊರಟು ತನ್ನ ಪರಾಕ್ರಮದಿಂದ ಚಾಣಕ ಮೊದಲಾದ ಊರುಗಳನ್ನು ಬಾಯಲ್ಲಿ ಹಾಕಿಕೊಂಡು ಪುಣೆಯಲ್ಲಿ ಬಂದು ನಿಂತನು. ಪ್ರಬಲವಾದ ಸೇನೆಯಿಲ್ಲದ ಶಿವಾಜಿಯು ಈ ದುಷ್ಟನಿಗೆ ಉಪಾಯ ದಿಂದಲೇ ಬುದ್ಧಿಯನ್ನು ಕಲಿಸಬೇಕೆಂದು ನಾನೂರು ಜನರೊಡನೆ ಖಾನನ ಬಿಡಾರಕ್ಕೆ ಬಂದು ತಾವು ದಿಲ್ಲಿಯಿಂದ ಬಂದವರೆಂದು ಹೇಳಿ ದ್ವಾರಪಾಲಕರಿಗೆ ಮಂಕುಬೂದಿಯನ್ನು ಹಾಕಿ ನಡುರಾತ್ರಿಯಲ್ಲಿ ಒಳ ಹೊಕ್ಕರು. ಆಗ ಮುಸಲ್ಮಾನರಿಗೆ ಉಪವಾಸದ ಹಬ್ಬ. ಹಗಲೆಲ್ಲ ಹಸಿದಿದ್ದು ರಾತ್ರಿ ಹೊಟ್ಟೆ ಬಿರಿಯುವಂತೆ ಉಂಡು ಎಲ್ಲರೂ ಗಾಢನಿದ್ರೆ ಯಲ್ಲಿ ಗೊರಕೆಯನ್ನು ಹೊಡೆಯುತ್ತಿದ್ದರು. ಬೆಳಗುಮುಂಜಾವಿನ ಹೊತ್ತಿಗೆ ಅಡಿಗೆಯನ್ನು ಮಾಡುವ ಒಬ್ಬಿಬ್ಬರು ಮಾತ್ರ ಮಿಣಗುಟ್ಟುವ ಒಲೆಯ ಮುಂದೆ ಕುಳಿತಿದ್ದರು. ಮರಾಠರು ಸದ್ದಿಲ್ಲದಂತೆ ಅವರನ್ನು ಹೊರಕ್ಕೆ ಸಾಗಿಸಿದರು. ಶಿವಾಜಿಯು ಖಾನನ ಮಲಗುವ ಮನೆ ಯೊಳಕ್ಕೆ ನುಗ್ಗಿದನು. ಖಾನನ ಹೆಂಡತಿಯು ಆ ಗದ್ದಲದಿಂದ ಎಚ್ಚತ್ತು ಖಾನನನ್ನು ಎಬ್ಬಿಸಿದಳು. ಅವನು ಎದ್ದು ಆಯುಧಕ್ಕೆ ಕೈಹಾಕುವಷ್ಟರಲ್ಲಿಯೇ ಶಿವಾಜಿಯು ಕೊಟ್ಟ ಪೆಟ್ಟು ಅವನ ಹೆಬ್ಬೆಟ್ಟನ್ನು ಕತ್ತರಿಸಿತು. ಅಷ್ಟರಲ್ಲಿ ಬುದ್ಧಿವಂತಳಾದ ಆ ಹೆಂಗಸು ಆ ಕೋಣೆಯ ದೀಪವನ್ನು ಆರಿಸಿಬಿಟ್ಟಳು. ಮರಾಠರು ಆ ಕೋಣೆಯಲ್ಲಿ ಎಲ್ಲೆಲ್ಲಿ ಏನೇನಿರುವದೆಂದು ತಿಳಿಯದೆ ಇದ್ದದರಿಂದ ಅವರು ಅಲ್ಲಿ ಎಡವುತ್ತ ಮುಗ್ಗರಿಸುತ್ತ ಒಬ್ಬರಿಗೊಬ್ಬರು ಹಾದಾಡುತ್ತಿರುವಷ್ಟರಲ್ಲಿ ಮೊಗಲ ಭಟರು ಖಾನನನ್ನು ಬೇರೆ ಕಡೆಗೆ ಸಾಗಿಸಿದರು. ಶಿವಾಜಿಯ ಸೈನಿಕರು ಆಮೇಲೆ ಅಲ್ಲಿಯ ಜನರ ಮೇಲೆ ತಮ್ಮ ಸೇಡನ್ನು ತೀರಿಸಿಕೊಂಡು ಬಿಟ್ಟರು.

## ಸೂರತ್ತಿನ ಲೂಟಿ

ಷಾಹಿಸ್ತಖಾನನನ್ನು ಬಂದ ದಾರಿಗೆ ಸುಂಕವಿಲ್ಲದಂತೆ ಕಳುಹಿಸಿದ ಮೇಲೆ ಶಿವಾಜಿಯು ಮುಸಲ್ಮಾನರಿಗೆ ಒತ್ತಾಸೆಯಾಗಿದ್ದ ಸೂರತ್ತಿನ ಕಡೆಗೆ ತೆರಳಿದನು. ಸುರತ ಪಟ್ಟಣವು ಮುಸಲ್ಮಾನರು ಅರಾಬಿಗೆ ಹೋಗುವ ದಾರಿಯಲ್ಲಿ ಐಶ್ವರ್ಯದಲ್ಲಿ ಹೆಸರಾಗಿದ್ದ ಊರು. ಶಿವಾ

ಜಿಯು ತನ್ನ ಮೇಲೆ ಔರಂಗಜೇಬನು ಕಣ್ಣಿಟ್ಟಿರುವದರಿಂದ ಶಿವನ ಉಪಟಳವನ್ನು ಹಿಮ್ಮೆಟ್ಟಿಸುವದಕ್ಕಾಗಿ ಇಟ್ಟುಕೊಳ್ಳಬೇಕಾದ ಹೆಚ್ಚಿನ ಸೈನ್ಯದ ವೆಚ್ಚಕ್ಕಾಗುವ ಹಣವನ್ನು ಆವನ ಪ್ರಜೆಗಳಾದ ಸೂರತ್ತಿನವರು ತೆರುವದಗತ್ಯವೆಂದೂ ಹಾಗೆ ಮಾಡದೆ ಇದ್ದರೆ ತಾನು ತನ್ನ ತೋಳು ಗಳಿಗಪ್ಪಣೆಯನ್ನು ಕೊಡುವೆನೆಂಬೂ ಅಲ್ಲಿಯ ಪ್ರಮುಖರಿಗೆ ಹೇಳಿ ಕಳುಹಿಸಿದನು. ಆ ಮುಸಲ್ಮಾನರು ಆದಕ್ಕೆ ಸೊಪ್ಪುಹಾಕಲಿಲ್ಲ. ಆದ್ದ ರಿಂದ ಶಿವಾಜಿಯು ಅವರ ಮೇಲೆ ತನ್ನ ಸೇನೆಯನ್ನು ಹಾಯಿಸಿದನು. ಮತ್ತು ತನ್ನ ಮೇಲೆ ಪ್ರತಿಭಟಿಸಿ ಬಂದ ಅಲ್ಲಿಯ ಮುಸಲ್ಮಾನರ ದುರ್ಬಲ ಸೈನ್ಯವನ್ನು ನುಚ್ಚುನುರಿಮಾಡಿ ಅಲ್ಲಿಯ ಐಶ್ವರ್ಯವನ್ನೆಲ್ಲ ಹೊತ್ತುಕೊಂಡು ಹೋದನು. ಇಂಗ್ಲೀಷರೂ ಅಲ್ಲಿಯೇ ಇದ್ದರು ಕೂಡ ಆವರು ತಮ್ಮ ಪ್ರತಿಪಕ್ಷದವರಲ್ಲವೆಂದು ಆವರ ಮೇಲೆ ಕೈಮಾಡ ಲಿಲ್ಲ. ಅಷ್ಟರಲ್ಲಿ ಹಿಂದಿನಿಂದ ಮೊಗಲರ ಸೇನೆಯು ಬರುತ್ತಿರುವ ದೆಂದು ಕೇಳಿ ಶಿವಾಜಿಯು ಸದ್ದಿಲ್ಲದೆ ಅಲ್ಲಿಂದ ಮಾಯವಾದನು.

## ಜಯಸಿಂಗನೊಡನೆ ಸಂಧಿ

ಶಿವಾಜಿಯು ಇತ್ತ ಮಾಯವಾದರೂ ಮತ್ತೊಂದು ಕಡೆ ಎಲ್ಲಿ ಯಾದರೂ ಕಾಣಿಸಿಕೊಂಡು ಕೊಳ್ಳೆಹೊಡೆಯುತ್ತಲೇ ಇದ್ದನು. ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕೆಂದು ಯೋಚಿಸಿ ಔರಂಗ ಜೇಬನು ಶಿವಾಜಿಯನ್ನು ಹಿಡಿಯುವದಕ್ಕೆ ಜಯಸಿಂಗನೆಂಬ ರಾಜಪುತ್ರ ಸೇನಾಪತಿಯನ್ನು ನಿಯೋಜಿಸಿದನು. ಆವನು ಬಂದು ಶಿವಾಜಿಯ ಅಧಿಕಾರಿಗಳಿಗೆ ಲಂಚವನ್ನು ಕೊಟ್ಟು ಭೇದವನ್ನು ಹುಟ್ಟಿಸಿ ವಜ್ರಗಡ ಮುಂತಾದ ಕೋಟೆಗಳನ್ನು ತುತ್ತುಮಾಡಿಕೊಂಡು ಶಿವಾಜಿಗೆ ಎಲ್ಲ ಕಡೆ ಗಳವರೂ ಶತ್ರುಗಳಾಗುವಂತೆ ಮಾಡಿ ಮುಂದೆ ಮುಂದೆ ಬರುತ್ತಿದ್ದನು. ಮೊಗಲರಿಗಾಗಿ ತಮ್ಮ ತಮ್ಮ ದೇಹಗಳನ್ನು ಮಾರಿಕೊಂಡು ಇತರರನ್ನೂ ಬಲೆಗೆ ಕೆಡಹುವ ಜಯಸಿಂಗನ ಮಾರ್ಗದಲ್ಲಿ ಅನಿವಾರ್ಯವಾದ ಅಡ ಚಣಿಗಳನ್ನು ಕಲ್ಪಿಸುವದು, ನಡುರಾತ್ರಿಯಲ್ಲಿ ಒಮ್ಮೆಲೇ ಕಾಣಿಸಿ ಕೊಂಡು ಎದೆಗೆಡಿಸುವದು, ಅವರಿರುವ ಸುತ್ತುಮುತ್ತಲಿನ ಕಾಡಿಗೆ ಬೆಂಕಿಯನ್ನು ಹಚ್ಚುವದು—ಈ ರೀತಿಯಲ್ಲಿ ಶಿವಾಜಿಯ ಸೈನಿಕರು

ಮುಸುಕಿನೊಳಗಿನ ಗುದ್ದಾಗಿದ್ದರು. ಅವನು ಪುರಂದರಕ್ಕೆ ಬಂದು ಮುತ್ತಿದಾಗ ಶಿವಾಜಿಯು ಅಲ್ಲಿಯ ತಮ್ಮ ಹೆಂಗಸರು ಮಕ್ಕಳಿಗೆ ಧಕ್ಕೆಯಾಗಬಾರದೆಂದು ಏನಾದರೂ ಪರಿಹಾರ ದ್ರವ್ಯವನ್ನು ಕೊಡುವ ರಾಗವನ್ನು ತೆಗೆದನು. ಅಲ್ಪಸ್ವಲ್ಪಕ್ಕೆ ಜಯಸಿಂಗನ ಹಸಿವಡಗುವಹಾಗೆ ಕಾಣಲಿಲ್ಲ. ಹೇಗಾದರೂ ಸಂಧಿಯನ್ನು ಮಾಡಿಕೊಳ್ಳಬೇಕೆಂದು ಶಿವಾಜಿಯು ಜಯಸಿಂಗನೊಡನೆ ಪರಸ್ಪರ ಸಮಾಗಮವನ್ನು ಬಯಸಿದನು. ಒಬ್ಬರಿಗೊಬ್ಬರು ಎರಡೆಣಿಸಕೂಡದೆಂದು ಕಟ್ಟುಮಾಡಿಕೊಂಡು ಇಬ್ಬರೂ ಒಂದುಕಡೆ ಸೇರಿದರು. ಅಲ್ಲಿ ನಡೆದ ಒಡಂಬಡಿಕೆಗಳಿಂದ ಶಿವಾಜಿಯ ೨೩ ಕೋಟೆಗಳು ಮೊಗಲರಿಗೆ ತರ್ಪಣವಾದವು. ಶಿವಾಜಿಯು ತನ್ನ ಮಗನೊಡನೆ ಮತ್ತು ತನ್ನ ದಂಡಿನವರೊಡನೆ ಮೊಗಲರಿಗೆ ನೆರವಾಗುವೆನೆಂದು ಒಪ್ಪಿ ಮಾತು ಕೊಟ್ಟದ್ದಲ್ಲದೆ ಆಗ ಜಯಸಿಂಗನೊಡನೆ ವಿಜಾಪುರದ ಮೇಲೆ ಹೋಗಿ ತನ್ನ ಸಾಹಸವನ್ನು ತೋರಿಸಿದನು. ಶಿವಾಜಿಯ ಈ ಸಹಾನುಭೂತಿಯನ್ನು ಜಯಸಿಂಗನು ಔರಂಗಜೇಬನಿಗೆ ತಿಳಿಸಿ ಇದಕ್ಕೆ ಪ್ರೋತ್ಸಾಹಕವಾಗಿ ಅವನಿಂದ ಶಿವಾಜಿಗೆ ರತ್ನಖಚಿತವಾದ ಕತ್ತಿ ಮೊದಲಾದ ಬಹುಮಾನಗಳನ್ನೂ ರಾಜನೆಂಬ ಬಿರುದನ್ನೂ ತರಿಸಿಕೊಟ್ಟು ಸನ್ಮಾನ ಮಾಡಿದನು. ತನ್ನ ತಂದೆಯ ಮುಂದೆ ತಾನು ರಾಜನೆಂದು ಕರೆಸಿಕೊಳ್ಳಬಾರದೆಂಬ ವಿನಯದಿಂದ ಶಿವಾಜಿಯು ತನ್ನ ತಂದೆ ಇರುವವರಿಗೂ ಆ ಬಿರುದನ್ನು ಉಪಯೋಗ ಮಾಡಿಕೊಳ್ಳಲಿಲ್ಲ.

## ಔರಂಗಜೇಬನಿಗೆ ಚಳ್ಳೇಹಣ್ಣನ್ನು ತಿನ್ನಿಸಿದ್ದು

ಸಾಕಿದಾನೆಯು ಕಾಡಾನೆಯನ್ನು ಹಿಡಿದುಕೊಡುವಂತೆ ಜಯ-ಸಿಂಹನು ಔರಂಗಜೇಬನಿಗೆ ಶಿವಾಜಿಯನ್ನು ಉಪಾಯನದಾನವಾಗಿ ಕೊಡಬೇಕೆಂದು ಸಂಕಲ್ಪ ಮಾಡಿ ಶಿವಾಜಿಯನ್ನು ಪ್ರೋತ್ಸಾಹಿಸಿದನು. ಸಾಕ್ಷಾತ್ತಾಗಿ ಔರಂಗಜೇಬನ ಪರಿಚಯವಾದರೆ ನಿನ್ನಂಥವನಿಗೆ ವಿಜಾಪುರ ಮೊದಲಾದ ಎಲ್ಲಾ ದಕ್ಷಿಣದೇಶದ ಸರ್ವಾಧಿಪತ್ಯವೇ ದೊರೆಯಬಹುದೆಂದು ಮುಂತಾಗಿ ಮೂಗಿಗೆ ತುಪ್ಪವನ್ನು ಹಚ್ಚಿದನು. ಶಿವಾಜಿಗೆ ಏನು ಮಾಡುವದಕ್ಕೂ ತೋಚದೆ ಹೋಯಿತು. ಔರಂಗಜೇಬನ

ಮುಂದೆ ಹೋಗಿ ನಿಂತರೆ ಮೃತ್ಯುವಿನ ದವಡೆಯೊಳಕ್ಕೆ ಸಿಕ್ಕಿದಂತಾದೀತೋ ಏನೋ ಎಂಬ ಅಳುಕು ಇದ್ದೇ ಇತ್ತು. ಆದರೂ ಅವನು ಮನಸ್ಸಿನಲ್ಲಿ ತನ್ನ ಗುರುಗಳನ್ನು ಸ್ಮರಣೆ ಮಾಡಿ ಒಮ್ಮೆ ತನ್ನವರಿಗೆಲ್ಲಾ ದರ್ಶನವನ್ನು ಕೊಟ್ಟು ತಕ್ಕ ಬುದ್ಧಿವಾದವನ್ನು ಹೇಳಿ ತಾಯಿಯ ಆಶೀರ್ವಾದವನ್ನು ತೆಗೆದುಕೊಂಡು ಆಗ್ರಾಕ್ಕೆ ಹೊರಟನು. ಔರಂಗಜೇಬನು ಆಗ ಆಗ್ರಾಕ್ಕೆ ಬಂದಿದ್ದನು. ಜಯಸಿಂಗನು ಔರಂಗಜೇಬನಿಗೆ ಮುಂದಾಗಿಯೇ ಬರೆದು ಶಿವಾಜಿಯ ಶುಭಾಗಮನಕ್ಕೆ ತಕ್ಕ ವ್ಯವಸ್ಥೆಯನ್ನು ಮಾಡಿಸಿದ್ದನು. ಶಿವಾಜಿಯು ಔರಂಗಜೇಬನ ಬಳಿಗೆ ಹೋದ ದಿನ ಅವನ ಐವತ್ತನೇ ಹುಟ್ಟಿದ ಹಬ್ಬದ ಉತ್ಸವ ನಡೆಯುತ್ತಿತ್ತು. ಶಿವಾಜಿಯನ್ನು ಇದಿರುಗೊಂಡವನು ಒಬ್ಬ ಸಾಮಾನ್ಯನಾಗಿದ್ದನು. ಆಗಲೇ ಶಿವಾಜಿಯ ರಕ್ತವು ನೆತ್ತಿಗೇರಿತು. ಆದರೂ ತಡೆದುಕೊಂಡು ಅವನು ಒಳಗೆ ಹೋದನು. ಔರಂಗಜೇಬನು "ಶಿವಾಜಿರಾಜಾ, ಬಾ" ಎಂದು ಪ್ರೇಮದಿಂದ ಕರೆದನು. ಶಿವಾಜಿಯು ವಂದನೆಯನ್ನು ಮಾಡಿ ತನಗಾಗಿ ಸಿದ್ಧಮಾಡಿದ ಸ್ಥಾನದಲ್ಲಿ ಕುಳಿತು ಸುತ್ತುಮುತ್ತು ನೋಡಿದನು. ತನ್ನ ಪೀಠವು ಔರಂಗಜೇಬನಿಗೆ ಮರೆಯಾಗಿತ್ತು. ಕಡಿಮೆಯ ಯೋಗ್ಯತೆಯವರಿಗೆಲ್ಲಾ ಮುಂದೆಮುಂದೆ ಸ್ಥಾನವು ದೊರೆತಿತ್ತು. 'ಈ ಅವಿವೇಕವನ್ನು ಯಾರೂ ನೋಡುವವರಿಲ್ಲವೇ?' ಎಂದು ಶಿವಾಜಿಯು ಬಾಯಿಮಾಡುವದಕ್ಕಾರಂಭಿಸಿದನು. ಆಸ್ಥಾನಮರ್ಯಾದೆಯು ಕೆಡುವದೆಂದು ಒಬ್ಬನು ಅವನನ್ನು ಸಮಾಧಾನ ಮಾಡುವದಕ್ಕೆ ಹೋದನು. ಯೋಗ್ಯತಾಯೋಗ್ಯತೆಯ ವಿವೇಚನೆ ಇಲ್ಲದ ಆಸ್ಥಾನದಲ್ಲಿ ತಾನು ಕೂಡಲಾರೆನೆಂದು ಧಿಟ್ಟತನದಿಂದ ಎದ್ದು ಶಿವಾಜಿಯು ತನ್ನ ದಾರಿಯನ್ನು ಹಿಡಿದನು. ಅದೇನು ಗದ್ದಲವೆಂದು ಔರಂಗಜೇಬನು ಕೇಳಲು ಸಭಾಸ್ಥಾನದ ಉಷ್ಣತೆಯು ಹೆಚ್ಚಾಗಿ ಶಿವಾಜಿಯು ಹೀಗಾಡುವನೆಂದು ಒಬ್ಬ ಅಧಿಕಾರಿಯು ಹೇಳಿದನು. ಅವನು ಇಂಥ ಆಸ್ಥಾನವನ್ನು ಎಲ್ಲಿಯೂ ನೋಡಿರಲಾರನೆಂದೂ ತನ್ನ ಸ್ಥಲದಲ್ಲಿ ಸುಧಾರಿಸಿಕೊಳ್ಳಲೆಂದೂ ಔರಂಗಜೇಬನು ಹೇಳಿದನು. ಸಭೆಯ ಕಾರ್ಯವೆಲ್ಲಾ ಮುಗಿದ ಮೇಲೆ ಶಿವಾಜಿಯು ಈ ವಿಷಯವಾಗಿ ಔರಂಗಜೇಬನನ್ನೇ ಸಾಕ್ಷಾತ್ತಾಗಿ ಪ್ರಶ್ನೆ ಮಾಡಿದನು. ಇದರಿಂದ ಶಿವಾಜಿಯು ಎಂದಿದ್ದರೂ ತನ್ನ ಗಂಟಲಕ್ಕೆ ಗಾಣವೆಂದೇ ಔರಂಗಜೇಬನು ಮನಗಂಡು ಅವನನ್ನು

ಊರಹೊರಗೆ ಒಂದು ಮನೆಯಲ್ಲಿರಿಸಿ ಬಲವಾದ ಕಾವಲಿಟ್ಟನು. ಶಿವಾಜಿಗೆ ಇಲ್ಲಿ ಮೂರು ತಿಂಗಳು ಕಳೆಯಬೇಕಾಯಿತು. ಆಮೇಲೆ ಒಂದು ದಿನ ಸ್ಫೂರ್ತಿಯಾಗಿ ಶಿವಾಜಿಯು ಒಂದು ಯುಕ್ತಿಯನ್ನು ತೆಗೆದು ತನ್ನ ದೇಹದಲ್ಲಿ ಅಸ್ವಸ್ಥತೆಯುಂಟಾಗಿರುವದೆಂದು ಹೇಳಿ ಪ್ರತಿದಿನವೂ ಬುಟ್ಟಿಬುಟ್ಟಿಗಳಲ್ಲಿ ಹಣ್ಣುಹಂಪಲಗಳನ್ನಿಟ್ಟು ಅಡ್ಡೆಗಳಿಗೆ ಕಟ್ಟಿಹೊರಿಸಿ ಬ್ರಾಹ್ಮಣರಿಗೆ ಕಳುಹಿಸುವದನ್ನು ಮೊದಲುಮಾಡಿದನು. ದ್ವಾರಪಾಲಕರು ಮೊದಮೊದಲು ಅವುಗಳನ್ನೆಲ್ಲಾ ತಡಕಿನೋಡಿ ಬಿಡುತ್ತಿದ್ದರು. ಈಚೀಚೆಗೆ ಅವರು ಹಾಗೆ ಮಾಡುವದನ್ನು ಬಿಟ್ಟಿದ್ದರು. ಒಂದು ದಿನ ಶಿವಾಜಿಯು ಸಾಯಂಕಾಲದಲ್ಲಿ ತನ್ನಂತೆ ಆಕೃತಿಯುಳ್ಳ ತನ್ನ ಭಟನೊಬ್ಬನನ್ನು ತನ್ನ ಹಾಸಿಗೆಯ ಮೇಲೆ ಮಲಗಿಸಿ ತಾನು ಬುಟ್ಟಿಯೊಳಗೆ ಕೂತು ಹೊರಬಿದ್ದು ಪಾರಾದನು. ಮರುದಿನ ಬೆಳಿಗ್ಗೆ ದ್ವಾರಪಾಲಕರು ನೋಡಿದಾಗ ಹಾಸಿಗೆಯ ಮೇಲೆ ಶಿವಾಜಿಯು ಇದ್ದಂತೆ ಕಂಡಿತು. ಹೀಗೆ ಅವರೆಲ್ಲರೂ ವೈಮರೆತಿರುವಾಗ ಹಾಸಿಗೆಯ ಮೇಲಿದ್ದವನು ಎದ್ದು ಬಾಗಿಲು ತೆಗೆದುಕೊಂಡು ಹೊರಬಿದ್ದನು. ಅವನು ಶಿವಾಜಿಯಾಗಿರಲಿಲ್ಲವಾದ್ದರಿಂದ ಯಾರೂ ತಡೆಯಲಿಲ್ಲ. ಒಂದೆರಡು ನಿಮಿಷಗಳಲ್ಲಿಯೇ ಮತ್ತೊಮ್ಮೆ ಶಿವಾಜಿ ಇಲ್ಲದಿರುವದನ್ನು ಕಂಡು ಗಾಬರಿಗೊಂಡು ದ್ವಾರಪಾಲಕರು ಆ ಸಂಗತಿಯನ್ನು ಔರಂಗಜೇಬನಿಗೆ ತಿಳಿಸಬೇಕಾಯಿತು. ಔರಂಗಜೇಬನು ಕಣ್ಣು ಕೆಂಪಗೆ ಮಾಡಿ ಕೇಳಿದಾಗ ಶಿವಾಜಿಯು ಮಹಾಮಾಯಗಾರನಾಗಿರಬೇಕೆಂದೂ ಆವನು ಭೂಮಿಯಲ್ಲಿಯೋ ಆಕಾಶದಲ್ಲಿಯೋ ಅಡಗಿಕೊಂಡಿರಬೇಕೆಂದೂ ಅಲ್ಲಿನ ಅಧಿಕಾರಿಯು ತಾರಮ್ಮಯ್ಯನಾಡಿದನು. ಒಡನೆ ಶಿವಾಜಿಯನ್ನು ಹುಡುಕಲು ಎಷ್ಟೋ ಜನರು ಹೊರಟರು. ಅವರದೇ ಒಂದು ದಾರಿಯಾಯಿತು. ಇವನದೇ ಒಂದು ದಾರಿಯಾಯಿತು. ಔರಂಗಜೇಬನು ಶಿವಾಜಿಗಿನ್ನೇನು ಮಾಡಬೇಕೆಂದು ಎರಡು ಕಯ್ಯನ್ನೂ ತಲೆಯ ಮೇಲೆ ಹೊತ್ತುಕೊಂಡು ಕೂತನು.

## ಧರ್ಮದೃಷ್ಟಿ

ಅಲ್ಲಿಂದ ಹೊರಟ ಶಿವಾಜಿಯು ಮಥುರೆಯಲ್ಲಿ ಸನ್ಯಾಸಿಯ ವೇಷವನ್ನು ಧಾರಣ ಮಾಡಿ ಪ್ರಯಾಗದಲ್ಲಿ ತೀರ್ಥವಿಧಿಯನ್ನು ತೀರಿಸಿ

ಕೊಂಡು ಗೋದಾವರೀ ತೀರದ ಒಂದು ಹಳ್ಳಿಗೆ ಬಂದು, ಒಂದು ಮನೆಗೆ ಹೋದನು. ಆ ಮನೆಯಾಕೆಯು ಸ್ವಲ್ಪ ದಿನಗಳ ಹಿಂದೆ ಮರಾಠರು ಬಂದು ತನ್ನದನ್ನೆಲ್ಲಾ ದೋಚಿಕೊಂಡು ಹೋದರೆಂದು ಸಂತಾಪಪಟ್ಟುಕೊಂಡು ಹೇಳಿದ ಸಮಾಚಾರವನ್ನೆಲ್ಲಾ ಮನಸ್ಸಿನಲ್ಲಿಟ್ಟುಕೊಂಡು ಶಿವಾಜಿಯು ತಾನು ಊರಿಗೆ ಹೋಗುತ್ತಲೇ ಆಕೆಯನ್ನು ಅಲ್ಲಿಗೆ ಕರಿಸಿಕೊಂಡು ಆಕೆಗಾಗಿದ್ದ ನಷ್ಟವನ್ನೆಲ್ಲಾ ತುಂಬಿ ಕೊಟ್ಟನು. ಹೀಗೆ ಶತ್ರುವರ್ಗದ ಸತ್ವಸಾರವನ್ನು ಹೀರುವ ಸಂದರ್ಭದಲ್ಲಿ ಪ್ರಮಾದದಿಂದ ತನ್ನ ಕಡೆಯವರಿಂದ ನಿರಪರಾಧಿಗಳಿಗೇನಾದರೂ ಹಾನಿಯಾಯಿತೆಂದು ತಿಳಿದರೆ ತಪ್ಪದೆ ಆ ತಪ್ಪನ್ನು ತಿದ್ದುತ್ತಿದ್ದನು. ಈ ದೇಶದವರಿಗೆ ಮುಳ್ಳಿನ ಹಾಸಿಗೆಯಾದಂಥ ಪರಕೀಯಪ್ರಭುತ್ವವೆಂಬ ವೃಕ್ಷಕ್ಕೆ ನೀರೆರೆಯುತ್ತಿರುವವರನ್ನು ಹೊರತು ಉಳಿದ ಯಾರ ಮೇಲೆಯೂ ಅತ್ಯಾಚಾರವನ್ನು ನಡೆಸದಂತೆಯೂ ಶತ್ರುಪಕ್ಷದವರಲ್ಲಿಯೇ ಆದರೂ ನಿಃಶಸ್ತ್ರರಾದವರ ಮೇಲೆಯೂ ಶರಣುಬಂದವರ ಮೇಲೆಯೂ ಸ್ತ್ರೀಯರ ಮೇಲೆಯೂ ಕೈಮಾಡದಂತೆಯೂ ಶಿವಾಜಿಯು ತನ್ನ ಕಡೆಯವರಿಗೆ ಕಟ್ಟಾಜ್ಞೆಯನ್ನು ಮಾಡಿದ್ದನು. ಶತ್ರುಗಳ ಮೇಲೆ ಎಷ್ಟು ಶತ್ರುತ್ವವನ್ನು ತೋರಿಸಿದರೂ ಅವರ ಧರ್ಮಪಂಥದ ಮೇಲೆ ಮಾತ್ರ ಎಷ್ಟುಮಾತ್ರವೂ ಶತ್ರುತ್ವವನ್ನು ತೋರಿಸುತ್ತಿರಲಿಲ್ಲ. ಅನುಯಾಯಿಗಳ ಅಚಾತುರ್ಯದಿಂದ ಅನರ್ಥಗಳೇನಾದರೂ ಆಗಿದ್ದರೆ ಅದು ದೊಡ್ಡಮಾತಲ್ಲ. ಶತ್ರುಗಳನ್ನು ಹಣ್ಣಿಗೆ ತರುವದಕ್ಕೆ ಮಾತ್ರ ಇವನು ಯಾವ ಉಪಾಯವನ್ನು ಮಾಡುವದಕ್ಕೂ ಹಿಂದೆಮುಂದೆ ನೋಡುತ್ತಿರಲಿಲ್ಲ.

## ಔರಂಗಜೇಬನೊಡನೆ ಸಂಧಿ

ಶಿವಾಜಿಯು ಆಗ್ರಾದಿಂದ ಬಂದಮೇಲೆ ಅತ್ತ ಔರಂಗಜೇಬನು ಬೇರೆ ಬೇರೆ ಕಡೆಗಳಿಗೆ ದಂಡಯಾತ್ರೆಗಳಿಗೆ ಹೋಗಬೇಕಾಗಿದ್ದದರಿಂದ ಶಿವಾಜಿಯನ್ನು ಕೆಣಕುವದಕ್ಕೆ ಆಗಲಿಲ್ಲ. ತನ್ನ ದಾಳಿಯ ದೆಸೆಯಿಂದ ವಿಜಾಪುರದ ಸುಲ್ತಾನನು ತನ್ನ ತಂದೆಯನ್ನು ಸೆರೆಯಲ್ಲಿಟ್ಟಿರುವನೆಂದು ಕೇಳಿ ಆತನಿಗೇನಾದರೂ ಘಾತವಾದೀತೆಂದು ಶಿವಾಜಿಯು ಕಾಲು

ಕೆರೆದು ಜಗಳವನ್ನು ತೆಗೆಯದೆ ತನ್ನ ಊರಲ್ಲಿ ತಾನಿದ್ದುಕೊಂಡು ತನ್ನ ಕೋಟೆಕೊತ್ತಲಗಳನ್ನು ಭದ್ರಮಾಡಿಕೊಂಡು ಜನರು ಸ್ವರಾಜ್ಯದ ಸವಿಯನ್ನು ನೋಡಿ ಚಪ್ಪರಿಸುವಂತೆ ಮಾಡುವದರಲ್ಲಿ ತತ್ಪರನಾಗಿದ್ದನು. ಇಷ್ಟುಹೊತ್ತಿಗೆ ಜಯಸಿಂಗನು ಸತ್ತುಹೋಗಿ ಆ ಸ್ಥಾನಕ್ಕೆ ಜಸವಂತ ಸಿಂಗನೆಂಬವನು ಬಂದಿದ್ದನು. ತನ್ನ ತೋಳತೂಕವನ್ನು ಇದುವರೆಗೆ ಎಲ್ಲರಿಗೂ ತಿಳಿಸಿದ ಶಿವಾಜಿಯು ಈಗ ಮೊಗಲರ ಸ್ನೇಹವನ್ನು ಪಡೆದು ತನ್ನ ತಂದೆಯ ಸೆರೆಯನ್ನು ಬಿಡಿಸುವದಕ್ಕಾಗಿ ಔರಂಗಜೇಬನೊಡನೆ ಸಂಧಿಯ ಮಾತುಕತೆಗಳನ್ನು ನಡೆಸಿದನು. ಜೀವಭಯವು ತೋರಿದ್ದರಿಂದ ತಾನು ಆಗ್ರಾದಿಂದ ಓಡಿಬಂದೆನೆಂದು ಮುಂತಾಗಿ ಜಸವಂತ ಸಿಂಗನ ಮೂಲಕ ಹೇಳಿಕಳುಹಿಸಿ ಶಿವಾಜಿಯು ಔರಂಗಜೇಬನ ಕಲ್ಪನಾತರಂಗಗಳನ್ನು ಕಳೆದನು. ಶಿವಾಜಿಯು ಸೆರೆಸಿಕ್ಕದಿದ್ದರೂ ತನ್ನ ಮಟ್ಟಿಗೆ ತಾನು ತನ್ನೂರಲ್ಲಿರುವದೆಂದರೆ ಔರಂಗಜೇಬನಿಗೆ ಅದೇ ಒಂದು ದೊಡ್ಡ ಲಾಭವಾಗಿತ್ತು. ಆದ್ದರಿಂದ ಔರಂಗಜೇಬನಿಗೂ ಶಿವಾಜಿಗೂ ಸಂಧಿ ಸಂಧಿಸಿತು. ಔರಂಗಜೇಬನು ಶಿವಾಜಿಯ 'ರಾಜಾ' ಎಂಬ ಬಿರುದನ್ನು ಗೌರವಿಸಿ ಅವನ ಮಗನನ್ನು ತನ್ನ ದಂಡಿನ ದೊಡ್ಡ ಅಧಿಕಾರಿಯಾಗಿ ಮಾಡಿ ಅವನಿಗಾಗಿ ಬಿರಾರದ ಪ್ರಾಂತವನ್ನು ಜಹಗೀರಿಯಾಗಿ ಕೊಟ್ಟನು. ಈ ಸಂದರ್ಭದಲ್ಲಿ ಎರಡು ಮೂರು ವರ್ಷ ಶಿವಾಜಿಯು ದೇಶದಲ್ಲೆಲ್ಲಾ ಸ್ವರಾಜ್ಯದ ಬೆಳಕನ್ನು ಹರಡುತ್ತ ಶಾಂತರೀತಿಯಿಂದ ಕಾಲವನ್ನು ಕಳೆದನು. ಶಿವಾಜಿಗೆ ಮೊಗಲಾಯರ ಬಲವು ದೊರೆತದ್ದರಿಂದ ವಿಜಾಪುರದ ಸುಲ್ತಾನನು ಶಹಾಜಿಯನ್ನು ಎಂದಿನಂತೆ ಗೌರವಿಸಬೇಕಾಯಿತು.

## ಮತ್ತೆ ದಾಳಿ

ಶಿವಾಜಿಯು ವಿರಾಮಕಾಲವನ್ನು ಪಡೆದುಕೊಂಡು ಬಂದಿರಲಿಲ್ಲವೆಂದು ತೋರುತ್ತದೆ. ಔರಂಗಜೇಬನಿಗೆ ಉತ್ತರ ದೇಶದಲ್ಲಿ ನಷ್ಟಪರಂಪರೆಗಳೊದಗಿ ಅವನು ತನ್ನ ಆಡಳಿತದ ವೆಚ್ಚವನ್ನು ಇಳಿಸಬೇಕಾದ ಕಾಲಬಂತು. ಶಿವಾಜಿಯು ಹಿಂದೆ ಆಗ್ರಾಕ್ಕೆ ಬಂದಾಗ ಮೊಗಲರ ಭಂಡಾರದಿಂದ ವೆಚ್ಚವಾಗಿದ್ದ ಲಕ್ಷ ರೂಪಾಯಿಗಳನ್ನು ಈಗ

ಬರವಮಾಡಿಕೊಳ್ಳಬೇಕೆಂದು ಔರಂಗಜೇಬನು ಬಿರಾರನ್ನು ದತ್ತಾಪಹಾರ ಮಾಡಿದನು. ಇದರಿಂದ ಸಂತಪ್ತನಾದ ಶಿವಾಜಿಯು ಆ ಕಾಲದಲ್ಲಿ ಔರಂಗಜೇಬನು ದುಡ್ಡಿಲ್ಲದೆ ದಂಡಿನಿಂದ ಹೊರಗೆ ಹಾಕಿದ್ದ ಸೈನಿಕ ರನ್ನೆಲ್ಲಾ ತನ್ನ ದಂಡಿಗೆ ಕರೆದುಕೊಂಡು ಮತ್ತೆ ಮೊಗಲರ ರಾಜ್ಯದಲ್ಲಿ ತನ್ನ ತೋಳ್ತೀಟೆಯನ್ನು ತೀರಿಸಿಕೊಳ್ಳುವದಕ್ಕೆ ಹೊರಟು ಕೊಂಡಣ, ಪುರಂದರ, ಮಾಹುಲಿ ಮುಂತಾದ ಊರುಗಳ ಮಾರ್ಗವಾಗಿ ಸುರತ್ತಿಗೆ ಎರಡನೇ ಸಲದ ದರ್ಶನವನ್ನು ಕೊಟ್ಟನು. ಸುರತ್ತಿನಲ್ಲಿ ಇಂಗ್ಲೀಷರ ಮತ್ತು ಫ್ರೆಂಚರ ಹೊರತು ಮತ್ತೆ ಯಾರ ದಾಕ್ಷಿಣ್ಯವನ್ನೂ ಉಳಿಸ ಲಿಲ್ಲ. ಇಂಗ್ಲೀಷರನ್ನು ಬೆದರಿಸುವದಕ್ಕೆ ಹೋಗಲು ಅಷ್ಟರಲ್ಲಿ ಅವರು ಉತ್ತಮವಾದ ಕತ್ತಿಯನ್ನೂ ವಸ್ತ್ರಾಭರಣಗಳನ್ನೂ ಉಡುಗರೆಯಾಗಿ ಕೊಟ್ಟು ಸತ್ಕರಿಸಿದ್ದರಿಂದ ಶಿವಾಜಿಯು ಅವರಲ್ಲಿ ಮಿತ್ರತ್ವವನ್ನು ತೋರಿಸ ಬೇಕಾಯಿತು. ಆಮೇಲೆ ಉತ್ತರಕನ್ನಡ, ಕೊಂಕಣ, ಖಾನದೇಶ, ಪನ್ಹಾಲಾ, ಕೊಲ್ಹಾಪುರ ಮೊದಲಾದ ಕಡೆಗಳನ್ನೆಲ್ಲಾ ತನ್ನ ಹಿಡಿಕೆಗೆ ತೆಗೆದುಕೊಂಡು ಎಲ್ಲಾ ಕಡೆಯವರೂ ತನಗೆ ತಮ್ಮ ಉತ್ಪತ್ತಿಯ ನಾಲ್ಕ ರಲ್ಲೊಂದನ್ನು ಕೊಡುವಂತೆ ಮಾಡಿಕೊಂಡು ಶಿವಾಜಿಯು ಜಯಭೇರಿ ಯನ್ನು ಹೊಡೆಸಿದನು.

## ಪಟ್ಟಾಭಿಷೇಕ

ಎಲ್ಲೆಲ್ಲಿಯೂ ಗದ್ದಲಗಳನ್ನೆಬ್ಬಿಸಿ ಎಲ್ಲವನ್ನೂ ಬಾಚಿತರುವ ಮಾತ್ರದವನೆಂದೆನಿಸದೆ ಇತರ ರಾಜರಿಗೆ ಸಮಾನನಾಗಿ ನಮ್ಮ ದೇಶದ ಧರ್ಮಕ್ಕನುಗುಣವಾಗಿ ಆಳುವಂಥ ಸ್ವತಂತ್ರನಾದ ಪಟ್ಟಾಭಿಷಿಕ್ತ ರಾಜ ನಾಗಿರಬೇಕೆಂದು ಅವನಿಗೆ ಇಚ್ಛೆಯಾಯಿತು. ಶಾಸ್ತ್ರಪದ್ಧತಿಯಂತೆ ತಾನು ಪಟ್ಟಾಭಿಷಿಕ್ತನಾಗಬೇಕಾದರೆ ತನ್ನಲ್ಲಿ ಜಾತಿಕ್ಷತ್ರಿಯತ್ವವಿರ ಬೇಕಾಯಿತು. ಇದಕ್ಕಾಗಿ ಅವನು ಕಾಶಿಯಲ್ಲಿ ದಿಗ್ದಂತಿಪಂಡಿತರಾಗಿದ್ದ ಗಾಗಾಭಟ್ಟರೊಡನೆ ಆಲೋಚನೆಯನ್ನು ನಡೆಸಿದನು. ಅವರು ಇವನ ವಂಶವೃಕ್ಷದ ಬುಡವನ್ನು ಕೆದರಿನೋಡಿ ಶಿವಾಜಿಯು ಶ್ರೀರಾಮಾವ ತಾರದ ಸೂರ್ಯವಂಶದಲ್ಲಿ ಪ್ರಸಿದ್ಧವಾದ ಉದಯಪುರದ ಮನೆತನದ ಕ್ಷತ್ರಿಯನೆಂದು ಸಿದ್ಧಮಾಡಿದರು. ಆಮೇಲೆ ಪಟ್ಟಾಭಿಷೇಕದ ಸಿದ್ಧತೆ

ಯೆಲ್ಲಾ ಬಹು ವಿಜೃಂಭಣೆಯಿಂದ ನಡೆಯಿತು. ಪಟ್ಟಾಭಿಷೇಕಕ್ಕಾಗಿ ಗೊತ್ತಾದ ಶುಭದಿನವು ಪ್ರಾಪ್ತವಾಯಿತು. ಶಿವಾಜಿಯು ಬೆಳಗಾಗುತ್ತಲೆ ತನ್ನ ಗುರುಗಳಾದ ಶ್ರೀ ಸಮರ್ಥ ರಾಮದಾಸರಿಗೆ ನಮಸ್ಕರಿಸಿದನು. ಮತ್ತು ಮಾತುಶ್ರೀಯ ಪಾದದ ಮೇಲೆ ಹಣೆಯನ್ನಿಟ್ಟನು. ಎಂಭತ್ತು ವರ್ಷದ ಮುದುಕಿಯು ತನ್ನ ಮಗನ ಮಹೋತ್ಸವವು ಎಡರಿಲ್ಲದೆ ನಡೆಯಲೆಂದು ಹರಿಕೆಯನ್ನು ಕೊಟ್ಟಳು. ಮಡಿಯಿಂದ ತಂದಿದ್ದ ಗಂಗಾಜಲದಿಂದ ಸ್ನಾನವಾಯಿತು. ಶಿವಾಜಿಯು ಅದುವರೆಗಿನ ಪಾಪ ಗಳ ಪರಿಹಾರಕ್ಕಾಗಿ ತನ್ನ ತೂಕದ ಸಪ್ತಧಾತುಗಳನ್ನೂ ಹಣ್ಣು, ಬೆಣ್ಣೆ, ಎಣ್ಣೆ, ಸಕ್ಕರೆ—ಮೊದಲಾದವುಗಳನ್ನೂ ಬ್ರಾಹ್ಮಣರಿಗೂ ಬಡಬಗ್ಗರಿಗೂ ದಾನಮಾಡಿ ರತ್ನಖಚಿತವಾದ ಚಿನ್ನದ ಮಣೆಯ ಮೇಲೆ ಪತ್ನೀಸಮೇತನಾಗಿ ಕುಳಿತನು. ಬ್ರಾಹ್ಮಣರ ಮಂತ್ರಪಠನ ಪ್ರಾರಂಭವಾಯಿತು. ಅಷ್ಟಪ್ರಧಾನರು ಅಷ್ಟದಿಕ್ಕುಗಳಲ್ಲಿಯೂ ಸುವರ್ಣ ಕಲಶಗಳಲ್ಲಿ ಗಂಗಾಜಲವನ್ನು ತುಂಬಿ ಆ ರಾಜದಂಪತಿಗಳಿಗೆ ಅಭಿಷೇಕ ಮಾಡಿದರು. ಬ್ರಾಹ್ಮಣರು ರಾಜಾಶೀರ್ವಾದವನ್ನು ಮಾಡಿದರು. ಮುತ್ತೈದೆಯರು ಮುತ್ತಿನಾರತಿಯನ್ನೆತ್ತಿದರು. ಆಮೇಲೆ ರಾಜ ವಸ್ತ್ರಾಭರಣಗಳ ಧಾರಣೆ, ಆಯುಧಪೂಜೆ, ಗುರುಹಿರಿಯರಿಗೆ ನಮ ಸ್ಕಾರ—ಮೊದಲಾದವು ಮುಗಿದು ಸಿಂಹಾಸನವಿದ್ದ ಭವ್ಯಮಂದಿರದ ಪ್ರವೇಶವಾಗಿ ಬಗೆಬಗೆಯ ಲೌಕಿಕ ವೈಭವದೊಡನೆ ಸಿಂಹಾಸನಾ ರೋಹಣಸಮಾರಂಭವಾಯಿತು.

ಗಾಗಾಭಟ್ಟರು ಮುತ್ತಿನ ಗೊಂಚಲಿದ್ದ ಶ್ವೇತಛತ್ರಿಯನ್ನು ಹಿಡಿದು ಶಿವಾಜಿಯನ್ನು ಛತ್ರಪತಿಯೆಂದು ಬಹುಮಾನಿಸಿದರು. ಅಧಿ ಕಾರಿಗಳಿಗೆ ಪದವೀದಾನಗಳೂ ಬಹುಮಾನಪ್ರದಾನವೂ ಸಾಗಿದವು. ಆಸ್ಥಾನದ ಅಧಿಕಾರಸ್ಥಾನಗಳಿಗೆಲ್ಲಾ ವಿದೇಶೀಯವಾದ ಹೆಸರುಗಳನ್ನು ತೆಗೆದುಹಾಕಿ ಸ್ವದೇಶೀಯವಾದ ಸಂಸ್ಕೃತದ ಹೆಸರುಗಳನ್ನಿಟ್ಟರು. ಇಂಗ್ಲೀಷ ರಾಯಭಾರಿಯು ಬಂದು ರಾಜಭಕ್ತಿಯನ್ನು ತೋರಿಸಿದನು. ಆಮೇಲೆ ಆನೆಯ ಮೇಲಿನಂಬಾರಿಯಲ್ಲಿ ಅನೇಕ ಬಿರುದುಗಳೊಡನೆ ಮೆರವಣಿಗೆಯಾಯಿತು. ಈ ಸಮಾರಂಭದಲ್ಲಿ ದಾನಧರ್ಮಗಳನ್ನು

ಮಾಡುವದರಲ್ಲಿ ಹಣವೆಂಬುವದು ನೀರಿಗಿಂತ ಕಡೆಯಾಯಿತು. ಸಂಪಾದಿಸಬಲ್ಲವನು ಖರ್ಚುಮಾಡಬಲ್ಲನೇ ಹೊರತು ದುಡಿಯಲಾರದ ಭಿಕಾರಿಯೇನು ಕೊಟ್ಟಾನು ? ಇಂತು ಶಿವಾಜಿಯು ಕ್ರಿ. ಶ. ೧೬೭೪ರಲ್ಲಿ ರಾಜಗಡದಲ್ಲಿ ಪಟ್ಟಾಭಿಷಿಕ್ತರಾಜನಾದನು.

## ದಿಗ್ವಿಜಯ

ಪಟ್ಟಾಭಿಷೇಕಸಮಾರಂಭಕ್ಕಾಗಿ ಅಪಾರವಾದ ಹಣವು ವೆಚ್ಚವಾಯಿತು. ಆದ್ದರಿಂದ ಹಣವನ್ನು ಕೂಡಿಹಾಕುವದಕ್ಕಾಗಿ ಮೊಗಲರ ದೇಶದ ಮೇಲೆ ಕಾಲುತೆಗೆದು ಶಿವಾಜಿಯು ಮೊಗಲರ ಕಡೆಯ ಅಧಿಕಾರಿಯ ಡೇರೆಗೆ ಬೆಂಕಿಯನ್ನು ಹಚ್ಚಿ ಬೇಕಾದಷ್ಟು ಹಣವನ್ನು ಸುಲಿದುಕೊಂಡನು. ಅಲ್ಲಿಂದ ತನ್ನ ಪದ್ಧತಿಯ ಪ್ರಕಾರ ಶತ್ರುಗಳ ಬಿಕ್ಕಟ್ಟಿನ ಸಮಯವನ್ನು ನೋಡಿ ಮೇಲೆ ಬೀಳುತ್ತ ಒಂದುವೇಳೆ ಸೋಲುತ್ತ ಒಂದುವೇಳೆ ಗೆಲ್ಲುತ್ತ ಮದರಾಸಿನ ಸಮುದ್ರತೀರ ಮಾರ್ಗವಾಗಿ ಹೊರಟನು. ಏಕೆಂದರೆ ತನ್ನ ಮಲತಾಯಿಯ ಮಗನಾದ ವೆಂಕೋಜಿಯೆಂಬವನು ತನ್ನ ತಂದೆಯ ಮೂಲಕ ಬಂದ ತಂಜಾವೂರ ಪ್ರಾಂತದಲ್ಲಿ ಕೆಲವು ಭಾಗಗಳನ್ನು ಕಳೆದುಕೊಂಡಿರುವನೆಂದು ಅವನಿಗೆ ತಿಳಿದಿತ್ತು. ಇದಲ್ಲದೆ ಅಲ್ಲಿ ಸರ್ವಾಧಿಕಾರಿಯಾಗಿದ್ದ ರಘುನಾಥರಾಯನೆಂಬವನು ತನ್ನ ಪದವಿಯಲ್ಲಿ ಅತೃಪ್ತನಾಗಿ ವೆಂಕೋಜಿಯನ್ನು ಬಿಟ್ಟು ಶಿವಾಜಿಯ ಬಳಿಗೆ ಬಂದು ಬೆಲೆಯುಳ್ಳ ವಸ್ತ್ರಾಭರಣಗಳನ್ನು ಕಾಣಿಕೆಯಾಗಿಟ್ಟು ಕರ್ಣಾಟಕದ ಕಡೆಯ ಆತಿಥ್ಯಕ್ಕೆ ಮಂತ್ರಾಕ್ಷತೆಯನ್ನು ಹಿಡಿದನು. ಶಿವಾಜಿಯು ಆದಕ್ಕೊಪ್ಪಿ ಶ್ರೀಶೈಲಯಾತ್ರೆಯನ್ನು ಮುಗಿಸಿಕೊಂಡು ಕರ್ಣಾಟಕದಲ್ಲಿ ಅಪಾರ ದ್ರವ್ಯವನ್ನು ಸೂರೆಗೊಂಡು ಜಿಂಜಿಯೆಂಬ ಕೋಟೆಯನ್ನು ಹಿಡಿದು ಅಲ್ಲಿ ಒಳ್ಳೇ ವ್ಯವಸ್ಥೆಯನಿಟ್ಟು ತಂಜಾವೂರಿನ ದಾರಿಯನ್ನು ಹಿಡಿದನು. ವೆಂಕೋಜಿಯು ಈ ಸುದ್ದಿಯನ್ನು ಕೇಳಿ ಎಡಗೈಯಲ್ಲಿ ಜೀವವನ್ನು ಹಿಡಿದುಕೊಂಡು ಪಲಾಯನಸೂಕ್ತವನ್ನು ಹೇಳಿದನು. ಶಿವಾಜಿಯು ತಾನು ತನ್ನ ತಂದೆಯ ರಾಜ್ಯದಲ್ಲಿ ಪಾಲು ಕೇಳುವದಕ್ಕೆ ಬಂದೆನೇ ಹೊರತು ವೆಂಕೋಜಿಯನ್ನು ಶಿಕ್ಷಿಸುವದಕ್ಕಲ್ಲವೆಂದು ಹೇಳಿ ಅವನ ಹೇಡಿತನಕ್ಕಾಗಿ ವ್ಯಸನಪಟ್ಟು

ಅಲ್ಲಿ ವೆಂಕೋಜಿಯ ಬದಲಾಗಿ ತನ್ನ ಆಳಿಕೆಯನ್ನಿಟ್ಟು ಮುಂದಕ್ಕೆ ಹೊರಟನು. ಇತ್ತ ವೆಂಕೋಜಿಯು ಹಿಂದಿರುಗಿ ಬಂದಾಗ ರಾಜ್ಯವು ಕೈಬಿಟ್ಟು ಹೋಗಿತ್ತು. ಕೊನೆಗೆ ಶಿವಾಜಿಯೇ ಒಂದು ವರ್ಷದ ಮೇಲೆ ಅವನ ರಾಜ್ಯವನ್ನು ಅವನಿಗೆ ಕೊಟ್ಟು ಅವನ ಕಣ್ಣನ್ನು ಒರೆಸಿದನು.

## ಔರಂಗಜೇಬನಿಗೆ ಧಿಟ್ಟತನದ ಪತ್ರ

ಮೊಗಲರಿಗೆ ಹಿಂದುಗಳು ಕೊಡಬೇಕಾಗಿದ್ದ ಬಹು ಅವಮಾನ ಕರವಾದ ತಲೆತೆರಿಗೆಯನ್ನು ನೋಡಿ ಶಿವಾಜಿಗೆ ತಲೆತಿರುಗಿಹೋಯಿತು. ಆಗ ಶಿವಾಜಿಯು ಧಿಟ್ಟತನದಿಂದ ಔರಂಗಜೇಬನಿಗೆ ಬರೆದಿರುವ ಒಂದು ಪತ್ರದ ಸಾರಾಂಶವೇನಂದರೆ "ನಿಮ್ಮ ತಾತನಾದ ಅಕಬರ ಮೊದಲಾದವರು ಸರ್ವಧರ್ಮಪಂಥಗಳಲ್ಲಿಯೂ ಸಹಾನುಭೂತಿಯುಳ್ಳವರಾಗಿದ್ದು ನಮ್ಮ ದೇಶದವರಿಂದ ಗೌರವವನ್ನು ಪಡೆಯುವದಕ್ಕೆ ಪಾತ್ರರಾಗಿ ಏಳಿಗೆಯನ್ನು ಪಡೆದರು. ನಿಮ್ಮ ಆಳಿಕೆಯಲ್ಲಿ ಎಷ್ಟೋ ದೇಶಕೋಶಗಳು ನಿಮ್ಮ ಕೈಬಿಟ್ಟು ಹೋಗಿವೆ. ಉಳಿದಿರುವವುಗಳೂ ಅದೇ ದಾರಿಯನ್ನು ಹಿಡಿಯುವಂತೆ ನಾನು ನನ್ನ ಸರ್ವಸಾಹಸವನ್ನೂ ಮಾಡುತ್ತೇನೆ. ನಿಮ್ಮ ರೈತರೆಲ್ಲಾ ನೆಲಾಹಿಡಿದುಹೋಗಿದ್ದಾರೆ. ಚಕ್ರವರ್ತಿಗಳಾದ ನಿಮ್ಮ ಮನೆಗೆ ದರಿದ್ರಲಕ್ಷ್ಮಿಯು ಕಾಲು ಹಾಕಿರುವಾಗ ಇನ್ನು ಬಡಬಗ್ಗರ ಮಾತು ಹೇಳುವದೇನು? ನಿಮ್ಮಾಳಿಕೆಯಲ್ಲಿ ಸೇನೆಗೆ ನಿಲವಿಲ್ಲ, ವರ್ತಕರಿಗೆ ದುಃಖ, ಮುಸಲ್ಮಾನರಿಗೆ ಗೋಳು, ಹಿಂದುಗಳಿಗೆ ಪ್ರಾಣಸಂಕಟ. ಇದರ ಜೊತೆಗೆ ನೀವು ಯೋಗಿಗಳಿಂದ, ಬೈರಾಗಿಗಳಿಂದ, ಸನ್ಯಾಸಿಗಳಿಂದ, ಕೊನೆಗೆ ತಿರುಕರಿಂದ ಕೂಡ ತಲೆತೆರಿಗೆಯನ್ನೆತ್ತಿ ತಿನ್ನುವವರೆಂಬ ದುಂದುಭಿಧ್ವನಿಯು ದಶದಿಕ್ಕುಗಳಲ್ಲಿಯೂ ಗುಡುಗುಟ್ಟುತ್ತಿರುವದು. ದೇವರು ಮಹಮ್ಮದೀಯರಿಗೆ ಮಾತ್ರ ದೇವರಲ್ಲವೆಂಬದನ್ನು ಒಮ್ಮೆಯಾದರೂ ಮನಸ್ಸಿಗೆ ತಂದುಕೊಳ್ಳಿರಿ. ದೇವರನ್ನು ಬರಮಾಡಿಕೊಳ್ಳುವದಕ್ಕೆ ಮಸೀದಿಯವರು ಕೂಗಿ ಕರೆಯುತ್ತಾರೆ; ದೇವಸ್ಥಾನದವರು ಗಂಟೆಯನ್ನು ಬಾರಿಸುತ್ತಾರೆ. ಒಬ್ಬನ ಪಂಥವನ್ನು ಧಿಕ್ಕರಿಸುವದು ದೇವರಾಜ್ಞೆಯನ್ನು ಧಿಕ್ಕರಿಸಿದಂತೆಯಾದ್ದರಿಂದ ತಲೆತೆರಿಗೆಯು ಎಷ್ಟುಮಾತ್ರವೂ ನ್ಯಾಯವಲ್ಲ. ಹಿಂದುಗಳನ್ನು ಹೆದರಿಸಿ ತಳಕ್ಕೆ ತುಳಿಯುವದೇ ನಿಮ್ಮ ಪಂಥವಾಗಿದ್ದರೆ ನಿಮ್ಮ ರಾಣಾ

ರಾಜಸಿಂಹನ ಮೇಲೆ ಆ ತೆರಿಗೆಯನ್ನು ಹೇರಿರಿ. ಅದನ್ನು ಬಿಟ್ಟು ಇರುವೆಗಳನ್ನೂ ನೊಣಗಳನ್ನೂ ಹೊಸಕುವದಕ್ಕೆ ಹೋಗುವದು ಶೂರ ತನವಲ್ಲ."

## ಬ್ರಹ್ಮಚರ್ಯ

ಶಿವಾಜಿಗೆ ಏಳುಜನ ಹೆಂಡಿರಿದ್ದರು. ಈ ಬಹುಸಂಖ್ಯೆಗೆ ಆಗಿನ ಕಾಲದ ಪದ್ಧತಿ ಕಾರಣವೇ ಹೊರತು ಮತ್ತೇನೂ ಅಲ್ಲ. ಶಿವಾಜಿಯು ಎಷ್ಟುಮಾತ್ರವೂ ಸ್ತ್ರೀಕಾಮುಕನಲ್ಲ ಪರನಾರೀಸಹೋದರರ ಹೆಸ ರನ್ನು ಹೇಳಬೇಕಾದರೆ ಮೊದಲನೇ ಬೆಟ್ಟನ್ನು ಮಡಿಸುವಾಗಲೇ ಶಿವಾ ಜಿಯ ಹೆಸರನ್ನು ಹೇಳಬೇಕು. ಒಮ್ಮೆ ಒಂದುಕಡೆ ವಿಜಯಯಾತ್ರೆ ಯಲ್ಲಿ ಶಿವಾಜಿಯ ಒಬ್ಬ ಅಧಿಕಾರಿಯು ಒಂದೂರನ್ನು ಸೂರೆಗೊಳ್ಳು ವಾಗ ಒಬ್ಬ ಸರ್ವಾಂಗಸುಂದರಿಯನ್ನು ನೋಡಿ ಈ ಸುಂದರಿಯನ್ನು ಶಿವಾಜಿಗೆ ಸಮರ್ಪಣೆ ಮಾಡಿದರೆ ತನ್ನ ಅಧಿಕಾರವು ಅಟ್ಟಕ್ಕೇರುವ ದೆಂದು ತಿಳಿದು ಆಕೆಯನ್ನು ಶಿವಾಜಿಯ ಬಳಿಗೆ ಕರೆದುತಂದನು. ಆ ಅಧಿಕಾರಿಯ ಅಭಿಪ್ರಾಯವನ್ನೂಹಿಸಿ ಅವನನ್ನು ಧಿಕ್ಕರಿಸಿ ಶಿವಾಜಿಯು ಆಕೆಯನ್ನು ನೋಡಿದೊಡನೆ "ನಮ್ಮ ತಾಯಿಯು ಇಷ್ಟು ಸುಂದರ ಳಾಗಿದ್ದರೆ ನಾನು ಎಷ್ಟು ಸುಂದರನಾಗುತ್ತಿದ್ದೆನೋ!" ಎಂದು ಆಕೆ ಯಲ್ಲಿ ಮಾತೃಭಾವವನ್ನು ಪ್ರದರ್ಶನೆ ಮಾಡಿ ಬಳೆಯನ್ನು ತೊಡಿಸಿ ಅರಿಸಿನ ಕುಂಕುಮವನ್ನೂ ಸೀರೆ ಕುಪ್ಪಸವನ್ನೂ ಕೊಟ್ಟು ನಂಬಿಕೆಯ ಭಟರನ್ನು ಕಾವಲಿಟ್ಟು ಆಕೆಯನ್ನು ಆಕೆಯ ಗಂಡನ ಬಳಿಗೆ ಕಳುಹಿಸಿ ಕೊಟ್ಟನು. ಒಮ್ಮೆ ತನ್ನ ಮಗನು ಒಬ್ಬ ಪರಸ್ತ್ರೀಯಲ್ಲಿ ಆಸಕ್ತನಾದ ನೆಂದು ತಿಳಿಯುತ್ತಲೇ ಅವನು ಮಗನೆಂಬದನ್ನು ಕೂಡ ಲಕ್ಷದಲ್ಲಿ ತರದೆ ಅವನನ್ನು ಸೆರೆಯಲ್ಲಿಟ್ಟು ಬುದ್ಧಿಯನ್ನು ಕಲಿಸಿದನು. ಸೈನಿಕರು ತಮ್ಮ ಗುಂಪಿನಲ್ಲಿ ಸ್ತ್ರೀಯರನ್ನು ಕರೆದುಕೊಂಡು ಹೋಗಕೂಡದೆಂದು ಕೂಡ ಅವರಿಗೆ ಕಟ್ಟಮಾಡಿದ್ದನು.

## ಕೊನೆಯ ಪರಿಸ್ಥಿತಿ

ಬರಬರುತ್ತ ಶಿವಾಜಿಗೆ ಮನೆಯಲ್ಲಿಯೂ ಸುಖವಿಲ್ಲದಾಯಿತು. ಮಗನು ನಿರುಪಯೋಗಿಯಾಗಿದ್ದದ್ದೊಂದು ಕಡೆ, ಮನೆಯಲ್ಲಿ ಹೆಂಡಂದಿರು ಒಬ್ಬರಿಗೊಬ್ಬರು ಹೊಂದಿಕೊಂಡಿರದಿದ್ದದ್ದೊಂದು ಕಡೆ.

ಹೀಗಾಗಿ ಅವನ ಮೈಯಲ್ಲಿ ಅಸ್ವಸ್ಥತೆಯುಂಟಾಯಿತು. ಈ ಸಮಯ ದಲ್ಲಿ ಮುಂದಿನ ಪಟ್ಟವು ಹಿರಿಯ ಹೆಂಡತಿಯ ಮಗನಿಗೊ ಕಿರಿಯ ಹೆಂಡತಿಯ ಮಗನಿಗೊ ಎಂಬ ಬಡಿದಾಟವು ಎದ್ದಿತು. ಈ ಪ್ರತಿಕೂಲ ಪರಿಸ್ಥಿತಿಯಿಂದ ಶಿವಾಜಿಯ ಅಸ್ವಸ್ಥತೆಯೂ ಹೆಚ್ಚುತ್ತ ಬಂತು. ಹುಟ್ಟಿ ದಂದಿನಿಂದ ಸ್ವರಾಜ್ಯಕ್ಕಾಗಿ ಅವಿಶ್ರಾಂತಯತ್ನದಿಂದ ಹೆಣಗಿದ ಆ ಮಹಾಮಹಿಮನಾದ ಶಿವಾಜಿಯು ತನ್ನ ಅಂತಿಮಾವಸ್ಥೆಯನ್ನು ತಿಳಿ ದವನಾಗಿ ಬ್ರಾಹ್ಮಣರನ್ನೂ ಭಕ್ತರನ್ನೂ ಬರಮಾಡಿಕೊಂಡು ಶುದ್ಧ ವಾದ ಗಂಗಾಜಲದಿಂದ ಸ್ನಾನಮಾಡಿ ದರ್ಭಾಸನದಲ್ಲಿ ಕುಳಿತು ವಿಭೂತಿ ರುದ್ರಾಕ್ಷಗಳನ್ನು ಧರಿಸಿ ಬಗೆಬಗೆಯ ದಾನಧರ್ಮಗಳನ್ನು ಮಾಡಿ ಸುತ್ತಲೂ ನಡೆಯುತ್ತಿದ್ದ ಭಗವದ್ಗೀತಾಪಾಠವನ್ನು ಕೇಳುತ್ತ "ಶ್ರೀರಾಮ" ಎಂದು ಉಚ್ಚರಿಸಿ ಕ್ರಿ. ೧೬೮೦ ರ ಚೈತ್ರ ಶುದ್ಧ ಪೌರ್ಣಿ ಮೆಯ ದಿವಸ ಚಿರವಿಶ್ರಾಂತಿಯನ್ನು ತೆಗೆದುಕೊಂಡನು.

## ಗುಣಾನುವಾದ

ಶಿವಾಜಿಯ ಆಕಾರವು ಮಧ್ಯಮಪರಿಮಾಣದ್ದಾಗಿದ್ದು ಅವ ಯವಗಳು ಒಂದಕ್ಕೊಂದು ಅನುರೂಪ ಪ್ರಮಾಣದಲ್ಲಿದ್ದವು. ಅವನ ನಗೆಮೊಗ, ಉತ್ಸಾಹಪೂರ್ಣತೆಯನ್ನು ತೋರಿಸುವ ದೃಷ್ಟಿ, ಆಜಾನು ವಾದ ಬಾಹು, ಗಿಳಿಮೂಗು—ಇವುಗಳೆಲ್ಲಾ ಜನರನ್ನು ಆಕರ್ಷಿ ಸುತ್ತಿದ್ದವು. ಅವನ ಬಾಯಿಯಿಂದ ಒಂದುಮಾತು ಬಂತೆಂದರೆ ಅದು ಎಂಥವರನ್ನಾದರೂ ಮೋಹಿನೀಮಂತ್ರದಿಂದ ವಶರಾದವರಂತೆ ಅವ ನನ್ನು ಅನುವರ್ತಿಸುವ ಹಾಗೆ ಮಾಡುತ್ತಿತ್ತು. ಲೋಕದಲ್ಲಿ ಪುಂಡತನ ದಿಂದ ಗುಡುಗಾಡಿದವರು ಬಹಳ ಜನರಿದ್ದಾರೆ; ಆದರೆ ಪಾಪಭೀತಿ ಯನ್ನಿಟ್ಟುಕೊಂಡು ಗುಡುಗಾಡಿದವರು ಕಡಿಮೆ. ಮತ್ತು ಸುಶಿಕ್ಷಿತ ಸೈನ್ಯವನ್ನಿಟ್ಟುಕೊಂಡು ಹೆಣಗಿದವರಿರಬಹುದು; ತಾವೇ ಸೇನೆಯನ್ನು ಸಿದ್ಧಗೊಳಿಸಿಕೊಂಡು ಮುಂದೆ ಬಂದವರಿರಲಾರರು. ಹಾಗೂ ಶೌರ್ಯ ಮದವನ್ನು ತೋರಿಸಿದವರಿದ್ದರೂ ಅದರ ಜೊತೆಗೆ ರಾಜ್ಯದ ವ್ಯವಸ್ಥೆ ಯಲ್ಲಿ ಮೇಲುಗೈಯಾದವರು ವಿರಳ. ಅದೂ ಇದ್ದು ಅದರ ಜೊತೆಗೆ ಧರ್ಮಶ್ರದ್ಧೆಯಿರುವವರಂತೂ ಸಿಕ್ಕಲಾರರು. ತನ್ನ ಸೇನೆಯನ್ನು ತಾನೇ

ಸಿದ್ಧಮಾಡಿಕೊಂಡು ಏಕಕಾಲದಲ್ಲಿ ಮೊಗಲರು, ವಿಜಾಪುರ, ಗೋವಲ ಕೊಂಡ, ಈ ಮೂವರು ಪ್ರತಿಕಕ್ಷಿಗಳನ್ನೂ ಪ್ರತಿಭಟಿಸಿ ಸಮಯಬಂದಾಗ ನೌಕಾಸೇನೆಯಿಂದ ಪರದೇಶದವರ ಪ್ರತಿಷ್ಠೆಯನ್ನು ತಗ್ಗಿಸಿ ದೊಡ್ಡ ದೊಂದು ರಾಜ್ಯವನ್ನು ಮಾಡಿ ಆದರ ಅಂತರ್ವ್ಯವಸ್ಥೆಯಲ್ಲಿ ರಾಮ ರಾಜ್ಯವನ್ನೇ ನೆನಪುಗೊಟ್ಟು ಧರ್ಮಾಭಿಮಾನದ ಶಿಖರವನ್ನೇರಿದಂಥ ಶ್ರೀ ಶಿವಾಜಿ ಮಹಾರಾಜನು ಅಖಂಡ ಭೂಮಂಡಲದ ರಾಜರತ್ನದ ಮಾಲಿಕೆಯಲ್ಲಿಯ ಮಧ್ಯಮಣಿಯೆಂದರೂ ಅತಿಶಯೋಕ್ತಿಯಾಗದಂಥ ಜೀವರತ್ನನಾಗಿದ್ದಾನೆ. ಶಿವಾಜಿಯು ಅನೇಕ ಕೋಟೆಕೊತ್ತಳಗಳನ್ನು ಹಿಡಿದಾಗ ಜನರಿಗೆ ತೊಂದರೆಯಾಗಿದ್ದರೂ ಪುತ್ರವಾತ್ಸಲ್ಯದಿಂದ ಕೂಡಿದ ಅವನ ಆಳಿಕೆಯೊಳಕ್ಕೆ ಸಿಕ್ಕಿದ ಮೇಲೆ ಯಾರೂ ಆ ತೊಂದರೆ ಯನ್ನು ನೆನೆಸಿಕೊಳ್ಳುವಹಾಗಿರಲಿಲ್ಲ. ಧರ್ಮವೆಂದರೆ ಅವನಿಗೊಂದು ಪಂಚಪ್ರಾಣವಾಗಿತ್ತು. ಅವನಿಗೆ ಮುಸಲ್ಮಾನರ ಮೇಲೆ ದ್ವೇಷವಿರ ಲಿಲ್ಲ. ಅವರು ಮಾಡುತ್ತಿದ್ದ ಧರ್ಮದ್ರೋಹದಿಂದ ಅವನಿಗೆ ತಳಮಳ ವುಂಟಾಗುತ್ತಿತ್ತು. ಅವನ ತಂದೆ ವಿಜಾಪುರದಲ್ಲಿ ಉನ್ನತಾಧಿಕಾರ ದಲ್ಲಿದ್ದರೂ ಮುಸಲ್ಮಾನರ ಅಧಿಕಾರಕ್ಕೊಳಪಟ್ಟ ಭೂಮಿಯಲ್ಲಿ ನಾನು ನನ್ನ ವಿವಾಹಕರ್ಮವನ್ನು ಮಾಡಿಕೊಳ್ಳಲಾರೆನೆಂದು ಶಿವಾಜಿಯು ಪುಣೆಯಲ್ಲಿ ಲಗ್ನವನ್ನು ಮಾಡಿಕೊಂಡನು. ಪಾರಮಾರ್ಥ ವಿಚಾರಕ್ಕೆ ಅನುಕೂಲಿಸುವಂತೆ ತನ್ನ ಗುರುಗಳಾದ ರಾಮದಾಸರು ತನ್ನ ಹತ್ತಿರ ದಲ್ಲಿಯೇ ಇರಬೇಕೆಂದು ಅವರನ್ನು ಸತಾರೆಯ ಹತ್ತರ ಪರಳಿ ಎಂಬೂ ರಲ್ಲಿಟ್ಟುಕೊಂಡನು. ಅವರು ರಾಜಗುರುವಾಗಿದ್ದರೂ ಭಿಕ್ಷೆಗೆ ಹೋಗು ತ್ತಿದ್ದದ್ದನ್ನು ನೋಡಿ ತನಗಿನ್ನೇಕೆ ರಾಜ್ಯವೆಂದು ತನ್ನ ರಾಜ್ಯವನ್ನೇ ದಾನವಾಗಿ ಬರೆದು ಒಂದು ದಿನ ಅವರ ಜೋಳಿಗೆಯೊಳಕ್ಕೆ ಹಾಕಿದನು. ಕೊನೆಗೆ ಅವರಾಗಿಯೇ ಅದನ್ನು ಹಿಂದಕ್ಕೆ ಕೊಟ್ಟು ತಮ್ಮ ಪರವಾಗಿ ನೀನೇ ರಾಜ್ಯವಾಳೆಂದು ನಿರ್ಬಂಧ ಮಾಡಿದ ಮೇಲೆ ಅವರ ಕಾವೀ ಶಾಟಿಯನ್ನು ತನ್ನ ಧ್ವಜವಾಗಿ ಮಾಡಿಕೊಂಡು ಅವರ ಆಜ್ಞೆಯನ್ನು ಪಾಲಿಸಿದನು. ಹಿಂದುಗಳ ಸಾಧುಗಳಿಗೆ ಹೇಗೋ ಹಾಗೆ ಮುಸಲ್ಮಾನರ ಸಾಧುಗಳಿಗೂ ಹಿಂದುಗಳ ದೇವಸ್ಥಾನಗಳಿಗೆ ಹೇಗೋ ಹಾಗೆ ಮುಸ ಲ್ಮಾನರ ಮಸೀದಿಗಳಿಗೂ ಸಹಾಯಮಾಡುತ್ತಿದ್ದನು. ಶ್ರಾವಣಮಾಸ

ದಲ್ಲಿ ಪರೀಕ್ಷೆಯನ್ನಿಟ್ಟು ವಿದ್ಯಾರ್ಥಿಗಳಿಗೂ ವಿದ್ವಾಂಸರಿಗೂ ಸಮೃದ್ಧಿಯಾಗಿ ಬಹುಮಾನಗಳನ್ನು ಕೊಟ್ಟು ವಿದ್ಯೆಯನ್ನೂರ್ಜಿತ ಮಾಡಿ ಬ್ರಾಹ್ಮಣರನ್ನು ಸಂರಕ್ಷಿಸಿದನು. ಇದರ ಜೊತೆಗೆ ದೇಶದಲ್ಲಿ ಗೋಗಳ ಸುಸ್ಥಿತಿಗೆ ತಕ್ಕ ವ್ಯವಸ್ಥೆಯನ್ನು ಮಾಡಿ ಗೋಬ್ರಾಹ್ಮಣಪ್ರತಿಪಾಲಕನೆಂಬ ಬಿರುದನ್ನು ಪಡೆದನು. ಮನುಷ್ಯರ ಮುಖವನ್ನು ನೋಡಿದ ಮಾತ್ರದಿಂದ ಅವರ ತಿರುಳನ್ನು ತಿಳಿದು ಯೋಗ್ಯರನ್ನೇ ಮಾತ್ರ ತನ್ನ ಕೆಲಸಕ್ಕೆ ಆರಿಸಿಕೊಳ್ಳುತ್ತಿದ್ದನು. ಉತ್ತಮರಾದ ಗೂಢಚಾರರನ್ನಿಟ್ಟದ್ದಲ್ಲದೆ ತಾನೇ ವೇಷಾಂತರಗಳನ್ನು ಧರಿಸಿ ಎಲ್ಲ ರಹಸ್ಯವನ್ನೂ ತಿಳಿಯುತ್ತಿದ್ದನು. ಇವನ ಆಳಿಕೆಯಲ್ಲಿ ಗ್ರಂಥರಚನೆಯೂ ಕುಶಲವಿದ್ಯೆಗಳೂ ವ್ಯಾಪಾರವೂ ಕುಡಿಗೊಂಡವು. ಇವನಿಗೆ ಉರ್ದು, ಪಾರ್ಶಿ— ಈ ಭಾಷೆಗಳು ಬರುತ್ತಿದ್ದವಲ್ಲದೆ ಸಂಸ್ಕೃತದ ಪರಿಚಯವೂ ಇತ್ತು. ಇವನು ಉರ್ದೂ ಭಾಷೆಯಲ್ಲಿ ಮಾಡಿದ ಅನೇಕ ಭಕ್ತಿಪರ ಪದಗಳುಂಟು. ಹಿಂದುಸ್ಥಾನದವರು ಪರದೇಶದವರೊಡನೆ ಹೋರಾಡಿ ತಮ್ಮ ನಿಶಾನೆಯನ್ನೂರಬಲ್ಲರೆಂಬದನ್ನು ಮೇಲುಪಙ್ತಿಯಾಗಿ ಹಾಕಿಕೊಟ್ಟ ಈ ಮಹಾಪುರುಷನ ಪವಿತ್ರ ಚರಿತ್ರೆಯು ಭರತಖಂಡದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡತಕ್ಕದ್ದಾಗಿದೆ.

---

# ರಾಮದಾಸರು

## ಮನೆತನದ ಪೂರ್ವವೃತ್ತ

ಸ್ವಧರ್ಮನಿಷ್ಠೆಯು ತತ್ಕಾಲದಲ್ಲಿಯೇ ತನ್ನ ಬೆಳಕನ್ನು ಬೀಳಿಸದಿದ್ದರೂ ಕಾಲಾಂತರದಲ್ಲಿ ಒಮ್ಮೆಗೇ ತನ್ನ ಸರ್ವಸಾಮರ್ಥ್ಯವನ್ನೂ ಅಭಿವ್ಯಕ್ತಮಾಡಿ ದೇದೀಪ್ಯಮಾನವಾಗದೆ ಹೋಗುವದಿಲ್ಲ. ಸತಾರಾ ಜಿಲ್ಹೆಯ ಜಾಂಬೆಂಬ ಒಂದು ಹಳ್ಳಿಯಲ್ಲಿ ಠೋಸರ್ ಎಂಬದೊಂದು

ಕುಲೀನರ ಮನೆತನ. ಆ ಕುಟುಂಬದವರು ಅಲ್ಲಿ ಅರ್ಚಕರೂ ಆಗಿದ್ದು ಕುಲಕರ್ಣಿಯ ಕಾರಭಾರವನ್ನೂ ನಿರ್ವಹಿಸುತ್ತಿದ್ದರು. ಈ ವಂಶದಲ್ಲಿ ಸೂರ್ಯಾಜಿಪಂತನೆಂಬವನು ಹುಟ್ಟಿದನು. ಆತನಿಗೆ ರಾಣೂಬಾಯಿ ಎಂಬಾಕೆಯು ಧರ್ಮಪತ್ನಿಯಾದಳು. ಈ ದಂಪತಿಗಳು ಒಳ್ಳೇ ರಾಮೋಪಾಸಕರಾಗಿದ್ದರು ಮತ್ತು ತಮ್ಮ ಕುಲಧರ್ಮದಲ್ಲಿ ತತ್ಪರರಾಗಿ ತಮ್ಮ ಗೃಹಸ್ಥಾಶ್ರಮವನ್ನು ಜಗತ್ತಿಗೆ ಆದರ್ಶಸ್ವರೂಪವಾಗಿ ಮಾಡಿದ್ದರು. ಅವರ ಗರ್ಭಾಂಬುಧಿಯಲ್ಲಿ ಕ್ರಿ. ೧೬೦೫ರಲ್ಲಿ ಗಂಗಾಧರನೆಂಬ ಪ್ರಥಮಪುತ್ರರತ್ನವು ಹುಟ್ಟಿ ಮುಂದೆ ಅದು ಶ್ರೇಷ್ಠ ಎಂಬ ಅನ್ವರ್ಥ ನಾಮವನ್ನು ಪಡೆಯಿತು.

## ಶಿಶುತನ

ಆಮೇಲೆ ಕ್ರಿ. ೧೬೦೮ ನೇ ವರ್ಷದ ಶ್ರೀರಾಮನವಮಿಯ ದಿವಸ—ಅದರಲ್ಲಿಯೂ ರಾಮಜನ್ಮವಾದ ಹೊತ್ತಿಗೆ ಸರಿಯಾಗಿ—ಠೋಸರ್ ವಂಶವೆಂಬ ಸಮುದ್ರದಿಂದ ಪೂರ್ಣಚಂದ್ರನುದಯಿಸಿ ಬಂದಂತೆ ರಾಣೂಬಾಯಿಯ ಗರ್ಭದಿಂದ ನಮ್ಮ ಕಥಾನಾಯಕನ ಜನನವಾಯಿತು. ತೊಟ್ಟಿಲಕ್ಕುವ ಮಹೋತ್ಸವ ಕಾಲದಲ್ಲಿ ಆ ಶಿಶುವಿಗೆ ನಾರಾಯಣನೆಂದು ಹೆಸರಿಟ್ಟರು. ಮಗುವಿನ ಮುಖವನ್ನು ನೋಡಿ ತಂದೆತಾಯಿಗಳ ಮುಖಗಳರಳುವದೇನು ದೊಡ್ಡ ಮಾತು! ಅದರ ನಗೆಮೊಗವು ಆನಂದದ ಸಾಗರವಾಗಿದ್ದು ಧಳಧಳಿಸುವ ದೃಷ್ಟಿಯ ಮೂಲಕ ತನ್ನ ಅಲೆಗಳನ್ನು ಚಿಮ್ಮುತ್ತಿದ್ದದರಿಂದ ಅದನ್ನು ನೋಡಿದವರ ಹೃದಯವು ತರಗೆಲೆಯಷ್ಟು ನೀರಸವಾಗಿದ್ದರೂ ಆ ನೋಟದ ಸಂಪರ್ಕದಿಂದ ನೀರ್ದುಂಬಿಕೊಂಡು ವಸಂತಕಾಲದ ಚಿಗುರಿನಂತೆ ಕೋಮಲವಾಗಿ ನಳನಳಿಸುತ್ತಿತ್ತು. ಅಳುವಿಕೆಯ ಸೆಲೆಯೇ ಇಲ್ಲದ್ದರಿಂದಲೂ ಗುಮ್ಮ ಮೊದಲಾದ ಒಣ ಅಂಜಿಕೆಗಳು ಸಾಗದೆ ಇರುತ್ತಿದ್ದದರಿಂದಲೂ ಈ ಶಿಶು ಒಂದು ವಿಲಕ್ಷಣವಾದದ್ದೆಂದು ಯೋಚಿಸುವ ಹಾಗಿತ್ತು.

## ಬಾಲ್ಯ

ಅಷ್ಟಿಷ್ಟು ಮೈಬಲಿಯುತ್ತ ಬಂದಮೇಲೆ ನಾರಾಯಣನ ಮುಖ ಲಕ್ಷಣಪ್ರಭಾವದಿಂದಲೇ ಅವನೊಡನಾಡಿಗಳೆಲ್ಲಾ ಅವನಿಗೆ ಅಧೀನರಾಗಿ

ವರ್ತಿಸುವದಕ್ಕಾರಂಭಿಸಿದರು. ಎತ್ತರದಿಂದ ಧುಮುಕುವದು, ಮರದಿಂದ ಮರಕ್ಕೆ ಹಾರುವದು, ತುಂಬಿ ಹರಿಯುವ ನದಿಗಳನ್ನು ದಾಟುವದು, ಶಿಖರದಿಂದ ಶಿಖರಕ್ಕೆ ಅಥವಾ ಮಾಳಿಗೆಯಿಂದ ಮಾಳಿಗೆಗೆ ಗಂಟುಹಾಕುವ ಯೋಚನೆಯನ್ನು ಮಾಡುವದು—ಇವುಗಳೆಲ್ಲಾ ಆ ಬಾಲಸಮೂಹದ ವಿನೋದದ ಕಾಲಕ್ಷೇಪಗಳಾಗಿದ್ದವು. ಈ ಹಾವಳಿಯನ್ನು ತಪ್ಪಿಸುವದಕ್ಕಾಗಿ ಸೂರ್ಯಾಜಿಪಂತನು ಮಗನನ್ನು ಆ ಹಳ್ಳಿಯ ಒಬ್ಬ ಬ್ರಾಹ್ಮಣನ ಶಾಲೆಗೆ ಹಾಕಿದನು. ನಾರಾಯಣನು ಒಂದೆರಡು ವರ್ಷಗಳಲ್ಲಿಯೇ ಆ ಬ್ರಾಹ್ಮಣನ ಹೃದಯವೆಂಬ ಬಾವಿಯಲ್ಲಿದ್ದ ವಿದ್ಯೆಯೆಂಬ ನೀರನ್ನೆಲ್ಲಾ ಗೋಚಿ ನೆಲವನ್ನು ಕಾಣಿಸಿಬಿಟ್ಟನು. ಇಷ್ಟರಲ್ಲಿಯೇ ಸೂರ್ಯಾಜಿಯು ತನ್ನ ಮುದ್ದುಮಗನಿಗೆ ಉಪನಯನವನ್ನು ಮಾಡಿ ಅವನ ಮುಂದಿನಭ್ಯುದಯವನ್ನು ನೋಡುವ ಸುಯೋಗವಿಲ್ಲದೆ ಕ್ರಿ. ೧೬೧೫ ರಲ್ಲಿ ಕಣ್ಣುಮುಚ್ಚಿದನು. ಆಮೇಲೆ ನಾರಾಯಣನು ತನ್ನ ಅಣ್ಣನಿಂದ ಕೆಲವು ಧಾರ್ಮಿಕ ತತ್ವಗಳ ಉಪದೇಶವನ್ನು ಪಡೆದು ಅದರಿಂದ ತೃಪ್ತನಾಗದೆ ಸಾಕ್ಷಾತ್ತಾಗಿ ದೇವರಿಂದಲೇ ತನ್ನ ಇಷ್ಟಸಿದ್ಧಿಯನ್ನು ಮಾಡಿಕೊಳ್ಳಬೇಕೆಂದು ಒಂದುದಿನ ನೆಟ್ಟಗೆ ಹತ್ತಿರದಲ್ಲಿದ್ದ ಮಾರುತಿಯ ಗುಡಿಯನ್ನು ಸೇರಿದನು. ಇತ್ತ ಅವನನ್ನು ಕಾಣದೆ ಅವನ ತಾಯಿ, ಅಣ್ಣ—ಮೊದಲಾದವರೆಲ್ಲರೂ ಹುಡುಕಿ ಹುಡುಕಿ ಸಾಕಾಗಿ ನಿಟ್ಟುಸಿರಿಟ್ಟರು.

## ಧರ್ಮನಿಷ್ಠೆ

ಅತ್ತ ನಾರಾಯಣನು ಅಲ್ಲಿ ಮಾರುತಿಯ ಮೂರ್ತಿಯನ್ನು ತನ್ನ ಕಣ್ಣುಮುಂದೆ ತಂದುಕೊಂಡು ತನ್ಮಯಚಿತ್ತನಾಗಿ ಧ್ಯಾನಿಸುತ್ತ ನಿಂತನು. ಮಾರುತಿಯ ಮೇಲಿನ ಪ್ರೇಮದ ಆವೇಶದಿಂದ ರೋಮಾಂಚಗಳೆದ್ದಿದ್ದವು. ಅವನ ಕಂಠವು ಗದ್ಗದಾಯಮಾನವಾಗಿತ್ತು. ಹೀಗಾಗಿ ಎಚ್ಚರದಪ್ಪಿ ಅವನು ಕಗ್ಗತ್ತಲೆಯಾಗಿದ್ದ ಒಂದು ಮೂಲೆಯಲ್ಲಿ ಬಿದ್ದು ಬಿಟ್ಟನು. ಆ ಸ್ಥಿತಿಯಲ್ಲಿ ಅವನು ಮೊದಲು ಮಾರುತಿಯನ್ನೂ ಆಮೇಲೆ ಶ್ರೀರಾಮಮೂರ್ತಿಯನ್ನೂ ಸಾಕ್ಷಾತ್ತಾಗಿ ಕಂಡು ಅವರ ಅನುಗ್ರಹಕ್ಕೆ ಪಾತ್ರನಾದಂತಾಗಿ ಎಚ್ಚತ್ತನು. ಅಷ್ಟರಲ್ಲಿ ಹೇಗೋ ಅವನ ಅಣ್ಣನು ಬಂದು ನೋಡಿ ಅವನನ್ನು ಮನೆಗೆ ಕರೆದುಕೊಂಡು ಹೋದನು.

## ಮದುವೆಯ ಮಾತು

ಅಂದಿನಿಂದ ಅವನ ಮನಸ್ಸು ದಿನದಿನಕ್ಕೆ ಧ್ಯಾನದ ಕಡೆಗೆ ಹೆಚ್ಚು ಹೆಚ್ಚು ಒಲಿಯುತ್ತ ಹೋಯಿತು. ಹನ್ನೆರಡನೆಯ ವಯಸ್ಸು ಬರುವ ಹೊತ್ತಿಗೆ ನಾರಾಯಣನ ಮದುವೆಯಾದದ್ದನ್ನು ನೋಡಬೇಕೆಂದು ರಾಣೂಬಾಯಿಗೆ ತವಕವುಂಟಾಯಿತು. ಮನುಷ್ಯತ್ವದ ಸಾಮರ್ಥ್ಯವನ್ನು ಇಂಥ ಕ್ಷುದ್ರ ಪ್ರಸಂಗಕ್ಕಾಗಿ ಹಾಳುಮಾಡಿಕೊಳ್ಳುವದಕ್ಕಿಂತಲೂ ಬಾವಿಯಲ್ಲಿ ಬಿದ್ದು ಸಾಯುವದು ಮೇಲೆಂದು ನಾರಾಯಣನು ಒಂದು ಸಲ ಅದರಂತೆಯೇ ಮಾಡಿಬಿಟ್ಟನು. ಆದರೆ ನೆರೆಹೊರೆಯವರು ಕಂಡು ಅವನನ್ನು ಮೇಲಕ್ಕೆ ತೆಗೆದರು. ಈ ಸಂದರ್ಭದಲ್ಲಿ ಅವನ ಹಣೆಯ ಮೇಲಾದ ಗಾಯವು ಕೊನೆಯವರಿಗೂ ಕಲೆಯರೂಪವಾಗಿ ಉಳಿದೇ ಇತ್ತು. ಆಮೇಲೆ ರಾಣೂಬಾಯಿಯು ಹೇಗೋ ತನ್ನ ಮಗನನ್ನು ಒಲಿಸಿಕೊಂಡು ಅಂತಃಪಟವನ್ನು ಹಿಡಿದಿರುವವರೆಗೆ ಸುಮ್ಮನಿರುವಂತೆ ಒಪ್ಪಿಗೆಯನ್ನು ಪಡೆದಳು. ಆಮೇಲೆ ಕನ್ಯಾನಿಷ್ಕರ್ಷೆಯೂ ಆಯಿತು. ಮುಹೂರ್ತ ನಿಶ್ಚಯವೂ ಆಯಿತು. ಯಥಾಯೋಗ್ಯವಾದ ಸಮಾರಂಭದಿಂದ ವಿವಾಹ ಕರ್ಮದಾರಂಭವೂ ಆಯಿತು. ಅಂತಃಪಟವನ್ನು ಹಿಡಿದು ಪುರೋಹಿತನು ಮಂಗಳ ಶ್ಲೋಕಗಳನ್ನು ರಾಗವಾಗಿ ಹೇಳುವುದಕ್ಕೆ ಮೊದಲುಮಾಡಿ ಪ್ರಥಮ ಶ್ಲೋಕಾಂತ್ಯದಲ್ಲಿ ಹೇಳಿದ "ಮನಸ್ಸುಗೊಟ್ಟು ಕೇಳು" ಎಂಬರ್ಥವುಳ್ಳ "ಸಾವಧಾನ" ಎಂಬ ಮಾತು ಕಿವಿಗೆ ಬಿದ್ದ ಕೂಡಲೆ ನಾರಾಯಣನ ಮುಖಲಕ್ಷಣವೇ ಬೇರೆ ಆಯಿತು. ಆ ಶಬ್ದವೇ ಹೃದಯದಲ್ಲಿ ಪ್ರವೇಶಿಸಿ ಮನಸ್ಸಿಗೊಂದು ವಿಲಕ್ಷಣ ಸ್ಥಿತಿಯನ್ನೇ ಕೊಟ್ಟಂತೆ ತೋರಬಂತು. ಕ್ಷಣಕಾಲ ವಿಚಾರ ಮಾಡಿ ಏನೋ ಸ್ಫೂರ್ತಿಯನ್ನು ಪಡೆದವನಾಗಿ ನಾರಾಯಣನು ಒಡನೆ ಒಂದೇ ಉಸುರಿನಿಂದ ಅಲ್ಲಿಂದ ಕಾಲಿಗೆ ಬುದ್ಧಿಯನ್ನು ಹೇಳಿದನು. ಎಷ್ಟು ಜನ ಹಿಂಬಾಲಿಸಿ ಹೋದರೂ ಯಾರಿಗೂ ಸಿಕ್ಕಲಿಲ್ಲ.

## ತಪಶ್ಚರ್ಯೆ

ಮದುವೆಯ ಮಂಟಪಕ್ಕೆ ಶರಣುಹೊಡೆದ ನಾರಾಯಣನು ಯಾರಿಗೂ ಕಾಣದಂತೆ ಊರಹೊರಗಣ ಒಂದು ದೊಡ್ಡ ಮರದ

ಪೊಟ್ಟರೆಯನ್ನು ಸೇರಿ ಅನ್ನನೀರುಗಳಿಲ್ಲದೆ ಮೂರು ದಿನಗಳಿದ್ದನು. ಆಮೇಲೆ ಕಾಲನಡಿಗೆಯಲ್ಲಿಯೇ ಕೃಷ್ಣಾನದಿಯ ದಂಡೆಯನ್ನು ಹಿಡಿದು ಹೊರಟು ಪಂಚವಟೀ ಕ್ಷೇತ್ರವಿರುವ ನಾಸಿಕಕ್ಕೆ ಹೋಗಿ ಅಲ್ಲಿ ಮೊದಲು ಒಂದು ಗುಡಿಯಲ್ಲಿ ಮಾರುತಿಯ ದರ್ಶನವನ್ನು ತೆಗೆದುಕೊಂಡು ಆಚೆ ಎರಡೂವರೆ ಮೈಲುಗಳ ದೂರದಲ್ಲಿರುವ ತಕ್ಲಿ ಎಂಬ ಗ್ರಾಮದಲ್ಲಿ ನಿಂತನು. ಅಲ್ಲಿ ಬೆಳಕು ಹರಿಯುವದಕ್ಕೆ ಮುಂಚೆ ಎದೆಯುದ್ದದ ಗೋದಾವರಿಯಲ್ಲಿ ಮಿಂದು ಸಂಧ್ಯಾದಿಗಳನ್ನು ಮಾಡಿ ನಡುಹಗಲಿನ ವರಿಗೂ ಒಂದೇಸಮನಾಗಿ ಅಖಂಡವಾಗಿ ಧ್ಯಾನಮಾಡುವದು ಅವನ ಮೊದಲನೇ ಕೆಲಸವಾಗಿತ್ತು. ಎಡೆಬಿಡದೆ ಹೀಗೆ ಮಾಡುತ್ತಿದ್ದ ಕಾಲದಲ್ಲಿ ಜಲಚರಗಳು ಕೊಟ್ಟ ಬಾಧೆಯಿಂದ ಅವನ ಕೆಳಮೈಯೆಲ್ಲಾ ಕಲೆಗಳಾಗಿ ಅವನ ಉಗ್ರ ತಪಶ್ಚರ್ಯೆಯ ಧ್ವಜಪಟಗಳಂತೆ ಕಂಗೊಳಿಸುತ್ತಿದ್ದವು. ಮಧ್ಯಾಹ್ನದ ಮೇಲೆ ನಾರಾಯಣನು ನೆರೆಹೊರೆಯ ಕೆಲವು ಮನೆಯಿಂದ ಮಾಧುಕರಿಯನ್ನು ತಂದು ಶ್ರೀರಾಮನಿಗೆ ನೈವೇದ್ಯಮಾಡಿ ಒಪ್ಪತ್ತು ಊಟ ಮಾಡುತ್ತಿದ್ದನು. ಆಮೇಲೆ ನಡು-ರಾತ್ರಿಯವರೆಗೂ ಅಖಂಡಗಾಯತ್ರೀಜಪ, ಅಖಂಡಾನುಸಂಧಾನ— ಈ ರೀತಿಯಲ್ಲಿ ಎಡೆಬಿಡದೆ ಹನ್ನೆರಡು ವರ್ಷ ನಡೆಯಿತು. ಇದರಿಂದ ಅವನ ಅಂತರಂಗದಲ್ಲಿ ತಪಶ್ಶಕ್ತಿ ತುಂಬಿತುಳುಕುತ್ತಿದ್ದರೂ ಹೊರಗೆ ನೋಡುವವರಿಗೆ ಅವನ ಮೈಮೇಲೆ ಒಂದು ಕೌಪೀನ, ಒಂದು ಜೋಳಿಗೆ, ಒಂದು ಯೋಗದಂಡ– ಇವುಗಳ ಹೊರತು ಏನೇನೂ ಆಡಂಬರವಿಲ್ಲ. ಇವನನ್ನು ನೋಡಿ ಜನರು ದೊಡ್ಡ ಸಾಧುವೆಂದು ಸಂಭಾವಿಸಿ ರಾಮದಾಸರೆಂದು ಕರೆಯುವದಕ್ಕೆ ಮೊದಲು ಮಾಡಿದರು.

## ಮಹಿಮಾಪ್ರದರ್ಶನ

ಇತರ ಸಾಧುಗಳಿಂದ ಆದಂತೆ ರಾಮದಾಸರಿಂದ ಎಷ್ಟೋ ಅಲೌಕಿಕ ಶಕ್ತಿ ಪ್ರದರ್ಶನಗಳಾದವು; ಆದರೆ ಅವು ಬೇಕೆಂದು ಮಾಡಿದವುಗಳಲ್ಲ; ಅವರ ಮಹಿಮೆಯನ್ನು ಜನರಿಗೆ ತೋರಿಸಿ ಅವರ ಪೂಜ್ಯತೆಯನ್ನು ಪ್ರಕಟಗೊಳಿಸಬೇಕೆಂದು ಭಗವಂತನೇ ಅವುಗಳನ್ನು ಮಾಡಿದ ಹಾಗಿದ್ದವು. ದಿಕ್ಪ್ರದಾಶನಾರ್ಥವಾಗಿ ಒಂದನ್ನು ನೋಡಿರಿ. ಒಂದು

ದಿನ ಒಬ್ಬಾಕೆಯು ಮೃತನಾಗಿರುವ ತನ್ನ ಪತಿಯೊಂದಿಗೆ ಸಹಗಮನ ಮಾಡುವದಕ್ಕೆ ಹೊರಟು ದಾರಿಯಲ್ಲಿ ಸಾಧುದರ್ಶನವನ್ನು ಪಡೆದು ಕೃತಾರ್ಥಳಾಗಬೇಕೆಂದು ರಾಮದಾಸರ ಬಳಿಗೆ ಬಂದು ಅಡ್ಡಬಿದ್ದಳು. ಸಮಾಧಿಯಿಂದ ಆಗತಾನೆ ಬಹಿರ್ಮುಖವಾಗುತ್ತಿದ್ದ ರಾಮದಾಸರ ಬಾಯಿಂದ "ಅಷ್ಟಪುತ್ರಸೌಭಾಗ್ಯವತಿಯಾಗು" ಎಂಬ ಆಶೀರ್ವಾದವು ಹೊರಬಿತ್ತು. ಆಗ ಆ ಮುತ್ತೈದೆಯು ತಾನು ಆ ಆಶೀರ್ವಾದಕ್ಕೆ ಪಾತ್ರಳಾಗುವ ಸ್ಥಿತಿಯಲ್ಲಿಲ್ಲವೆಂದು ತನ್ನ ವಿಧ್ಯಮಾನವನ್ನು ಹೇಳಿ ಕೊಂಡಳು. ಆಗ ರಾಮದಾಸರು ತಮ್ಮ ಮಾತು ಸುಳ್ಳಾಗದೆಂದು ತಾವೇ ಎದ್ದು ಬಂದು ಆ ಶವವನ್ನು ಅಭಿಮಂತ್ರಿಸಲು ಆ ಪತಿಯು "ರಾಮರಾಮ" ಎನ್ನುತ್ತ ಎದ್ದು ತನ್ನನ್ನು ಈ ಮಹಾಪುರುಷರೇ ಯಮನ ಕೋರೆದಾಡೆಗಳ ಸಂದಿನಿಂದ ಬಿಡಿಸಿಕೊಂಡು ಬಂದರೆಂದು ಹೇಳಿದನು ಇದನ್ನು ನೋಡಿ ಆನಂದಭರಿತಳಾದ ಆಕೆಯು ತನ್ನ ಮೊದಲನೇ ಪುತ್ರರತ್ನವನ್ನು ತಮ್ಮ ಸೇವೆಗೆ ಸ್ವೀಕರಿಸಬೇಕೆಂದು ಅವರನ್ನು ಪ್ರಾರ್ಥಿಸಿಕೊಂಡು ಅದರಂತೆ ನಡೆದಳು. ಇದಕ್ಕೆ ಪ್ರತಿಫಲವಾಗಿ ರಾಮದಾಸರ ಅನುಗ್ರಹದಿಂದ ಆಕೆಗೆ ಇನ್ನೂ ಇಬ್ಬರು ಮಕ್ಕಳಾದರು. ಆಕೆಯ ಪ್ರಥಮಪುತ್ರನೇ ರಾಮದಾಸರ ಶಿಷ್ಯಾಗ್ರಣಿಯಾದ ಉದ್ಧವನು. ಅಂದಿನಿಂದ ಆಕೆಯ ಮನೆತನಕ್ಕೆ 'ದಶಪುತ್ರೆ' ಎಂಬ ಅಡ್ಡಹೆಸರಾಗಿ ಅದು ಈಗಲೂ ನಡೆದುಬರುತ್ತಿದೆ. ಇಂಥ ಎಷ್ಟೋ ಅಲೌಕಿಕ ಸಾಮರ್ಥ್ಯಗಳು ಪ್ರಕಟವಾದದ್ದರ ಮೇಲೆ ಜನರು ಅವರನ್ನು ಸಮರ್ಥರೆಂಬ ಉಪನಾಮಧೇಯದಿಂದಲೂ ಗೌರವಿಸುವದಕ್ಕಾರಂಭಿಸಿದರು.

## ತೀರ್ಥಯಾತ್ರೆ

ಉಕ್ಕಿ ಹರಿಯುತ್ತಿರುವ ಉತ್ಸಾಹದಿಂದ ಕೂಡಿದ ರಾಮದಾಸರು ಇನ್ನು ತಮಗಾಗಿ ಮಾಡಿಕೊಳ್ಳಬೇಕಾದ್ದೇನೂ ಇರಲಿಲ್ಲವಾದದರಿಂದ ತಮ್ಮ ಪ್ರತಿಭೆಯನ್ನು ಸಾರ್ವಜನಿಕ ಹಿತಕ್ಕೆ ಉಪಯೋಗಿಸಬೇಕೆಂದು ಯೋಚಿಸಿ ಅದಕ್ಕೆ ಮೊದಲು ಜನಮಂಡಲಿಯಲ್ಲಿ ಸಲಿಗೆಯಿಂದ ಕೂಡಿ ಅವರವರ ಸ್ಥಿತಿಗತಿಯ ಅನುಭವವನ್ನು ತಂದುಕೊಳ್ಳುವದಕ್ಕಾಗಿ ಹೊರಟು ತಕ್ಲಿಯಲ್ಲಿ ಹೊಸದಾಗಿ ಪ್ರತಿಷ್ಠೆಯಾಗಿದ್ದ ಮಾರುತಿಯ

ಪೂಜೋಪಚಾರಕ್ಕೆ ಉದ್ಧವನನ್ನಿಟ್ಟು ಯಾತ್ರೆಯನ್ನಾರಂಭಿಸಿದರು. ಮೊದಲು ಕಾಶಿಗೆ ಹೋಗಿ ಹನುಮಾನಘಾಟಿನಲ್ಲಿ ಒಂದು ಮಾರುತಿಯನ್ನು ಪ್ರತಿಷ್ಠೆ ಮಾಡಿದರು. ಆಮೇಲೆ ಅಯೋಧ್ಯಾ, ಗೋಕುಲ, ಬೃಂದಾವನ, ಮಧುರಾ, ದ್ವಾರಕಾ, ಕಾಶ್ಮೀರ—ಮೊದಲಾದ ಕಡೆಗಳಲ್ಲೆಲ್ಲಾ ಮಠಗಳನ್ನು ಮಾಡಿ ಭಕ್ತಮಂಡಲಿಯನ್ನು ಬೆಳೆಸಿದರು. ಕೆಲವು ದಿನಗಳ ಮೇಲೆ ಅವರು ಹಿಮಾಲಯ ಮಹಾಪರ್ವತವನ್ನೇರಿ ಬದರಿಕೇದಾರ, ಬದರಿನಾರಾಯಣ ಮತ್ತು ಮಾನಸಸರೋವರಗಳ ದರ್ಶನವನ್ನೂ ತೆಗೆದುಕೊಂಡರು. ಮನುಷ್ಯಮಾತ್ರದವರು ಹೆಜ್ಜೆ ಇಡುವದಕ್ಕಾಗದಂಥ ಮತ್ತು ಶ್ರೀ ಶಂಕರಾಚಾರ್ಯರೊಬ್ಬರು ಮಾತ್ರ ಹೋಗಿದ್ದಂಥ ಒಂದು ಶ್ವೇತಮಾರುತಿಯ ಗುಡಿಯಲ್ಲಿ ನಾಲ್ಕು ತಿಂಗಳಿದ್ದು ಅಲ್ಲಿಂದಿಳಿದು ಜಗನ್ನಾಥ, ರಾಮೇಶ್ವರ, ಲಂಕೆ—ಮೊದಲಾದವುಗಳನ್ನು ನೋಡಿಕೊಂಡು ಹಿಂದುಸ್ಥಾನದ ಪಶ್ಚಿಮತೀರವನ್ನು ಹಿಡಿದು ಮಹಾಬಲೇಶ್ವರ ಪರ್ವತಕ್ಕೆ ಬಂದರು. ಈ ರೀತಿಯಲ್ಲಿ ಕಾಲುನಡಿಗೆಯಲ್ಲಿ ದೇಶವನ್ನೆಲ್ಲಾ ಹನ್ನೆರಡು ವರ್ಷಗಳವರಿಗೆ ಅಡ್ಡಾಡಿ ಜನರ ಶೀಲಸ್ವಭಾವಗಳನ್ನೂ ಆಚಾರವಿಚಾರಗಳನ್ನೂ ಗೊತ್ತುಹಚ್ಚಿಕೊಂಡು ನಾಸಿಕಕ್ಕೆ ತಿರುಗಿದರು.

## ಮಹಾರಾಷ್ಟ್ರದ ಕಡೆಗೆ ದೃಷ್ಟಿಯು ತಿರುಗಿದ್ದು

ಈ ಹೊತ್ತಿಗೆ ಮಹಾರಾಷ್ಟ್ರದೇಶದ ಸ್ಥಿತಿಯು ತಲೆಕೆಳಗಾಗಿ ಹೋಗಿತ್ತು. ಮರಾಠರು ತಮ್ಮ ವಂಶಪ್ರಾಶಸ್ತ್ಯವನ್ನು ಮರೆತದ್ದರಿಂದ ಅವರ ಸಾಮಾಜಿಕ ಸ್ಥಿತಿಯೂ ರಾಜಕೀಯ ಸ್ಥಿತಿಯೂ ಹಳಸಿ ಹೋಗಿತ್ತು. ಮಹಮ್ಮದೀಯ ಪ್ರಭುಗಳು ಆಜ್ಞೆಮಾಡಿದರೆಂದರೆ ಮರಾಠರು ತಮ್ಮತಮ್ಮ ಬಂಧುವರ್ಗದ ಮೇಲೆಯೇ ಕತ್ತಿಯನ್ನು ಹಿರಿದು ವಿದೇಶೀಯರ ಅನುಗ್ರಹವೇ ತಮ್ಮ ಪರಮಪದವೆಂದು ಭಾವಿಸಿ ಅವರು ಕೊಡುವ ಘನತೆಯಿಂದ ತಾವು ಮನುಷ್ಯರೂಪದ ದೇವರೆಂದು ತಲೆತಿರುಗಿದವರಾಗಿದ್ದರು. ಇದ್ದದ್ದೆಲ್ಲಾ ಮುಸಲ್ಮಾನರಿಗೆ ಸೂರೆಯಾಗಿ ಹೊಲಮನೆಯವರ ಎದೆಯ ಮೇಲೆಲ್ಲಾ ಕ್ಷಾಮದೇವತೆಯು ಕಾಲುಚಾಚಿಕೊಂಡಿದ್ದಳು. ಸಾಮಾಜಿಕ ಸ್ಥಿತಿಯಲ್ಲಿಯೂ ರಾಜಕೀಯ ಸ್ಥಿತಿಯಲ್ಲಿಯೂ ಅಟ್ಟದ ಮೇಲೆ ಏರಿದ್ದವರು ಧರ್ಮಶ್ರದ್ಧೆಯು ತಮ್ಮ

ಘನತೆಗೆ ಕೊರತೆಯನ್ನುಂಟುಮಾಡುವದೆಂದು ಅದನ್ನು ಅಪಹಾಸ್ಯ ಮಾಡುತ್ತಿದ್ದರು. ಈ ಸ್ಥಿತಿಯನ್ನು ನೋಡಿ ಸಹಿಸಲಾರದೆ ಇವರನ್ನು ಹೇಗಾದರೂ ಒಲಿಸಿಕೊಂಡು ಅವರ ಬಾಡಿದ ಹೃದಯದ ಮೇಲೆ ಧರ್ಮಾಮೃತವನ್ನು ಹಾಕಿ ಅವರ ಉತ್ಸಾಹವನ್ನು ಚಿಗುರಿಸಿ ತಮ್ಮ ಕರ್ತವ್ಯವನ್ನು ತಾವು ತಿಳಿದುಕೊಳ್ಳುವದಕ್ಕೆ ತಕ್ಕವರನ್ನಾಗಿ ಮಾಡ ಬೇಕೆಂದು ಮಹಾರಾಷ್ಟ್ರದ ಕಡೆಗೆ ಅವರ ಕಟಾಕ್ಷವೀಕ್ಷಣವುಂಟಾಯಿತು.

## ಮಾತೃದರ್ಶನ

ಹೀಗೆ ದೇಶೋದ್ಧಾರದ ಕಡೆಗೆ ಲಕ್ಷವಿದ್ದರೂ ಅವರು ತಮ್ಮ ತಾಯನ್ನು ಮಾತ್ರ ಮರೆತಿರಲಿಲ್ಲ. ಹಸೆಯ ಜಗುಲಿಯಿಂದ ಓಡಿಬಂದ ಇಪ್ಪತ್ತನಾಲ್ಕು ವರ್ಷದಿಂದ ತಾಯಿಯ ಕಣ್ಣಿಂದ ತನಗಾಗಿ ಸಂತತವಾದ ದುಃಖಾಶ್ರುಧಾರೆಯು ಕೋಡಿಯಿಡುತ್ತಿರುವದೆಂದು ಅವರಿಗೆ ತಿಳಿಯದೆ ಇರಲಿಲ್ಲ. ಒಂದು ದಿನ ರಾಮದಾಸರು ತಮ್ಮ ಜನ್ಮಭೂಮಿಯಾದ ಜಾಂಬಿಗೆ ಬಂದು ಮೊದಲು ಮಾರುತಿಯ ದರ್ಶನವನ್ನು ತೆಗೆದುಕೊಂಡು ಆಮೇಲೆ "ಜಯಜಯ ರಘುವೀರಸಮರ್ಥ" ಎಂದು ಉಚ್ಚಸ್ವರದಿಂದ ತಮ್ಮ ಮನೆಯ ಅಂಗಳಕ್ಕೆ ಕಾಲಿಟ್ಟರು. ಅಲ್ಲಿ ಅತ್ತತ್ತ ಕುರುಡಾಗಿ ಕುಳಿತಿದ್ದ ಮುದುಕಿಯಾದ ಅವರ ತಾಯಿಯು ಶ್ರೇಷ್ಠನ ಹೆಂಡತಿ ಯಾದ ತನ್ನ ಸೊಸೆಯನ್ನು ಕರೆದು ಭಿಕ್ಷುಕನಿಗೆ ಭಿಕ್ಷವನ್ನು ನೀಡಿ ಕಳುಹಿಸೆಂದಳು. ಅಷ್ಟರಲ್ಲಿಯೇ ರಾಮದಾಸರು ಮೆಟ್ಟಲನ್ನು ಹತ್ತಿ ಮೇಲಕ್ಕೆ ಬಂದು "ಅಮ್ಮಾ! ಈ ಭಿಕ್ಷುಕನು ಬರೀ ಭಿಕ್ಷದಿಂದ ತೃಪ್ತ ನಾಗುವವನಲ್ಲ" ಎಂದು ಹೇಳಿ ಜಟಾಮುಕುಟದಿಂದ ಕೂಡಿದ ತನ್ನ ತಲೆಯನ್ನು ಆಕೆಯ ಪಾದದ ಮೇಲೆ ಇಟ್ಟರು. ಅವರ ಹಣೆಯ ಸೋಂಕಿನಿಂದಲೂ ಅವರ ಬಳಕೆಯಾದ ಕಂಠಸ್ವರದಿಂದಲೂ ಆ ಮುದು ಕಿಯ ಹೃದಯದಲ್ಲಿ ವಿಲಕ್ಷಣ ಸ್ಫೂರ್ತಿಯುಂಟಾಗಿ "ಏನಪ್ಪ, ನನ್ನ ಮುದ್ದು ನರೋಬನ ಹಾಗೆ ಕಾಣಿಸುತ್ತದೆ." ಎಂದು ಗದ್ಗದಧ್ವನಿ ಯಿಂದ ಹಂಬಲಿಸಲು "ಹೌದವ್ವ, ನಿಜವಾಗಿ ಬಂದಿದ್ದೇನೆ." ಎಂದು ರಾಮದಾಸರು ಉತ್ತರವನ್ನಿತ್ತರು. ಈ ಸಮಾಗಮದಲ್ಲಿ ಅವರೀರ್ವರ ಹೃದಯದ ಪರಿಸ್ಥಿತಿಯು ಹೇಗಿತ್ತೆಂಬದನ್ನು ಯಾರಾದರೂ ತಾವೇ

ಒಳಹೊಕ್ಕು ನೋಡಿ ಮಾತ್ರ ತಿಳಿಯಬಹುದಾಗಿತ್ತೇ ಹೊರತು ಎರಡನೆಯವರಿಗೆ ಹೇಳುವದಕ್ಕಂತೂ ಯಾರಿಗೂ ಬರಲಾರದಂತಿತ್ತು. ತಾಯಿ ಮಗನನ್ನು ಬಿಗಿಯಾಗಿ ಅಪ್ಪಿಕೊಂಡದ್ದು ಮಾತ್ರ ಎಲ್ಲರಿಗೂ ಕಂಡಿತು. ಆಗ ತಾಯಿ ಮಗನನ್ನು ನೋಡುವ ಕಣ್ಣಿಲ್ಲವಲ್ಲ ಎಂದು ನೊಂದುಕೊಳ್ಳಲು ಒಳಗಣ್ಣನ್ನು ಕೊಡಬಲ್ಲವರೆಂದು ಹೆಸರುವಾಸಿಯನ್ನು ಪಡೆದಿದ್ದ ರಾಮದಾಸರು ಆಕೆಗೆ ಪೂರ್ವದಂತೆ ಹೊರಗಣ್ಣನ್ನು ಕೂಡ ಕೊಟ್ಟರೆಂದು ಹೇಳುತ್ತಾರೆ. ಆಮೇಲೆ ಆಕೆಯು ಅವರ ಸಾಧುವೇಷವನ್ನು ನೋಡಿ ತಮ್ಮ ವಂಶವೇ ಕೃತಾರ್ಥವಾಯಿತೆಂದು ಭಾವಿಸಿದಳು. ಊರಿನವರೆಲ್ಲರೂ ನೋಡಿ ಸಂತುಷ್ಟರಾದರು. ರಾಮದಾಸರು ಅಲ್ಲಿ ಕೆಲವು ದಿವಸವಿದ್ದು ಆಮೇಲೆ ಎಲ್ಲರ ಸಮ್ಮತಿಯನ್ನೂ ಪಡೆದು ದೇಶೋದ್ಧಾರಕ್ಕಾಗಿ ಕೃಷ್ಣಾತೀರವನ್ನು ಕುರಿತು ಹೊರಟರು.

## ಪಂಥ

ಅಲ್ಲಿಂದ ಹೊರಟವರು ತಕ್ಲಿಗೆ ಬಂದು ನೋಡಿಕೊಂಡು ಮಹಾಬಲೇಶ್ವರದಲ್ಲಿಯೂ ವಾಯಿಯಲ್ಲಿಯೂ ಕೆಲವು ದಿವಸಗಳಿದ್ದು ಜರಂಡಾ ಪರ್ವತದ ಗುಹೆಯಲ್ಲಿ ಒಂದು ಪುರಾತನವಾದ ಮಾರುತಿಯ ಗುಡಿಯಲ್ಲಿ ಏಕಾಂತವಾಸಮಾಡಿ ಅಲ್ಲಿಂದ ಸಾತಾರಾ ಜಿಲ್ಹೆಯ ಚಾಫಳ ಕಣಿವೆಯಲ್ಲಿ ಇನ್ನೂ ಹೆಚ್ಚು ಏಕಾಂತವಾದ ಗುಹೆಯನ್ನು ಕಂಡುಹಿಡಿದು ಅಲ್ಲಿ ನಿಂತರು. ಅವರ ಖ್ಯಾತಿಯು ಎಲ್ಲೆಲ್ಲಿಯೂ ಹರಡಿದ್ದರಿಂದ ನೂರಾರು ಗಂಡಸರೂ ಹೆಂಗಸರೂ ಗುಂಪುಗಟ್ಟಿಕೊಂಡು ಅವರ ದರ್ಶನಕ್ಕೆ ಬರಲಾರಂಭಿಸಿದರು. ರಾಮದಾಸರು ಚಾಫಳದಲ್ಲಿ ಕ್ರಿ. ೧೬೪೮ರಲ್ಲಿ ಶ್ರೀರಾಮದೇವಸ್ಥಾನವೊಂದನ್ನು ನಿರ್ಮಿಸಿ ನಿತ್ಯಪೂಜೆಗೆ ತಕ್ಕ ಸಿದ್ಧತೆಯನ್ನು ಮಾಡಿದರು. ರಾಮದಾಸರು ಯೋಗ್ಯತಾಸಂಪನ್ನರನ್ನು ನೋಡಿ ತಮ್ಮ ಉಪದೇಶದಿಂದ ಅವರನ್ನು ತಿದ್ದಿ ಅವರನ್ನು ವೈರಾಗ್ಯ ಸಂಪನ್ನರಾದ ಒಳ್ಳೇ ಕರ್ಮಯೋಗಿಗಳನ್ನಾಗಿ ಮಾಡಿದರು. ಜನ್ಮ ಸಾರ್ಥಕವಾಗಬೇಕಾದರೆ ವಿರಕ್ತನಾಗಿ, ನೀತಿವಂತನಾಗಿ, ಕ್ಷಮಾಶೀಲನಾಗಿ, ಧರ್ಮವನ್ನುದ್ಧಾರಮಾಡಬೇಕೆಂದೂ ಧರ್ಮಗ್ರಂಥಗಳನ್ನು ಓದುವದು ಮೊದಲಾಗಿ ಯಾವಾಗಲೂ ಉದ್ಯೋಗಿಯಾಗಿರಬೇಕೆಂದೂ

ಪ್ರಪಂಚವ್ಯವಹಾರಕ್ಕೆ ಹೆದರದೆ ಅದರಲ್ಲಿ ಬಿದ್ದು ಅದರ ದುರಾಶೆಗೆ ಮಾತ್ರ ಹೋಗದೆ ತನ್ನ ವೈರಾಗ್ಯವೃತ್ತಿಯನ್ನೇ ಕಾಪಾಡಿಕೊಳ್ಳ ಬೇಕೆಂದೂ, ತಾನೂ ತಪಶ್ಚರ್ಯೆಯನ್ನು ಮಾಡುತ್ತ ಇತರರಿಗೆ ಅನೇಕ ಪೂಜಾವಿಧಾನಗಳನ್ನು ಹಚ್ಚಿ ಫಲಾಪೇಕ್ಷೆಯಿಲ್ಲದೆ ಮಾಡುವ ಭಜನೆ ಗಳ ಮತ್ತು ಕೀರ್ತನೆಗಳ ಮೂಲಕ ಪರಮಾತ್ಮತತ್ವವನ್ನು ಪ್ರಸಾರ ಮಾಡಬೇಕೆಂದೂ ಮಂತ್ರ, ಔಷಧಿ ಮೊದಲಾದವುಗಳಲ್ಲಿ ನಿಪುಣ ರಾಗಿದ್ದು ಜನಮಂಡಲಿಯ ದುಃಖಪರಿಹಾರಕ್ಕೆ ಸಹಾಯಕರಾಗ ಬೇಕೆಂದೂ ಎಂಥ ಕಠಿನಪ್ರಸಂಗ ಬಂದರೂ ತಮ್ಮ ಕರ್ತವ್ಯದಿಂದ ಹಿಮ್ಮೆಟ್ಟಬಾರದೆಂದೂ ಅವರ ಉಪದೇಶ.

ಈ ಸಮಯದಲ್ಲಿ ಅವರು *ಮನಸ್ಸಿಗುಪದೇಶವೆಂಬ ಸಣ್ಣದೊಂದು ಉಪದೇಶಪರ ಗ್ರಂಥವನ್ನು ರಚಿಸಿ ಅದರ ಮೂಲಕ ಆತ್ಮತತ್ವವಿಚಾರ, ಧರ್ಮಶ್ರದ್ಧಾವಂತನ ದಿನಚರ್ಯೆ—ಮೊದಲಾದವುಗಳ ವಿಷಯದಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಮಾಡಿದರು. ತಮ್ಮ ಹೊಟ್ಟೆಗಾಗಿ ಇತರರ ಮೇಲೆ ಭಾರವನ್ನು ಹಾಕಿ ಅವರ ದಾಕ್ಷಿಣ್ಯಕ್ಕೆ ಕಟ್ಟುಬೀಳಬಾರ ದೆಂಬ ಈ ರಾಮದಾಸೀಪಂಥದವರು ಭಿಕ್ಷಕ್ಕೆ ಹೋಗುವಾಗ ಈ ಪದ್ಯ ಗಳನ್ನು ಹೇಳಿಕೊಂಡು ಹೋಗಬೇಕೆಂಬ ನಿಯಮವಾದದ್ದರ ಮೇಲೆ ಈ ವಿಚಾರಗಳು ಎಲ್ಲರ ಕಿವಿಗಳಲ್ಲಿಯೂ ಇಳಿದು ಹೃದಯಕ್ಕೆ ವ್ಯಾಪಿ ಸುವದಕ್ಕೆ ಮೊದಲಾದವು. ಈ ರೀತಿಯಲ್ಲಿ ಧರ್ಮಪ್ರಸಾರಕ್ಕಾಗಿ ಸ್ಥಾಪಿತವಾದ ಮಠಗಳ ಸಂಖ್ಯೆಯು ನೂರೈವತ್ತರವರೆಗೆ ಲೆಕ್ಕಕ್ಕೆ ಬಂದಿದೆ.

## ಶಿವಾಜಿಯ ಶಿಷ್ಯತ್ವ

ಇತ್ತ ಮಹಾರಾಷ್ಟ್ರದಲ್ಲಿ ಶಿವಾಜಿಯು ಪ್ರಸಿದ್ಧಿಗೆ ಬಂದು ಅಲ್ಲಲ್ಲಿ ಕೋಟೆಗಳನ್ನು ವಶಮಾಡಿಕೊಂಡು ಸ್ವರಾಜ್ಯಸ್ಥಾಪನೆಯನ್ನು ಮಾಡ ಬೇಕೆಂಬ ಕುತೂಹಲದಿಂದ ಇದ್ದನು. ಇದರ ಜೊತೆಗೆ ಅವನಿಗೆ

* ಈ ಗ್ರಂಥವು ಮಹಾರಾಷ್ಟ್ರ ಭಾಷೆಯಿಂದ ನನ್ನಿಂದಲೇ ಕನ್ನಡಕ್ಕೆ ಪದ್ಯರೂಪದಲ್ಲಿ ಭಾಷಾಂತರವಾಗಿ, ಧಾರವಾಡ ಕ. ಪ್ರಿ. ವ. ನಲ್ಲಿ ೪ ಆಣೆಗೆ ದೊರೆಯುತ್ತದೆ.

ಮುಮುಕ್ಷುತ್ವವೂ ಸಮಪ್ರಮಾಣದಲ್ಲಿಯೇ ತಲೆ ಎತ್ತಿಕೊಂಡಿತ್ತು. ಇಷ್ಟುಹೊತ್ತಿಗೆ ಅವನ ಕಿವಿಯಲ್ಲಾಗಲೇ ರಾಮದಾಸರ ಮತ್ತು ರಾಮ ದಾಸೀಪಂಥದ ವಿಚಾರವು ಗುಡುಗಾಡಿತ್ತು. ರಾಮದಾಸರ ದರ್ಶನ ವನ್ನು ಪಡೆಯಬೇಕೆಂದು ಅವನು ಸರ್ವಸನ್ನಾಹವನ್ನೂ ಮಾಡಿದನು. ಅವರ ನೆಲೆಯೇ ಅವನಿಗೆ ಹತ್ತಲಿಲ್ಲ. ಅವನ ಉತ್ಕಟವಾದ ಇಚ್ಛೆಯ ಫಲವಾಗಿ ಒಂದುರಾತ್ರಿ ಕನಸಿನಲ್ಲಿ ಅವನಿಗೆ ರಾಮದಾಸರ ದರ್ಶನ ವಾಯಿತು. ಮರುದಿನ ಏಳುವ ಹೊತ್ತಿಗೆ ಸರಿಯಾಗಿ ರಾಮದಾಸರ ಶಿಷ್ಯನೊಬ್ಬನು ಅವರ ಪತ್ರವನ್ನು ತಂದಿದ್ದನು. ಶಿವಾಜಿಯು ಅತ್ಯಾ ದರದಿಂದ ಅದಕ್ಕೆ ಶುಭಾಗಮನವನ್ನು ಮಾಡಿ ಪತ್ರವನ್ನು ಒಡೆದು ನೋಡಲಾಗಿ ಅದರಲ್ಲಿ "ಧರ್ಮಕ್ಕೆ ಉಳಿಗಾಲವಿಲ್ಲದೆ ತೀರ್ಥಕ್ಷೇತ್ರ ಗಳೆಲ್ಲಾ ಅಪವಿತ್ರವಾಗಿ ದೇಶಕ್ಕೆ ದೇಶವೇ ಕಂಗಾಲಾಗಿದೆ. ಇದನ್ನು ರಕ್ಷಣಮಾಡಲೆಂದು ಪರಮಾತ್ಮನು ನಿನಗೆ ಶಕ್ತಿಯನ್ನು ಕೊಟ್ಟಿದ್ದಾನೆ. ನಿನ್ನ ಹೊರತು ಧರ್ಮಕ್ಕೆ ಈಗ ಯಾರೂ ರಕ್ಷಕರಿಲ್ಲ. ನಾನು ಎಷ್ಟೋ ದಿನಗಳಿಂದ ನಿನ್ನ ರಾಜ್ಯದಲ್ಲಿಯೇ ಇದ್ದರೂ ನೀನು ಇತ್ತಕಡೆಗೆ ಲಕ್ಷ್ಯಕೊಡದೆ ಇರುವ ಕಾರಣವೇನೋ ತಿಳಿಯಲಿಲ್ಲ" ಎಂದು ಬರೆದಿತ್ತು. ಇದನ್ನು ನೋಡಿಕೊಂಡೊಡನೆ ಗುರುಗಳಿಗೆ ತನ್ನ ಆತ್ಮ ನಿವೇದನವನ್ನು ಮಾಡಿಕೊಂಡು ಪತ್ರವನ್ನು ಬರೆದು ಮುಂದೆ ಕಳುಹಿಸಿ ಹಿಂದೆಯೇ ತಾನೂ ಹೊರಟುಹೋಗಿ ಅವರನ್ನು ಪ್ರಸನ್ನರಾಗಿ ಮಾಡಿಕೊಂಡು ಅವರಿಂದ ಅನುಗ್ರಹವನ್ನು ಪಡೆದನು. ಶಿವಾಜಿಯು ಶಿಷ್ಯನಾಗಿ ನಮಸ್ಕಾರ ಮಾಡಿದಾಗ ರಾಮದಾಸರು ಅವನಿಗೆ ಒಂದು ತೆಂಗಿನಕಾಯಿ, ಒಂದು ಹಿಡಿ ಕಲ್ಲುಮಣ್ಣು, ಒಂದು ಹಿಡಿ ಕುದುರೇ ಲದ್ದಿ– ಇವುಗಳನ್ನು ಆಶೀರ್ವಾದಮಾಡಿ ಕೊಟ್ಟರು. ಗುರುವಿಗೆ ತಕ್ಕ ಶಿಷ್ಯನಾದ ಶಿವಾಜಿಯು "ಕುದುರೆಯ ಲದ್ದಿಯು ಕುದುರೆಯ ಹೆಚ್ಚುವಿಕೆಯನ್ನೂ ಮಣ್ಣು ರಾಜ್ಯಲಾಭವನ್ನೂ ಕಲ್ಲು ಕೋಟೆಗಳು ವಶವಾಗುವದನ್ನೂ ಸೂಚಿಸುವವು" ಎಂದು ಅದರ ಅರ್ಥವನ್ನು ತನ್ನ ತಾಯಿಯ ಮುಂದೆ ಒಡೆದು ಹೇಳಿದನು. ರಾಮದಾಸರ ಉಪ ದೇಶದಿಂದ ಚಿತ್ತಶುದ್ಧಿಯನ್ನು ಪಡೆದ ಶಿವಾಜಿಯು ತಾನೂ ಇತರ ಶಿಷ್ಯರಂತೆ ಭಿಕ್ಷುಕನಾಗುವೆನೆನ್ನಲು ಅದು ಪರಧರ್ಮವೆಂದು ರಾಮ ದಾಸರು ಅವನಿಗೆ ಭಗವದ್ಗೀತೆಯ ರಹಸ್ಯವನ್ನೂ ರಾಜಧರ್ಮವನ್ನೂ

ಕ್ಷತ್ರಿಯಧರ್ಮವನ್ನೂ ಉಪದೇಶಮಾಡಿ ಸ್ವರಾಜ್ಯದ ಹೊರತು ಸ್ವೋನ್ನತಿಯು ಪೂರ್ಣವಾಗದ ಕಾರಣ ಸ್ವರಾಜ್ಯ ವ್ಯವಸ್ಥೆಯ ಕಾರ್ಯವನ್ನು ನೆರವೇರಿಸೆಂದು ಉತ್ತೇಜನ ಕೊಟ್ಟು ಅವನಿಗೆ ಕರ್ಮಯೋಗವನ್ನು ಹಿಡಿಸಿದರು.

## ರಾಜ್ಯಸ್ಥಾಪನೆ

ಕೆಲವು ದಿನಗಳ ಮೇಲೆ ಶಿವಾಜಿಯು ಪ್ರಾರ್ಥನೆಯಂತೆ ರಾಮದಾಸರು ಸಾತಾರೆಯ ಹತ್ತರ ಪರಲಿಯೆಂಬ ಸ್ಥಲದಲ್ಲಿ ಬಂದು ನಿಂತರು. ರಾಮದಾಸರ ದರ್ಶನಕ್ಕೆಂದು ಅನೇಕ ಸಾಧು-ಸಂತರು ಬಂದು ಅಲ್ಲಿ ನಿಲ್ಲುತ್ತಿದ್ದದರಿಂದ ಆ ಸ್ಥಲವು ಸಜ್ಜನಗಡವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಶಿವಾಜಿಯು ಆಗಾಗ ಪರಲಿಗೆ ಹೋಗಿ ಪ್ರತಿಯೊಂದು ಮುಖ್ಯ ವಿಷಯಕ್ಕೂ ರಾಮದಾಸರ ಆಲೋಚನೆಯನ್ನು ಕೇಳಿಕೊಂಡು ಬಂದು ಕೆಲಸವನ್ನು ನಡೆಸುವದಕ್ಕೆ ಮೊದಲುಮಾಡಿದನು. ರಾಮದಾಸೀ ಪಂಥದವರು ಪ್ರಸಾರ ಮಾಡಿದ ಧರ್ಮದಿಂದ ಉದಾರ ಮನಸ್ಕರಾದ ಪ್ರಜೆಗಳೂ ತಮ್ಮ ಪೂರ್ವೋನ್ನತಿಯನ್ನು ನೆನೆಸಿಕೊಂಡು ಈಗಿನ ತಮ್ಮ ತಪ್ಪನ್ನು ತಾವು ತಿಳಿದವರಾಗಿ ಸಾರ್ವಜನಿಕ ಹಿತದ ಕಡೆಗೆ ಮನಸ್ಸು ಕೊಟ್ಟ ಶಿವಾಜಿಗೆ ಒಮ್ಮುಖವಾಗಿ ನೆರವಾಗುವದಕ್ಕೆ ಮುಂದೆ ಬಂದರು. ರಾಮದಾಸರ ತಪಃಪ್ರಭಾವವೆಂಬ ಮತ್ತು ಪ್ರಜೆಗಳ ಧರ್ಮಶ್ರದ್ಧೆಯ ಪ್ರಭಾವವೆಂಬ ಚಂಡಾಂಶುವಿನ ಮುಂದೆ ಸ್ವರಾಜ್ಯವಿಘಾತಕರ ಪ್ರತಿಕ್ರಿಯೆಗಳೆಲ್ಲ ಮಂಜಿನಂತೆ ಕರಗಿಹೋದವು. ಶಿವಾಜಿಗೆ ಎಲ್ಲೆಲ್ಲಿಯೂ ದಿಗ್ವಿಜಯವಾಯಿತು. ಶಕೆ ೧೫೯೬ನೇ ಜೇಷ್ಠಶುದ್ಧ ತ್ರಯೋದಶಿಯ ದಿವಸ ಗೋಬ್ರಾಹ್ಮಣ ಪ್ರತಿಪಾಲಕ ಶ್ರೀಛತ್ರಪತಿ ಮಹಾರಾಜ ಎಂಬ ಬಿರುದಿನಿಂದ ಶಿವಾಜಿಗೆ ರಾಜ್ಯಾಭಿಷೇಕವಾಗುವ ನಿಶ್ಚಯವಾಯಿತು. ಶಿವಾಜಿಯು ಗುರುಸತ್ತಾವಿಶೇಷಕ್ಕೆ ಕೃತಜ್ಞತೆಯನ್ನು ತೋರಿಸಿ ಮೊದಲು ರಾಮದಾಸರಿಗೆ ಮಂಗಳಸ್ನಾನವನ್ನು ತೀರಿಸಿ ಛತ್ರಚಾಮರಾದಿ ಸಮಸ್ತ ರಾಜೋಪಚಾರಗಳೊಂದಿಗೆ ಸಿಂಹಾಸನದ ಮೇಲೆ ಅವರ ಪದಾರ್ಪಣವನ್ನು ಮಾಡಿಸಿ ಆಮೇಲೆ ಅವರ ಆಜ್ಞಾಪರಿಪಾಲನೆ ಮಾಡುವವನಾಗಿ ತನ್ನ ಪಟ್ಟಾಭಿಷೇಕವನ್ನು ನಡೆಸಿಕೊಂಡನು.

ಒಂದುದಿನ ಶಿವಾಜಿಯು ರಾಯಗಡದಲ್ಲಿದ್ದಾಗ ರಾಮದಾಸರು ಅಕಸ್ಮಾತ್ತಾಗಿ ಅಲ್ಲಿಗೆ ಹೋದರು. ಒಡನೆ ಶಿವಾಜಿಯು ತನ್ನ ಸರ್ವಸ್ವವನ್ನೂ ಗುರುದಕ್ಷಿಣೆಯಾಗಿಟ್ಟು ದಾನಪತ್ರವನ್ನು ಬರೆದು ಅದನ್ನು ಜೋಳಿಗೆಯಲ್ಲಿ ಹಾಕಿದನು. ಅದನ್ನು ಅವರು ನೋಡಿ ಶಿಷ್ಯನ ಭಕ್ತಿ ವಿಶೇಷದಿಂದ ಆಶ್ಚರ್ಯಚಕಿತರಾಗಿ "ಶಿವಾ, ನಮ್ಮಂಥ ಸನ್ಯಾಸಿಗಳಿಂದ ರಾಜ್ಯಭಾರವು ಹೇಗೆ ನಡೆದೀತು? ನಿನ್ನಂಥ ಕ್ಷತ್ರಿಯರೇ ಇದಕ್ಕೆ ತಕ್ಕವರು." ಎಂದು ಅದನ್ನು ಹಿಂದಕ್ಕೆ ಕೊಡಹೋದರು. ಶಿವಾಜಿಯು ದತ್ತಾಪಹಾರಮಾಡುವದಕ್ಕೊಪ್ಪಲಿಲ್ಲ. ಆಗ ಅವರು "ನನ್ನ ಪರವಾಗಿ ನೀನು ರಾಜ್ಯವಾಳು" ಎಂದು ಒಡಂಬಡಿಸಿ ತಮ್ಮ ಚಿಹ್ನವಾಗಿ ಅಂದಿನಿಂದ ಕಾವಿಯ ಬಟ್ಟೆಯನ್ನು ಧ್ವಜವಾಗಿಟ್ಟುಕೊಳ್ಳುವಂತೆ ಮಾಡಿದರು. ಹೀಗೆ ಹೇಳಿ ರಾಮದಾಸರು ಪರದೆಯ ಹಿಂದೆ ನಿಂತು ಮಂತ್ರಾಲೋಚನೆಯನ್ನು ಹೇಳುತ್ತಿದ್ದದ್ದಲ್ಲದೆ ಒಮ್ಮೊಮ್ಮೆ ಮುಂದೆಬಂದು ಕೋಟೆಗಳನ್ನು ಕಟ್ಟಿಸುವದು ಉಪವನಗಳ ರಚನೆ—ಮೊದಲಾದ ಕೆಲಸಗಳಲ್ಲಿ ಎಷ್ಟೋ ಉಪಾಯಗಳನ್ನು ಹೇಳಿಕೊಡುತ್ತಿದ್ದರು.

## * ದಾಸಬೋಧ

ಶ್ರೀಕೃಷ್ಣನು ತನ್ನ ಉಪದೇಶವನ್ನೆಲ್ಲಾ ಭಗವದ್ಗೀತೆಯಲ್ಲಿ ಅಡಕಮಾಡಿದಂತೆ ರಾಮದಾಸರು ತಮ್ಮ ಉಪದೇಶವನ್ನೆಲ್ಲ ಅಡಕ ಮಾಡಿ ದಾಸಬೋಧವೆಂಬ ಗ್ರಂಥವನ್ನು ಬರೆದಿರುತ್ತಾರೆ. ಇತರ ಧರ್ಮಗ್ರಂಥಗಳ ಸಾರವೆಲ್ಲಾ ಇದರಲ್ಲಿ ಬಂದಿರುವದಲ್ಲದೆ ಸ್ವರಾಜ್ಯವಿಲ್ಲದೆ ಸ್ವಧರ್ಮಕ್ಕೆ ಉಳಿಗಾಲವಿಲ್ಲದ್ದರಿಂದಲೂ ಸ್ವಧರ್ಮವಿಲ್ಲದೆ ಸ್ವರಾಜ್ಯಕ್ಕೆ ಏಳಿಗೆಯಿಲ್ಲದ್ದರಿಂದಲೂ, ರಾಜಕೀಯ ವಿಚಾರವೂ ಧಾರ್ಮಿಕ ವಿಚಾರವೂ ಒಂದನ್ನೊಂದು ಬಿಟ್ಟಿಲ್ಲವೆಂಬ ಅಭಿಪ್ರಾಯವು ಇದರಲ್ಲಿ ಎಲ್ಲೆಲ್ಲಿಯೂ ಅನುಸ್ಯೂತವಾಗಿರುವದೊಂದು ಇದರ ವಿಶೇಷ ಲಕ್ಷಣ. ಅವರ ನಡವಳಿಕೆಯೂ ಹಾಗೆಯೇ, ಅವರ ಉಪದೇಶವೂ ಹಾಗೆಯೇ. ಇದು ಹಿಡಿದ ಪಟ್ಟಿನಲ್ಲಿಯೇ ಬರೆದ ಗ್ರಂಥವಲ್ಲ. ಅವರು

---

* ಈ ಗ್ರಂಥವನ್ನು ಹಾವೇರಿ ತಾಲೂಕ ಆನಂದವನದಲ್ಲಿರುವ ಸದ್ಬೋಧ ಚಂದ್ರಿಕೆಯ ಸಂಪಾದಕರು ವಚನರೂಪದಲ್ಲಿ ಕನ್ನಡಿಸಿ ಪ್ರಕಟಿಸುತ್ತಾ ಇದ್ದಾರೆ.

ಬೇರೆಬೇರೆ ಸಮಯದಲ್ಲಿ ಹೇಳಿದ್ದನ್ನೆಲ್ಲಾ ಅವರ ಶಿಷ್ಯನಾದ ಕಲ್ಯಾಣನು ಆಗಾಗಲೇ ಬರೆದು ಕೊಡಿಟ್ಟದ್ದು. ಮಹಾಸಮಾಧಿಯಾಗುವದಕ್ಕೆ ಸ್ವಲ್ಪ ದಿವಸಗಳ ಮುಂಚೆ ಅವರು ತಾವೇ ಅವುಗಳನ್ನೆಲ್ಲಾ ಒಮ್ಮೆ ನೋಡಿ ಅಲ್ಲಲ್ಲಿ ತಿದ್ದಿರುತ್ತಾರೆ. ಈ ಗ್ರಂಥದಲ್ಲಿ ಸಮಾಜಶಾಸ್ತ್ರ, ವೇದಾಂತಶಾಸ್ತ್ರ—ಮೊದಲಾದವುಗಳೆಲ್ಲಾ ಬಹುಸರಸವಾಗಿ ಪ್ರತಿಪಾದಿತವಾಗಿವೆ. ಕನ್ನಡಿಗರಿಗೆ ಅದರ ರುಚಿಯನ್ನು ತೋರಿಸುವದಕ್ಕಾಗಿ ಇಲ್ಲಿ ಅವರ ಕೆಲವು ಉಪದೇಶವಿಶೇಷಗಳನ್ನು ಚೌಪದಿಯ ರೂಪದಲ್ಲಿ ಕೊಡುತ್ತೇವೆ.

ಹರಿಭಕ್ತಿಗೈವುದೇ ಮೊದಲನೆಯ ಕೆಲಸ ।
ನೆರೆ ದೇಶಸೇವೆ ತಾನೆರಡನೆಯ ಕೆಲಸ ॥
ಇರೆ ಜಾಗರೂಕತೆಯು ಸರ್ವವಿಷಯದೊಳು ।
ಮರೆಯದಿರುತಿರ್ಪುದೇ ಮೂರನೆಯ ಕೆಲಸ ॥ ೧೧, ೫, ೪ ॥

ವ್ಯವಹಾರಬಾಹುಲ್ಯದೊಳು ತೊಡಗಬೇಕು ।
ವ್ಯವಹಾರದೊಳಗೆ ತಾನಂಟದಿರಬೇಕು ॥
ವಿವಿಧ ಜನರೊಳು ತಾನು ನೀಚತ್ವವನ್ನೇ ।
ಸುವಿವೇಕಿ ತನ್ನೊಳಗೆ ತೋರುತಿರಬೇಕು ॥ ೧೧, ೫, ೯ ॥

ಪರರೊಳಗೆ ದೋಷವಿರೆ ಮುಚ್ಚಿಡಲು ಬೇಕು ।
ಭರದೊಳವರವಗುಣವ ಹೇಳದಿರಬೇಕು ॥
ದುರುಳಜನರಿಗುಮೊಲಿಯುತುಪಕಾರ ಮಾಡಿ ।
ಪರಮಕರುಣಾಳುತ್ವವನು ತೋರಬೇಕು ॥ ೧೧, ೫, ೧೦ ॥

ಪರಿಪರಿಯ ಶಾಸ್ತ್ರಪರಿಚಯವಿರಲು ಬೇಕು ।
ಪರಿಪಕ್ವವಹ ವಿಚಾರದ ಸಿದ್ಧಿ ಬೇಕು ॥
ಪರರಿಗುಪಕಾರವನು ಗೈವ ಯತ್ನದಲಿ ।
ಪರಿಪೂರ್ಣತತ್ಪರತೆ ನೆಲಸಿರಲುಬೇಕು ॥ ೧೧, ೫, ೧೫ ॥

ನೀನುಶಾಂತಿಯ ಹೊಂದಿ ಪರರಿಗದ ಹೇಳು ।
ನೀನು ನಿಶ್ಚಲನಾಗಿ ಪರರ ದೃಢಗೊಳಿಸು ॥
ನೀನುಕೃತಿಯಂ ಗೈದು ಪರರಿಂದ ಗೈಸು ।
ನೀನುತಿಳಿದಾಮೇಲೆ ಪರರಿಗದತಿಳಿಸು ॥ ೧೧, ೫, ೧೬ ॥

ಪ್ರತಿಯೊಬ್ಬನನು ಪರೀಕ್ಷಿಸಿ ಬಿಡಲುಬೇಕು ।
ಅತಿಮಾನವನು ತಾನು ತಾಳದಿರಬೇಕು ॥
ಹಿತದಿಂದ ದೇಶಸೇವೆಯ ಗೆಯ್ಯಬೇಕು ।
ಪ್ರತಿಕೂಲರಾದವರನೊಲಿಸಿಕೊಳಬೇಕು ॥ ೧೧, ೫, ೨೦ ॥

## ಮಹಾಸಮಾಧಿ

ದಾಸಬೋಧವನ್ನು ಮುಗಿಸಿದಂದಿನಿಂದ ಅವರಿಗೆ ದೇಹದಲ್ಲಿ ಅಸ್ವಸ್ಥತೆಯುಂಟಾಯಿತು. ಅದರ ಶಾಂತಿಗಾಗಿ ದೇವತಾರಾಧನೆಯನ್ನೂ ಔಷಧೋಪಚಾರಗಳನ್ನೂ ಮಾಡುವೆವೆಂದು ಶಿಷ್ಯಮಂಡಲಿಯು ಅಹಮಹಮಿಕೆಯನ್ನು ತೋರಿಸಿದರು. ಆದರೆ ಪಾಂಚಭೌತಿಕ ದೇಹವು ಅನಿತ್ಯವೆಂದು ಮುಂತಾಗಿ ವೈರಾಗ್ಯವನ್ನು ಬಾಯಿತುಂಬ ಹೇಳುವ ನಾವು ಅದರ ನಿತ್ಯತ್ವಕ್ಕೆ ಪ್ರಯತ್ನಮಾಡುವ ಮೂಲಕ 'ಶಾಸ್ತ್ರ ಹೇಳುವದಕ್ಕೆ, ಬದನೇಕಾಯಿ ತಿನ್ನುವದಕ್ಕೆ' ಎಂಬ ನಾಣ್ಣುಡಿಗೆ ನಾವೇ ನಿದರ್ಶನರಾಗಬಾರದು — ಎಂದು ರಾಮದಾಸರು ಯಾವ ಪ್ರತೀಕಾರಕ್ಕೂ ಅವಕಾಶ ಕೊಡಲಿಲ್ಲ.

ಅವರ ಅಸ್ವಸ್ಥತೆಯನ್ನು ಕೇಳಿ ಹತ್ತುದಿಕ್ಕುಗಳಿಂದಲೂ ಮಂದಿ ಬಂದು ಸೇರಿ ಭಜನೆಯನ್ನು ಮಾಡುತ್ತ ವಾಯುಮಂಡಲವೆಲ್ಲಾ ರಾಮಶಬ್ದದಿಂದ ಗಿಟ್ಟಿಗಿರಿಯುವಂತೆ ಮಾಡಿತು. ಆ ನಾಮಘೋಷದ ನಡುವೆ ಹನ್ನೊಂದುವೇಳೆ ರಾಮನಾಮವನ್ನು ಉಚ್ಚಾರಮಾಡಿ ಬಾಯಿಮುಚ್ಚಿದ ರಾಮದಾಸರು ಮತ್ತೆ ಬಾಯಿಬಿಡಲಿಲ್ಲ. ಕ್ರಿ. ೧೬೮೧ ರಲ್ಲಿ ಮಾಘ ಬಹುಳ ನವಮಿಯ ದಿವಸ ರಾಮದಾಸರು ಮಹಾಸಮಾಧಿಯನ್ನು ತಂದುಕೊಂಡರು. ರಾಮದಾಸರ ಉಪದೇಶದ ಬೆಳಕನ್ನು ಪಡೆದ ಹೃದಯವುಳ್ಳವರೆಲ್ಲರೂ ಪ್ರತಿವರ್ಷವೂ ಆದಿನ ದಾಸನವಮಿಯೆಂಬ ಹೆಸರಿನಿಂದ ಪುಣ್ಯತಿಥಿಯ ಉತ್ಸವವನ್ನು ಮಾಡುತ್ತಾರೆ.

# ಅಹಲ್ಯಾಬಾಯಿ

## ಹುಟ್ಟು

ಈಶ್ವರೋಪಾಸನೆಯಿಂದ ಹುಟ್ಟಿದ ಸಂತತಿಯಲ್ಲಿ ಈಶ್ವರೀ ವಿಭೂತಿಯೇ ತುಂಬಿಕೊಂಡಿರುವದೆಂಬ ಮಾತಿಗೆ ಎರಡಿಲ್ಲ. ಮಾಳವದೇಶವೆಂದು ಹೆಸರಾದ ಅಹಮ್ಮದನಗರ ಜಿಲ್ಹೆಗೆ ಸೇರಿದ ಖಾಪರಡೀಯೆಂಬ ಹಳ್ಳಿಯಲ್ಲಿ ಆನಂದರಾವ ಸಿಂಧ್ಯನೆಂಬ ಒಬ್ಬ ಮರಾಠಾ ಗೃಹಸ್ಥನಿದ್ದನು. ಈತನು ವ್ಯವಸಾಯದಿಂದ ತನ್ನ ಹೊಟ್ಟೆಯನ್ನು ಹೊರೆದುಕೊಳ್ಳುತ್ತ ಬಡವನಾಗಿದ್ದರೂ ತನ್ನಿಂದಾದಮಟ್ಟಿಗೆ ಪರೋಪಕಾರವನ್ನು ಮಾಡಿಕೊಂಡು ಸಾತ್ವಿಕನಾಗಿದ್ದನು ಒಂದುದಿನ ಆತನ ಹೆಂಡತಿಯು ಊಟಕ್ಕೆ ಕುಳಿತುಕೊಳ್ಳುವ ಹೊತ್ತಿಗೆ ಒಬ್ಬ ಅತಿಥಿಯು ಬಂದು ಅನ್ನವನ್ನು ಬೇಡಿದನು. ಆಗ ಒಳಗೆ ತನ್ನೊಬ್ಬಳಿಗೆ ಮಾತ್ರ ಸಾಲುವಷ್ಟು ಅನ್ನವಿತ್ತು. ಆ ಸಾಧ್ವಿಯು ಅದನ್ನು ತಾನುಣ್ಣುವದಕ್ಕಿಂತಲೂ ಅದರಿಂದ ಅತಿಥಿಯನ್ನು ಸತ್ಕಾರ ಮಾಡಿದ ಪುಣ್ಯದಿಂದ ತನ್ನ ಹೊಟ್ಟೆಯನ್ನು ತುಂಬಿಕೊಳ್ಳಬೇಕೆಂದು ನೆನೆಸಿ ಇದ್ದ ಅನ್ನವನ್ನು ಅತ್ಯಾದರದಿಂದ ಅತಿಥಿಗೆ ನೀಡಿದಳು. ಉಂಡು ತೃಪ್ತನಾದ ಆ ಅತಿಥಿಯು ನಿನ್ನ ಸಂತತಿಗೆ ಶ್ರೇಯಸ್ಸಾಗಲೆಂದು ಹರಿಸಿದನು. ಆಕೆಗೆ ಸಂತತಿಯೇ ಇರಲಿಲ್ಲ. ಈ ವಿಷಯವನ್ನು ಆಕೆ ಬಾಯಿಬಿಟ್ಟು ಹೇಳಿದಳು. ಕೊಲ್ಹಾಪುರದ ಲಕ್ಷ್ಮೀದೇವಿಯನ್ನಾರಾಧಿಸಿದರೆ ಸತ್ಸಂತತಿಯಾಗುವದೆಂದು ಹೇಳಿ ಆ ಸಾಧುವು ತನ್ನ ದಾರಿಯನ್ನು ಹಿಡಿದನು. ಈ ದಂಪತಿಗಳಿಗೂ ಸಂತತಿಯ ಆಸೆ ಪೂರ್ಣವಾಗಿತ್ತು. ಆದ್ದರಿಂದ ಅವರಿಬ್ಬರೂ ಹೋಗಿ ಒಂದೆರಡು ತಿಂಗಳು ಕೊಲ್ಹಾಪುರದಲ್ಲಿದ್ದು ಜಗನ್ಮಾತೆಯನ್ನು ಆರಾಧಿಸಲು ಆ ಮಹಾಲಕ್ಷ್ಮಿಯು ಒಂದುದಿನ ಅವರಿಬ್ಬರಿಗೂ ಸ್ವಪ್ನದಲ್ಲಿ ಬಂದು ಇಷ್ಟಾರ್ಥಸಿದ್ಧಿಯಾಗುವದೆಂದು ಹೇಳಿದಂತಾಯಿತು.

ಅದರಂತೆ ಆ ಸಾಧ್ವಿಯು ಗರ್ಭಿಣಿಯಾದಳು. ಗರ್ಭವು ಬೆಳೆಯುತ್ತ ಬೆಳೆಯುತ್ತ ಅನೇಕ ದಾನಧರ್ಮಗಳ ಬಯಕೆಯುಂಟಾಗಲಾರಂಭ ವಾಯಿತು. ಇದೊಂದು ವಿಲಕ್ಷಣವಾದ ಬಯಕೆಯೆಂದು ತಿಳಿದು ಆನಂದರಾಯನು—ಸ್ವಭಾವವಾಗಿ ತಾನೂ ಧರ್ಮಪ್ರಿಯನೇ ಆಗಿದ್ದದ ರಿಂದ—ತನ್ನಿಂದಾದಷ್ಟು ಮಟ್ಟಿಗೆ ಆ ಬಯಕೆಯನ್ನು ಪೂರ್ಣಮಾಡಿ ದನು. ಕ್ರಿ. ೧೭೩೫ ರಲ್ಲಿ ಆ ಗರ್ಭದಿಂದ ಈ ನಮ್ಮ ಕಥಾನಾಯಕಿ ಯಾದ ಅಹಲ್ಯಾಬಾಯಿಯ ಜನನವಾಯಿತು.

## ವಿವಾಹ

ಕೆಲವು ವರ್ಷಗಳ ಮೇಲೆ ಮಹಾರಾಷ್ಟ್ರರ ಸೇನೆಯು ಗುಜರಾಥ, ಮಾಳವ ಮೊದಲಾದ ದೇಶಗಳನ್ನು ಬಡಿದು ಖಾರ್ಪಡಿಯೆಂಬ ಊರ ಹತ್ತಿರ ಬಂದಿಳಿದಿತ್ತು. ಆ ಸೇನೆಯ ಪ್ರಸಿದ್ಧ ಯೋಧನಾದ ಮತ್ತು ಇಂದೂರಿನ ಅಧಿಪತಿಯಾದ ಮಲ್ಹಾರಿರಾಯನೆಂಬವನು ಊರೊಳಗಿನ ಒಂದು ಮಾರುತಿಯ ದೇವಾಲಯದಲ್ಲಿ ಬೀಡುಬಿಟ್ಟುಕೊಂಡಿದ್ದನು. ಅಹಲ್ಯಾಬಾಯಿಗೆ ಓದು ಕಲಿಸುತ್ತಿದ್ದ ಒಬ್ಬ ಬ್ರಾಹ್ಮಣನು ಆ ಯೋಧನ ಬಳಿಯಲ್ಲಿ ಮಾತಾಡುತ್ತ ಕುಳಿತಿದ್ದಾಗ ಅಹಲ್ಯಾಬಾಯಿಯು ಸಲಿಗೆ ಯಿಂದ ತಾನೂ ತನ್ನ ಉಪಾಧ್ಯಾಯನ ಬಳಿಗೆ ಬಂದು ಕೂತು ಕೊಂಡಳು. ಆ ಹುಡುಗಿಯ ಕಾಂತಿಮಯವಾದ ಕಣ್ಣುಗಳನ್ನೂ ತೇಜಃಪುಂಜವಾದ ಮುಖವನ್ನೂ ನೋಡುತ್ತಲೇ ಮಲ್ಹಾರಿರಾಯನಿಗೆ ಆಕೆಯನ್ನು ತನ್ನ ಸೊಸೆಯಾಗಿ ಮಾಡಿಕೊಳ್ಳಬೇಕೆಂಬ ತವಕವುಂಟಾ ಯಿತು. ಮಲ್ಹಾರಿರಾಯನಿಗೆ ಖಂಡೇರಾಯನೆಂಬ ಒಬ್ಬ ಮಗನಿದ್ದು ಅವನೂ ಯೋಧಾಗ್ರಣಿಯಾಗಿದ್ದನು. ಆನಂದರಾಯನು ತನ್ನ ಸಮಾನಸ್ಕಂಧನಲ್ಲದಿದ್ದರೂ ಆ ಹುಡುಗಿಯ ಸಲ್ಲಕ್ಷಣಕ್ಕೆ ಪರವಶನಾಗಿ ಮಲ್ಹಾರಿರಾಯನು ಆ ಹುಡುಗಿಯನ್ನು ತನ್ನ ಮಗನಿಗೆ ತಂದುಕೊಂಡು ಪುಣೆಯಲ್ಲಿ ಒಳ್ಳೇ ವೈಭವದಿಂದ ವಿವಾಹವನ್ನು ನಡೆಯಿಸಿದನು.

## ಸೊಸೆತನ

ಅಹಲ್ಯಾಬಾಯಿಯು ಗಂಡನ ಮನೆಗೆ ಬಂದಮೇಲೆ ಅತ್ತೆ ಮಾವಂದಿರು ಮೊದಲಾದವರನ್ನೆಲ್ಲ ಬಹು ಚೆನ್ನಾಗಿ ಅನುವರ್ತಿಸಿ

ಕೊಂಡಿದ್ದಳು. ಆಕೆ ಪ್ರತಿದಿನವೂ ಚಿಕ್ಕಂದಿನಲ್ಲಿ ಕಲಿತ ಓದುಬರಹ ವನ್ನು ಸದುಪಯೋಗ ಮಾಡಿಕೊಂಡು ಭಾರತೀಯಜೀವಜ್ಯೋತಿ ಗಳಾದ ರಮಣಿಯರ ಪವಿತ್ರ ಚರಿತ್ರೆಗಳನ್ನೂ ಭಾರತ ರಾಮಾಯಣಾದಿ ಪುರಾಣಗಳನ್ನೂ ಪಾರಾಯಣ ಮಾಡುತ್ತ ಯೋಗ್ಯರಾದ ಬ್ರಾಹ್ಮಣ ರಲ್ಲಿ ಅರ್ಥವಿಚಾರ ಮಾಡುತ್ತ ಮನಸ್ಸಿನ ಸಾತ್ವಿಕತೆಯನ್ನು ಬೆಳೆಸಿ ಕೊಳ್ಳುತ್ತಿದ್ದದ್ದಲ್ಲದೆ ತಾನು ಗರ್ಭದಲ್ಲಿದ್ದಾಗ ತಾಯಿಗೆ ದಾನಧರ್ಮಗಳ ಬಯಕೆಯಾದದ್ದು ತನ್ನ ಪ್ರಕೃತಿಯೇ ಎಂಬದನ್ನು ತೋರಿಸುವಂತೆ ಕೈದಣಿಯುವಹಾಗೆ ದಾನಧರ್ಮಗಳನ್ನು ಮಾಡಿ ಪುಣ್ಯವನ್ನು ಗಳಿಸು ತ್ತಿದ್ದಳು. ಚಿಕ್ಕವಯಸ್ಸಿನಲ್ಲಿಯೇ ಈಕೆಯ ಹೊಟ್ಟೆಯಲ್ಲಿ ಒಬ್ಬ ಮಗನೂ ಒಬ್ಬ ಮಗಳೂ ಹುಟ್ಟಿದರು.

## ವೈಧವ್ಯ

ಅದೇನು ದೇಶದ ಹಿತಕ್ಕೋ ಅಥವಾ ಅಹಲ್ಯಾಬಾಯಿಯ ದುಃಖಕ್ಕೋ ಹೇಳಲಾಗುವದಿಲ್ಲ; ಅಹಲ್ಯಾಬಾಯಿಯ ಗಂಡನಾದ ಖಂಡೇರಾಯನು ಕ್ರಿ. ೧೭೫೪ ರಲ್ಲಿ ಕುಂಭೇರವೆಂಬ ದುರ್ಗವನ್ನು ಸ್ವಾಧೀನ ಮಾಡಿಕೊಳ್ಳುವ ಸಡಗರದಲ್ಲಿ ವೀರಸ್ವರ್ಗವನ್ನೈದಿದನು. ಸ್ತ್ರೀಯರಿಗೆ ವೈಧವ್ಯಕ್ಕಿಂತ ಹೆಚ್ಚಿನ ದುಃಖವಿಲ್ಲ. ಆಗ ಅಹಲ್ಯಾ ಬಾಯಿಗೆ ಅಪಾರವಾದ ದುಃಖವು ಪ್ರಾಪ್ತವಾಯಿತು. ಮಹಾಸಾಧ್ವೀ ಶಿರೋಮಣಿಯಾದ ಅಹಲ್ಯಾಬಾಯಿಯು ಪತಿವಿಯೋಗದಿಂದ ನಿಂದ್ಯ ವಾದ ಈ ದೇಹವನ್ನು ಇಟ್ಟುಕೊಂಡಿರಬಾರದೆಂದು ಸಹಗಮನವನ್ನು ನಿಶ್ಚಯಿಸಿದಳು. ತಮ್ಮ ವೃದ್ಧಾಪ್ಯಕಾಲದಲ್ಲಿ ಸೊಸೆಯೂ ಅಂತರ್ಧಾನ ಳಾದರೆ ತಮ್ಮ ಜೀವಿತವೂ ನಿಲ್ಲಲಾರದೆಂದು ಮುಂತಾಗಿ ಪುತ್ರವಿಯೋಗ ದಿಂದ ಪರಿಪೀಡಿತರಾದ ಮಲ್ಹಾರಿರಾಯನೂ ಅವನ ಹೆಂಡತಿಯೂ ಮರುಕಹುಟ್ಟುವಂತೆ ಅಂಗಲಾಚಿ ಹೇಳಿಕೊಂಡದ್ದರಿಂದ ಅಹಲ್ಯಾ ಬಾಯಿಯು ಉಪಾಯಾಂತರವಿಲ್ಲದೆ ತನ್ನ ಮನಸ್ಸನ್ನು ತಿರುಗಿಸಿಕೊಳ್ಳ ಬೇಕಾಯಿತು. ಮಗನ ಮರಣಾನಂತರದಲ್ಲಿ ಅತ್ಯಂತ ದುಃಖಿತನಾದ ಮಲ್ಹಾರಿರಾಯನು ಆ ಇಂದೂರ ಸಂಸ್ಥಾನದ ಆಡಳಿತದ ಭಾರವನ್ನೆಲ್ಲ ಸೊಸೆಯ ಮೇಲೆ ಹಾಕಿ ತಾನು ದಂಡಿನ ಯಾಜಮಾನ್ಯವನ್ನು ಮಾತ್ರ

ನೋಡಿಕೊಂಡು ಕಾಲವನ್ನು ನೂಕುತ್ತಿದ್ದನು. ಅಹಲ್ಯಾಬಾಯಿಗೆ ಧಾರ್ಮಿಕ ಪ್ರವೃತ್ತಿಯೇ ವಿಶೇಷವಾಗಿದ್ದರೂ ಪಾಲಿಗೆ ಬಂದದ್ದು ಪಂಚಾಮೃತವೆಂಬಂತೆ ಭಾವಿಸಿ ಆಕೆಯು ರಾಜ್ಯಭಾರವನ್ನು ಉತ್ಸಾಹದಿಂದ ವಹಿಸಿ ಪ್ರಜೆಗಳಿಗೆ ತಾಯರಕ್ಷಣೆಯ ಗುಣವಿಶೇಷಗಳನ್ನು ವ್ಯಕ್ತ ಮಾಡಿದಳು.

## ಪುತ್ರವಿಯೋಗ ದುಃಖ

ಈ ಲೋಕದಲ್ಲಿ ದುಃಖದ ಮಿಶ್ರವಿಲ್ಲದೆ ಶುದ್ಧಸುಖವು ಸಿಕ್ಕುವದೇ ಇಲ್ಲ. ದುರ್ದೈವದಿಂದ ಮಲ್ಲಾರಿರಾಯನೂ ಕ್ರಿ. ೧೭೬೫ ರಲ್ಲಿ ದಿವಂಗತನಾದನು. ಅಹಲ್ಯಾಬಾಯಿಯು ತನ್ನ ಮುದ್ದುಮಗನಾದ ಮಾಲೇರಾಯನನ್ನು ಸಿಂಹಾಸನದ ಮೇಲೆ ಕೂಡಿಸಿದಳು. ಅದೇನು ದುರ್ದೈವವೋ! ಮಾಲೇರಾಯನು ಅಹಲ್ಯಾಬಾಯಿಗೆ ತಕ್ಕಮಗನಾಗಿರಲಿಲ್ಲ. ಧರ್ಮವೆಂದರೆ ಅವನಿಗೆ ಅವಮಾನವಾಗುತ್ತಿತ್ತು. ತನ್ನ ತಾಯಿಯ ಧರ್ಮಪ್ರವೃತ್ತಿಯು ಮಗನಿಗೆ ಸ್ವಲ್ಪಮಾತ್ರವೂ ಸರಿಬೀಳುತ್ತಿರಲಿಲ್ಲ. ಆದರೂ ತಾಯಿಗೆ ವಿರುದ್ಧವಾಗಿ ನಡೆಯುವ ಧೈರ್ಯವಾಗದೆ ಅವನು ಸುಮ್ಮನಿರಬೇಕಾಗಿತ್ತು. ಹಾಗೆ ಸುಮ್ಮನಿದ್ದರೂ ನೆಟ್ಟಗಿತ್ತು. ಸುಮ್ಮನಿರದೆ ಅವನು ಒಳಗೆ ಚೇಳುಗಳನ್ನಿಟ್ಟಿರುವ ಜೋಡುಗಳನ್ನೂ ಹಾವುಗಳನ್ನಿಟ್ಟಿರುವ ಕಲಶಗಳನ್ನೂ ಬ್ರಾಹ್ಮಣರಿಗೆ ದಾನಮಾಡಿ ಅದರ ಉಪಹತಿಯಿಂದ ಅವರು ಬೆಂದುಬೆಂಡಾಗುತ್ತಿರುವದನ್ನು ನೋಡಿ ತಾನು ಕೇಕೆಯನ್ನು ಹಾಕಿಕೊಂಡು ನಗುತ್ತಿದ್ದನು. ಈ ನಡವಳಿಕೆಗಳು ಅಹಲ್ಯಾಬಾಯಿಗೆ ಮರ್ಮಸ್ಥಾನಕ್ಕೆ ನಟ್ಟ ಬಾಣದಂತೆ ಅತ್ಯಂತ ದುಃಖವನ್ನು ಕೊಡುತ್ತಿದ್ದವು. ಇದಲ್ಲದೆ ಅವನು ಹೊಡೆದು ಬಡಿದು ಕೈಕೆಳಗಿನವರನ್ನು ಮೇಲೆ ಬೀಳಿಸಿಕೊಳ್ಳುತ್ತಿದ್ದನು. ಸುದೈವದಿಂದಲೋ ದುರ್ದೈವದಿಂದಲೋ ಅಂತು ಅವನು ಸಿಂಹಾಸನವೇರಿದ ಬಹು ಸ್ವಲ್ಪ ದಿವಸಗಳಲ್ಲಿಯೇ ಇಹಲೋಕವನ್ನು ಬಿಟ್ಟು ತೆರಳಿದನು. ಅವನು ಒಬ್ಬ ಶಿಲ್ಪಿಗೆ ನಿಷ್ಕಾರಣವಾಗಿ ಕ್ರೂರ ದಂಡನೆಯನ್ನು ಕೊಟ್ಟದ್ದರಿಂದ ಆ ಶಿಲ್ಪಿಯು ಪಿಶಾಚಿಯಾಗಿ ಇವನನ್ನು ತೆಗೆದುಕೊಂಡು ಹೋದನೆಂದು ಹೇಳುತ್ತಾರೆ. ಆ ಪಿಶಾಚಿಯ ಬಾಧಾನಿವೃತ್ತಿಗಾಗಿ ಅಹಲ್ಯಾಬಾಯಿಯು ಪುತ್ರಪ್ರೇಮಪರವಶಳಾಗಿ ಎಷ್ಟೋ ಹರಕೆಗಳನ್ನು ಹೊತ್ತಳು. ಪುತ್ರ

ವಾತ್ಸಲ್ಯವು ಹೇಗೆ ತಪ್ಪೀತು! ಕೊನೆಗೆ ಮಾಲೇರಾಯನ ಮರಣವು ಅಹಲ್ಯಾಬಾಯಿಗೆ ಪುತ್ರಶೋಕವನ್ನುಂಟು ಮಾಡಿಯೇ ಮಾಡಿತು. ಇದೊಂದೇ ಅಲ್ಲ; ಸಂಸಾರವೆಲ್ಲ ದುಃಖಮಯವೆಂದೇ ಆಕೆಗೆ ತೋರಿ ತೆಂದು ಹೇಳಬಹುದು. ಆಕೆಯ ಮಗಳು ಚಿಕ್ಕ ವಯಸ್ಸಿನಲ್ಲಿಯೇ ಗಂಡನನ್ನು ಕಳೆದುಕೊಂಡು ಸಹಗಮನಮಾಡಿದ್ದನ್ನು ಕಣ್ಣಾರೆ ನೋಡ ಬೇಕಾದ ಸಂದರ್ಭವು ಆಕೆಗೆ ಒದಗಿತು. ಧಾರ್ಮಿಕಪ್ರವೃತ್ತಿಯ ಪ್ರಭಾವದಿಂದ ಆಕೆ ಈ ದುಃಖವನ್ನು ತಡೆದುಕೊಳ್ಳಲಾಯಿತೇ ಹೊರತು ಅದರ ಬೆಂಬಲವಿಲ್ಲದಿದ್ದರೆ ಆಕೆ ನೆಲಾಹಿಡಿದು ನರಳುತ್ತಿರಲೇಬೇಕಾಗಿತ್ತು.

## ಕುತಂತ್ರಕ್ಕೆ ಮಂತ್ರ

ಮಾಲೇರಾಯನು ಸತ್ತಮೇಲೆ ಹಿಂದಿನಿಂದ ಪ್ರಬಲಾಧಿಕಾರಿಯಾಗಿದ್ದ ಗಂಗಾಧರರಾಯನೆಂಬವನು ಈ ಸಂಧಿಕಾಲದಲ್ಲಿ ತನ್ನ ಸ್ವಾರ್ಥವನ್ನು ಸಾಧಿಸಿಕೊಳ್ಳುವ ಯೋಚನೆಯನ್ನು ನಡಿಸಿದನು. ಯಾವನಾದರೊಬ್ಬ ಸಣ್ಣ ಹುಡುಗನನ್ನು ದತ್ತಕನನ್ನಾಗಿ ಮಾಡಿ ಆ ಹುಡುಗನ ಪರವಾಗಿ ಅಧಿಕಾರವನ್ನು ನಡೆಸುತ್ತ ಮೆಲ್ಲಗೆ ಸಂಸ್ಥಾನವನ್ನು ಎತ್ತಿಹಾಕಬೇಕೆಂದು ಅವನ ಯುಕ್ತಿ. ಇದಕ್ಕಾಗಿ ಅವನು ಇಂದೂರ ಸಂಸ್ಥಾನಕ್ಕೆ ಸರಿಯಾದ ಉತ್ತರಾಧಿಕಾರಿಯಿಲ್ಲದ್ದರಿಂದ ಅದನ್ನು ಮರಾಠಾ ರಾಜ್ಯಕ್ಕೆ ಸೇರಿಸಿಕೊಂಡರೆ ಹೆಚ್ಚಿನ ದ್ರವ್ಯಲಾಭವೇ ಮೊದಲಾದದ್ದಾಗುವದೆಂದು ಮುಂತಾಗಿ ಪೇಶ್ವೆಯ ತಮ್ಮನಾದ ರಘುನಾಥರಾಯನೆಂಬವನಿಗೆ ದುರಾಶೆಯನ್ನು ಹಚ್ಚಿ ದಂಡೆತ್ತಿ ಬರುವಂತೆ ಅವನಿಗೆ ಮಂತ್ರಾಕ್ಷತೆಯನ್ನು ಕಳುಹಿಸಿದನು. ಇಂಥ ಸಮಯವು ಸಿಕ್ಕಿದರೆ ಸಾಕೆಂಬ ಜಗಳಗಂಟಿಗನಾದ ರಘುನಾಥರಾಯನು ಒಡನೆ ದಂಡಿನೊಡನೆ ಹೊರಟು ಕ್ಷಿಪ್ರಾನದಿಯ ತೀರಕ್ಕೆ ಬಂದಿಳಿದನು. ಅದಕ್ಕೆ ಎದೆಗುಂದದೆ ಅಹಲ್ಯಾಬಾಯಿಯು ದೇವರ ಮೇಲೆ ಭಾರವನ್ನು ಹಾಕಿ ತನ್ನೊಡನೆ ಮಿತ್ರತ್ವದಲ್ಲಿದ್ದ ಮಹಾಯೋಧರನ್ನೆಲ್ಲ ಒಟ್ಟುಗೂಡಿಸಿಕೊಂಡು ಅವರ ಹೃದಯದಲ್ಲಿ ವೀರಾವೇಶವನ್ನು ತುಂಬಿ ತಾನು ಸೊಂಟಕ್ಕೆ ಕತ್ತಿಯನ್ನು ಬಿಗಿದು ಕೈಯಲ್ಲಿ ಶಸ್ತ್ರವನ್ನು ಹಿಡಿದು ಪೇಶ್ವೆಯ ಸಿಂಹಾಸನವನ್ನು ಕೂಡ ಧೂಳೆಬ್ಬಿಸಬಲ್ಲೆನೆಂದು ಶಪಥವನ್ನು ತೊಟ್ಟು

ಯುದ್ಧಯಾತ್ರೆಯನ್ನು ಕೈಕೊಂಡಳು. ದಂಡೋಪಾಯಕ್ಕಿಂತಲೂ ಸಾಮೋಪಾಯ ಮೊದಲಾದದ್ದನ್ನು ಮಾಡಿನೋಡಬೇಕೆಂದು ಆಕೆಗೆ ತೋರಿತು. ಆಗ ಆಕೆ "ರಾಯರೇ, ನಾನೇನೋ ಯುದ್ಧಕ್ಕೆ ಹೊರಟು ಬಂದಿದ್ದೇನೆ; ಯುದ್ಧದಲ್ಲಿ ನಾನು ಸೋತರಂತೂ ಸ್ತ್ರೀಮಾತ್ರಳಾದ ನನಗೆ ಅದು ಅಪಮಾನವಲ್ಲ. ಮುಖದ ಮೇಲೆ ಪುರುಷಚಿಹ್ನವಾದ ಕುಡಿಮೀಸೆಗಳನ್ನು ಹೊತ್ತಿರುವ ನೀವು ಸೋತರೆ ಮಾತ್ರ ಭೂಮಿಯನ್ನು ಬಗೆದು ಅಡಿಗಿಕೊಳ್ಳಬೇಕಾಗುವದು. ವಿಚಾರಮಾಡಿ ಮುಂದೆ ಬನ್ನಿರಿ" ಎಂದು ಒಂದು ಪತ್ರವನ್ನು ಬರೆದು ಕಳುಹಿಸಿದಳು. ಅಷ್ಟುಹೊತ್ತಿಗೆ ಪೇಶ್ವೆ ಮಾಧವರಾಯನೂ ತನ್ನ ತಮ್ಮನ ಅವಿವೇಕಕ್ಕೆ ಮರುಗಿ ಅವನನ್ನು ಹಿಂದಿರುಗಹೇಳಿ ಬುದ್ಧಿವಾದವನ್ನು ಬರೆದು ಕಳುಹಿಸಿದನು. ಬಂದಮೇಲೆ ಹೇಗಾದರೂ ಮರ್ಯಾದೆಯನ್ನುಳಿಸಿಕೊಳ್ಳಬೇಕೆಂದು ಆಗ ರಘುನಾಥರಾಯನು ತಾನು ಪುತ್ರವಿಯೋಗದ ದುಃಖದ ಸಮಾಧಾನವನ್ನು ಮಾಡುವದಕ್ಕೆ ಬಂದೆನೆಂದು ಸುಳ್ಳುಬೊಗಳಿ ಅಹಲ್ಯಾಬಾಯಿಯ ಬಳಿಗೆ ಬಂದು ಅರಮನೆಯಲ್ಲಿ ನಾಲ್ಕು ದಿನಗಳಿದ್ದು ಆಕೆಯ ಮನಸ್ಸನ್ನು ಅನುವರ್ತಿಸಿ ನಡೆದು ಊರಿಗೆ ಹೋದನು. ಇತ್ತ ಇದೆಲ್ಲ ಗಂಗಾಧರರಾಯನ ಕುತಂತ್ರವೆಂದು ತಿಳಿದರೂ ಅಹಲ್ಯಾಬಾಯಿಯು ಅವನು ಅನುಭವಶಾಲಿಯಾದ ಅಧಿಕಾರಿಯೆಂಬದನ್ನು ಲಕ್ಷವಿಟ್ಟು ಮುಂದೆ ಸ್ವಾಮಿಭಕ್ತನಾಗಿರುವಂತೆ ಅವನಿಗೆ ಬುದ್ಧಿವಾದವನ್ನು ಹೇಳಿ ಅವನನ್ನು ತನ್ನ ಮುಖ್ಯಮಂತ್ರಿಯಾಗಿ ಮಾಡಿಕೊಂಡಳು. ಅವನೂ ಆ ಯೋಗವನ್ನು ಬಹು ದಿವಸ ಅನುಭವಿಸಲಿಲ್ಲ. ಅವನು ಮಾಡಿದ ತಪ್ಪು ಅವನ ಮನಸ್ಸನ್ನೇ ತಿನ್ನುವದಕ್ಕೆ ಮೊದಲುಮಾಡಿದ್ದರಿಂದ ಅವನು ಅಲ್ಲಿರಲಾರದೆ ಸನ್ಯಾಸಿಯಾಗಿ ಹೋಗಿಬಿಟ್ಟನು. ಅಹಲ್ಯಾಬಾಯಿಯು ಆಮೇಲೆ ತಮ್ಮವರಲ್ಲಿ ಪ್ರಸಿದ್ಧ ಯೋಧನಾಗಿದ್ದ ತುಕಾಜಿಯೆಂಬವನನ್ನು ದತ್ತಪುತ್ರನನ್ನಾಗಿ ಮಾಡಿಕೊಂಡು ರಾಜ್ಯಭಾರವನ್ನು ಸಾಗಿಸಿದಳು.

## ಧರ್ಮಬುದ್ಧಿ

ಅಹಲ್ಯಾಬಾಯಿಯ ಪ್ರತಿಯೊಂದು ಕಾರ್ಯದಲ್ಲಿಯೂ ಆಕೆಯ ಧರ್ಮಬುದ್ಧಿಯು ಎದ್ದುಕಾಣುತ್ತಿತ್ತು. ಉದಾಹರಣಾರ್ಥವಾಗಿ

ನೋಡಿರಿ: ಒಮ್ಮೆ ತುಕೋಜಿಯು ನಿಸ್ಸಂತಾನಳಾದ ಒಬ್ಬ ವಿಧವೆಯ ಆಸ್ತಿಯನ್ನೆಲ್ಲ ಉತ್ತರಾಧಿಕಾರಿ ಇಲ್ಲದ್ದೆಂದು ತನ್ನ ಭಂಡಾರಕ್ಕೆ ಸೇರಿಸಿಕೊಂಡುಬಿಟ್ಟದ್ದನು. ಆ ವಿಧವೆಯು ಅಹಲ್ಯಾಬಾಯಿಯ ಬಳಿಗೆ ಆ ದೂರನ್ನು ತಂದಳು. ಸಂತಾನವಿಲ್ಲದೆ ಹೋದರೆ ತನ್ನ ಪತಿಯ ಸದ್ಗತಿಗಾಗಿ ಆಕೆ ಆ ಹಣವನ್ನು ವೆಚ್ಚಮಾಡತಕ್ಕದ್ದೆಂದು ನಿಶ್ಚಯಿಸಿ ಅಹಲ್ಯಾಬಾಯಿಯು ಆ ಹಣವನ್ನೆಲ್ಲ ಹಿಂದಕ್ಕೆ ಕೊಡಿಸಿ ಮುಂದೆ ಹೀಗೆ ಮಾಡಬೇಡವೆಂದು ತುಕಾಜಿಗೆ ಬುದ್ಧಿಯನ್ನು ಹೇಳಿದಳು. ಇನ್ನೊಮ್ಮೆ ಒಬ್ಬಾಕೆಯು ತನಗೆ ಮಕ್ಕಳಿಲ್ಲದ್ದರಿಂದ ತಾನಾಗಿಯೇ ತನ್ನ ಸರ್ವಸ್ವವನ್ನೂ ತಂದೊಪ್ಪಿಸಲು ಅದನ್ನು ಧರ್ಮಕಾರ್ಯಕ್ಕೆ ವಿನಿಯೋಗಿಸ ಹೇಳಿ ಅಹಲ್ಯಾಬಾಯಿಯು ಅದನ್ನು ಆಕೆಗೇ ಹಿಂದಿರುಗಿಕೊಟ್ಟಳು. ಆ ಹಣದಿಂದಲೇ ಈಗ ಒಂದುಕಡೆ ನರ್ಮದಾನದಿಗೆ ಸುಂದರವಾದ ಸೋಪಾನಗಳಾಗಿರುವವು. ಹೀಗೆ ಅಹಲ್ಯಾಬಾಯಿಯು ಜನರಿಗೆ ತಮ್ಮ ಹಣವನ್ನು ಧರ್ಮಕಾರ್ಯದಲ್ಲಿ ವಿನಿಯೋಗಿಸುವ ಮಾರ್ಗದ ಕಡೆಗೆ ಕೈತೋರಿಸುತ್ತಿದ್ದಳೇ ಹೊರತು ಬೆಂದಮನೆಗೆ ಹಿರಿದದ್ದೇ ಲಾಭವೆಂದು ಹಣಕ್ಕೆ ಹೆಣದಂತೆ ಬಾಯಿಬಿಟ್ಟು ಕಂಡಕಂಡವರ ಆಸ್ತಿಯನ್ನು ಬಂಡಾರಕ್ಕೆ ಕೂಡಿಸಿ ಕುಪ್ಪೆಹಾಕಿಕೊಳ್ಳುತಿರಲಿಲ್ಲ.

## ಹೆಸರುವಾಸಿ

ಈ ಬಗೆಯ ನಡವಳಿಕೆಗಳಿಂದ ಅಹಲ್ಯಾಬಾಯಿಯ ಹೆಸರೆಂದರೆ ಮನೆಯಲ್ಲಿ ತಾಯ ಹೆಸರು ಹೇಗೋ ಹಾಗೆ ಭರತಖಂಡದಲ್ಲೆಲ್ಲ ತನ್ನ ಪರಿಮಳವನ್ನು ಬೀರುತ್ತಿತ್ತು. ಆಕೆಯಲ್ಲಿ ಪೂಜ್ಯಬುದ್ಧಿಯನ್ನಿಟ್ಟವರುವವರಿಗೆ ಮಾತ್ರವೇ ಅಲ್ಲದೆ ಶತ್ರುಗಳಿಗೆ ಕೂಡ ಅಹಲ್ಯಾಬಾಯಿಯಲ್ಲಿ ಏನೋ ವಿಶೇಷವಿರಬೇಕೆಂದೆನಿಸುತ್ತಿತ್ತು. ಅಹಲ್ಯಾಬಾಯಿಯ ಹೆಸರುವಾಸಿಯನ್ನು ಕೇಳಿ ರಘುನಾಥರಾಯನ ಹೆಂಡತಿಗೆ ಮೈಯುರಿಯುಂಟಾಯಿತು. ರಘುನಾಥರಾಯನು ಒಮ್ಮೆ ದಂಡೆತ್ತಿಹೋಗಿ ಅಹಲ್ಯಾಬಾಯಿಯ ಸೌಜನ್ಯಕ್ಕೆ ಸೋತು ಮುಖವನ್ನು ಮುಚ್ಚಿಕೊಂಡು ಬಂದಿದ್ದನು. ರಘುನಾಥರಾಯನ ಹೆಂಡತಿಗೆ ತಾನು ಬಹು ಸುಂದರಿಯೆಂಬುದೊಂದೇ ಹೆಮ್ಮೆ. ಆದ್ದರಿಂದ ಅಹಲ್ಯಾಬಾಯಿಯು ಹೇಗಿರುವಳೆಂಬುದನ್ನು ನೋಡಿಕೊಂಡು ಬರಹೇಳಿ ಆಕೆಯು ತನ್ನ ಒಬ್ಬ ಸಖಿಯನ್ನು

ಕಳುಹಿಸಿದಳು. ಕ್ಷುದ್ರವಾದ ದೇಹದ ಸೌಂದರ್ಯಕ್ಕಿಂತ ಹೆಚ್ಚಿನದೇನೂ ಇಲ್ಲದ ಪಶುಸ್ವಭಾವದ ಆಕೆಗೆ ಅಹಲ್ಯಾಬಾಯಿಯ ಸೌಂದರ್ಯವಿನ್ನೆಷ್ಟಿರಬಹುದೋ ಎಂಬ ನಿರೀಕ್ಷಣೆಯಿತ್ತು. ಅಹಲ್ಯಾಬಾಯಿಯ ಪ್ರಾಶಸ್ತ್ಯವು ಅಶಾಶ್ವತವಾದ ದೇಹದಿಂದ ಬಂದದ್ದಲ್ಲವೆಂದೂ ಶ್ರೇಷ್ಠವಾದ ಮನೋಧರ್ಮದಿಂದ ಬಂದದ್ದೆಂದೂ ಆಕೆಗೆ ತಿಳಿದಿರಲಿಲ್ಲ. ಎಲ್ಲರಂತೆ ಆಕೆ ಅಹಲ್ಯಾಬಾಯಿಯ ದರ್ಶನಕ್ಕೆ ಬಂದಳು. ಅಹಲ್ಯಾಬಾಯಿಯು ಅಷ್ಟೇನೂ ರೂಪವತಿಯಾಗಿರಲಿಲ್ಲ; ಕೃಶಾಂಗಿಯಾಗಿ ಶ್ಯಾಮಲವರ್ಣದವಳಾಗಿದ್ದಳು. ಆಕೆಗೆ ಮೈಮೇಲೆ ಎರಡು ಶುಭ್ರವಸನ, ಕೈಲೊಂದು ಜಪಮಾಲೆ. ಇದನ್ನು ನೋಡಿ ಆ ಸಖಿಯು ಹೀಗೆಂದು ತನ್ನೊಡತಿಗೆ ಹೇಳಿದಾಗ ಆ ಒಡತಿಯು "ಸೌಂದರ್ಯದಲ್ಲಿ ತನ್ನನ್ನು ಮೀರಿಸಿಲ್ಲವಷ್ಟೆ ?" ಎಂದು ಸಮಾಧಾನ ಮಾಡಿಕೊಂಡಳು.

## ಸ್ತುತಿಯಲ್ಲಿ ಅನಾದರ

ಲೋಕದಲ್ಲಿ ಧರ್ಮಪ್ರವೃತ್ತಿಯೂ ವೈರಾಗ್ಯವೂ ಎಷ್ಟೋ ಜನಕ್ಕೆ ಬರುವದುಂಟು; ಆದರೆ ಆ ತಮ್ಮ ವಿಶಿಷ್ಟಗುಣಗಳನ್ನು ಜನರು ಹೊಗಳುವಾಗ ಮುಖಗಳನ್ನು ಅರಳಿಸಿಕೊಳ್ಳದೆ ಇರುವವರು ಕಡಿಮೆ. ಅಹಲ್ಯಾಬಾಯಿಯು ಆ ನಿಯಮಕ್ಕೆ ಹೊರತಾಗಿದ್ದಳು. ಒಬ್ಬ ಪಂಡಿತನು ಅಹಲ್ಯಾಬಾಯಿಯನ್ನು ಒಳ್ಳೇ ಅಲಂಕಾರಿಕಭಾಷೆಯಿಂದ ಸ್ತೋತ್ರ ಮಾಡಿ ಗ್ರಂಥವನ್ನು ಬರೆದು ತಂದನು. ಅಹಲ್ಯಾಬಾಯಿಯು ಅದನ್ನು ನರ್ಮದಾನದಿಯಲ್ಲಿ ಬಿಸಾಡಿದ್ದಲ್ಲದೆ ನರಸ್ತುತಿಯಲ್ಲಿ ನಾಲಿಗೆಯನ್ನು ನೋಯಿಸಿಕೊಳ್ಳುವದಕ್ಕಿಂತ ಹರಸ್ತುತಿಯಲ್ಲಿ ಸಾರ್ಥಕಮಾಡಿಕೊಳ್ಳೆಂದು ಅವನನ್ನು ದಾರಿಗೆಹಚ್ಚಿ ಕಳುಹಿಸಿದಳು.

## ಗುಣಾನುವಾದ

ಅಹಲ್ಯಾಬಾಯಿಯಲ್ಲಿ ಸ್ತ್ರೀತ್ವ ಮತ್ತು ಪುರುಷತ್ವಗಳೆರಡೂ ಏಕೀಭವಿಸಿದ್ದವೆಂದರೆ ಅತ್ಯುಕ್ತಿಯಾಗಲಾರದು. ಧಾನಧರ್ಮಗಳಲ್ಲಿಯೂ ಪ್ರಜಾರಕ್ಷಣೆಯಲ್ಲಿಯೂ ಆಕೆಯ ಸ್ತ್ರೀಸ್ವಭಾವಸಿದ್ಧವಾದ ಕೋಮಲತ್ವವು ವ್ಯಕ್ತವಾಗುತ್ತಿತ್ತಲ್ಲದೆ ಪ್ರತಿಭಟಿಸುವ ಪ್ರತಿಕಕ್ಷಿಗಳ ಮೇಲೆ ಕ್ಷಾತ್ರ

ಸ್ವಭಾವವೂ ಅಷ್ಟೇ ಉಜ್ವಲವಾಗಿ ವಿಜೃಂಭಿಸುತ್ತಿತ್ತು. ದುರಾಶಾ ಪಿಶಾಚಗ್ರಸ್ತರಾದ ಅನೇಕ ರಾಜರು ಒಬ್ಬರ ಹಿಂದೊಬ್ಬರು ವಿಜಯ ಯಾತ್ರೆಗಳನ್ನು ಹೊರಡಿಸುತ್ತಿದ್ದ ಆ ಕಾಲದಲ್ಲಿ ಅಹಲ್ಯಾಬಾಯಿಯು ಶಾಂತತೆಯನ್ನು ಕಾಯ್ದುಕೊಂಡದ್ದು ಅತ್ಯಂತ ಪ್ರಶಂಸನೀಯವಾಗಿರುವದು. ಇದಲ್ಲದೆ ಇಂಗ್ಲೀಷರಿಗೆ ಸಹ ಅಜಯ್ಯರಾದ ಭಿಲ್ಲರೆಂಬವರು ಕಾಡುಮೇಡುಗಳಲ್ಲಿ ಅಡಗಿಕೊಂಡು ದಾರಿಯನ್ನು ಕಟ್ಟಿ ಮಾರ್ಗಸ್ಥರನ್ನು ಬಡಿದು ಬಾಚಿಕೊಳ್ಳುತ್ತಿದ್ದರು. ಅಹಲ್ಯಾಬಾಯಿಯು ತನ್ನ ಸಾಮರ್ಥ್ಯದಿಂದ ಅವರೆಲ್ಲರನ್ನೂ ಹಿಡಿತರಿಸಿ ಅವರಿಗೆ ವಿವೇಕವನ್ನು ಹೇಳಿ ಅವರು ಮುಂದೆ ಹೊಲಮನೆಗಳನ್ನು ಮಾಡಿಕೊಂಡು ಉತ್ತಮ ಗೃಹಸ್ಥರಾಗುವಂತೆ ಎಲ್ಲ ವ್ಯವಸ್ಥೆಗಳನ್ನೂ ಕಲ್ಪಿಸಿಕೊಟ್ಟಳು; ಮತ್ತು ಮುಂದೆ ಮಾರ್ಗಗಳಲ್ಲಿ ಕಳ್ಳಕಾಕರ ಹೆಸರಿಲ್ಲದಂತಾಗುವದಕ್ಕೆ ಅವರನ್ನೇ ಹೊಣೆಗಾರರನ್ನಾಗಿ ಮಾಡಿದಳು. ಕಳ್ಳತನ ಮೊದಲಾದ ಅಪರಾಧಗಳನ್ನು ಮಾಡಿದವರು ಕೈಗೆ ಸಿಕ್ಕಿದಾಗ ಅವರನ್ನು ಹೊಡೆದು ಬಡೆದು ಸೆರೆಯಲ್ಲಿಟ್ಟು ಹಿಂಸೆಮಾಡುವ ರಾಜರನೇಕರುಂಟು. ಅವರ ಮನಸ್ಸಿನ ಪ್ರವೃತ್ತಿಯನ್ನು ತಿರುಗಿಸಿ ನಿಜವಾಗಿ ಅವರ ಉನ್ನತಿಗೆ ಸಾಧನವನ್ನು ಕಲ್ಪಿಸುವ ರಾಜರು ಕಡಿಮೆ. ಈ ಕೊರತೆಯನ್ನು ಅಹಲ್ಯಾಬಾಯಿಯು ಹೋಗಲಾಡಿಸಿ ತೋರಿಸಿದಳು. ರಾಜನೀತಿಯಲ್ಲಿಯೂ ಈಕೆಯ ಉದಾಹರಣೆಯು ಅನುಕರಣೀಯವಾಗಿರುವದು. ಈಕೆಯು ತನ್ನ ರಾಯಭಾರಿಗಳನ್ನು ಇತರ ದೇಶಗಳಲ್ಲಿಟ್ಟು ಇತರ ಎಲ್ಲ ದೇಶಗಳ ರಾಯಭಾರಿಗಳಿಗೂ ತನ್ನಲ್ಲಿ ಅವಕಾಶವನ್ನು ಕೊಟ್ಟು ಎಲ್ಲರೊಡನೆಯೂ ಮೈತ್ರಿಯನ್ನು ಬೆಳೆಸಿದ್ದಳು. ಈಕೆಯಲ್ಲಿ ಕ್ಷಾತ್ರತೇಜಸ್ಸು ಇದ್ದರೂ ಸಹ ಪ್ರಾಣಿಹಿಂಸೆಯಾಗುವಂಥ ಯುದ್ಧಕ್ಕೆ ಹೆಚ್ಚು ಪ್ರೋತ್ಸಾಹವನ್ನು ಕೊಡದೆ ಪ್ರೇಮದ ಪ್ರಭಾವದಿಂದಲೇ ಶತ್ರುಗಳ ಮನಸ್ಸನ್ನು ಮೆತ್ತಗೆ ಮಾಡುತ್ತಿದ್ದಳು. ಆದ್ದರಿಂದ ಈಕೆಗೆ ಹೆಚ್ಚಿನ ಸೈನ್ಯವೇ ಬೇಕಾಗುತ್ತಿರಲಿಲ್ಲ. ಈಕೆ ದೇಶಾಂತರದ ಕಲಾವಿದರನ್ನು ಕರೆಸಿಕೊಂಡು ಅವರಿಗೆಲ್ಲ ಗೌರವವನ್ನು ಕೊಡುತ್ತಿದ್ದಳು. ತಾನು ವಿಧವೆಯಾದ್ದರಿಂದ ವಿಧವೆಯರ ಎಲ್ಲ ವ್ರತಗಳನ್ನೂ ಸಂಪೂರ್ಣವಾಗಿ ಪಾಲಿಸುತ್ತಿದ್ದಳು; ಭೋಗಾತಿಶಯದ ಕಡೆಗೆ ಎಂದಿಗೂ ಮನಸ್ಸು ಹಾಕಿದವಳಲ್ಲ. ಪ್ರತಿದಿನವೂ

ಮನೆಯಲ್ಲಿ ಭಗವಂತನ ಅರ್ಚಾವಿಶೇಷಗಳನ್ನು ಬಗೆಬಗೆಯಾಗಿ ನಡೆಸುತ್ತ ಅತಿಥಿಗಳಲ್ಲಿ, ಅನಾಥರಲ್ಲಿ, ಅಂಗಹೀನರಲ್ಲಿ ಮತ್ತು ದರಿದ್ರರಲ್ಲಿ ಕೂಡ ಭಗವದ್ಭಾವನೆಯನ್ನಿಟ್ಟು ಅವರ ಯೋಗಕ್ಷೇಮವನ್ನು ನೋಡುವದೇ ಭಗವತ್ಸೇವೆಯೆಂದು ಈಕೆ ತಿಳಿದಿದ್ದಳು. ಭಂಡಾರದಲ್ಲಿ ಹೆಚ್ಚು ಹಣ ಗುಡ್ಡೆಯಾಗಿ ಬಿದ್ದದ್ದನ್ನು ನೋಡಬೇಕೆನ್ನುವದಕ್ಕಿಂತಲೂ ಪ್ರಜೆಗಳಲ್ಲಿ ಹೆಚ್ಚು ಹಣವು ರಾಸಿಯಾಗಿ ಕೂಡಿದ್ದನ್ನು ನೋಡಬೇಕೆಂಬುದರ ಕಡೆಗೇ ಈಕೆಯ ಲಕ್ಷ್ಯವಿತ್ತು. ಪ್ರಜೆಗಳಿಂದ ಬಂದ ಹಣವನ್ನು ತನ್ನ ದೇಹೇಂದ್ರಿಯಾದಿಗಳ ಉಪಭೋಗಕ್ಕೆ ಉಪಯೋಗ ಮಾಡುವದು ಪಾಪವೆಂದು ತಿಳಿದು ಆಕೆ ಅದನ್ನು ಪ್ರಜೆಗಳ ಉಪಯೋಗಾರ್ಥವಾದ ದುರ್ಗಗಳೂ, ಮಾರ್ಗಗಳೂ, ದೇವಾಲಯಗಳೂ, ಕೆರೆಕಟ್ಟೆಗಳೂ, ಸತ್ರಗಳೂ, ಅರವಟ್ಟಿಗೆಗಳೂ, ಘಟ್ಟ ಮೊದಲಾದವುಗಳೂ- ಇವುಗಳನ್ನು ಮಾಡುವುದಕ್ಕೂ, ಭಗವತ್ಪ್ರೀತ್ಯರ್ಥವಾದ ದಾನ-ಧರ್ಮಗಳಿಗೂ ಉಪಯೋಗಿಸುತ್ತಿದ್ದಳು. ಯಾವ ಪ್ರಸಿದ್ಧ ತೀರ್ಥಗಳಲ್ಲಿಯೂ ಕ್ಷೇತ್ರಗಳಲ್ಲಿಯೂ ಅಹಲ್ಯಾಬಾಯಿಯ ಧರ್ಮಕಾರ್ಯವು ಯಾವದಾದರೊಂದು ರೀತಿಯಲ್ಲಿ ಇಲ್ಲದೆ ಇಲ್ಲವೇ ಇಲ್ಲ. ಇವುಗಳಿಗೆಲ್ಲ ಬೇಕಾಗುವ ಹೆಚ್ಚುಗಟ್ಟಲೆಯ ಹಣದ ಭಾರವನ್ನು ಪ್ರಜೆಗಳ ಮೇಲೆ ಹೇರದೆ ಆಕೆ ಮಿತವ್ಯಯದಿಂದ ಕೂಡಿಸುತ್ತಿದ್ದಳು. ಆಕೆ ತನ್ನ ಕಡೆಯಿಂದ ಅನೇಕ ಕಡೆ ದೇವರಿಗೆ ಗಂಗಾಭಿಷೇಕವಾಗುವಂತೆ ಮಾಡಿದಳು; ಮೀನು ಮೊದಲಾದವುಗಳಿಗಾಗಿ ನರ್ಮದೆಯಲ್ಲಿ ಪ್ರತಿದಿನವೂ ಅಕ್ಕಿಯನ್ನು ಹಾಕುತ್ತಿದ್ದಳು. ತಾನು ಪ್ರಯಾಣ ಮಾಡುವಾಗ ಉಡಿಯಲ್ಲಿ ಬೀಜಗಳನ್ನಿಟ್ಟುಕೊಂಡಿದ್ದು ನೆರಳಿಲ್ಲದ ಕಡೆಗಳಲ್ಲಿ ಅವುಗಳನ್ನು ಊರುವಳು. ಈ ಪ್ರಕಾರ ಮಹಾತಪಸ್ವಿನಿಯೂ ಮಹಾ-ರಾಜ್ಞಿಯೂ ಆಗಿದ್ದ ಅಹಲ್ಯಾಬಾಯಿಯು ಕ್ರಿ. ೧೭೯೫ ರಲ್ಲಿ ನಶ್ವರವಾದ ದೇಹವನ್ನು ಬಿಟ್ಟು ಶಾಶ್ವತ ಸುಖಪ್ರದವಾದ ಸದ್ಗತಿಯನ್ನು ಪಡೆದಳು. ಅವಳ ಸ್ಥೂಲದೇಹವು ಅಂತರ್ಧಾನವಾದರೂ ಕೀರ್ತಿದೇಹದ ರೂಪದಲ್ಲಿ ಆಕೆಯು ಸಮಸ್ತ ಭಾರತೀಯರ ಹೃದಯದಲ್ಲಿಯೂ ಉಚ್ಚ ಸ್ಥಾನದಲ್ಲಿ ಶಾಶ್ವತವಾಗಿ ವಿರಾಜಿಸುತ್ತಿರುವಳು. ಗಯಾದಲ್ಲಿ ವಿಷ್ಣುಮಂದಿರದ ಹತ್ತರದಲ್ಲಿರುವ ಈಕೆಯ ವಿಗ್ರಹಕ್ಕೆ ಈಗಲೂ ದೇವಯೋಗ್ಯವಾದ ಷೋಡಶೋಪಚಾರಗಳು ನಡೆಯುತ್ತಿರುವವು.

# ರಣಜಿತ ಸಿಂಗ

## ಹುಟ್ಟು

ಶೌರ್ಯ, ಧೈರ್ಯ, ಔದಾರ್ಯ ಮೊದಲಾದ ಕೆಲವು ಗುಣಗಳು ತಮ್ಮ ಪ್ರತಿಭೆಯನ್ನು ತೋರಿಸದೆ ಎಂದೆಂದಿಗೂ ಮೂಲೆಯಲ್ಲಿರುವದಿಲ್ಲವೆಂಬ ನಿಯಮವನ್ನು ರಣಜಿತಸಿಂಗನ ಚರಿತ್ರೆಯು ವ್ಯಕ್ತಮಾಡುವದು. ರಣಜಿತಸಿಂಗನು ಬುದ್ಧ ಸಿಂಗನೆಂಬ ಒಬ್ಬ ದೊಡ್ಡ ಕಲಿಯ ಮನೆತನದವನು. ರಣಜಿತಸಿಂಗನ ತಂದೆಯ ಹೆಸರು ಮಹಾನಸಿಂಗ; ತಾಯಿಯ ಹೆಸರು ರಾಜಕುವರ. ಈ ವೀರದಂಪತಿಗಳಿಂದ ರಣಜಿತಸಿಂಗನು ಕ್ರಿ. ೧೭೮೦ ರಲ್ಲಿ ಗುಜರಾನವಾಲಾದಲ್ಲಿ ಹುಟ್ಟಿದನು.

## ವಿವಾಹ

ಮಹಾನಸಿಂಗನು ಯಾವಾಗಲೂ ಯುದ್ಧಯಾತ್ರೆಯಲ್ಲಿಯೇ ಕಾಲವನ್ನು ಕಳೆಯತಕ್ಕವನಾಗಿದ್ದದರಿಂದ ರಣಜಿತಸಿಂಗನಿಗೆ ಬಾಲ್ಯಶಿಕ್ಷಣವೆಂದರೆ ಯುದ್ಧವಿದ್ಯೆಯೇ ಆಗಿತ್ತು. ಮಹಾನಸಿಂಗನು ಕಂಡಕಂಡವರ ಮೇಲೆ ಕೋಳತೀಟಿಯನ್ನು ತೀರಿಸುತ್ತ ಹೇಗಾದರೂ ಮಾಡಿ ತನ್ನದೊಂದು ರಾಜ್ಯವನ್ನು ಮಾಡಬೇಕೆಂಬ ಸಾಹಸದಲ್ಲಿದ್ದನು. ತನ್ನ ನೆರೆಯ ಕನ್ಹೋರ ಮನೆತನದ ಮುಖ್ಯಸ್ಥನಾದ ಹಕೀಕತನು ತನಗೆ ಬರಬೇಕಾದ ಕಪ್ಪಗಾಣಿಕೆಯನ್ನು ಬಾಹುಬಲದಿಂದ ಸೆಳೆದುಕೊಳ್ಳುವದಕ್ಕಾಗಿ ಜಮ್ಮುವಿನ ಅರಸನ ಮೇಲೆ ದಾಳಿಯನ್ನು ಎಬ್ಬಿಸಬೇಕಾಗಿದ್ದಿತು. ಅದಕ್ಕೆ ನೆರವಾಗುವೆನೆಂದು ಒಪ್ಪಿದ ಮಾನಸಿಂಗನು ಹಕೀಕತನ ದಾರಿಯನ್ನು ಕಾಯದೆ ತಾನೇ ಜಮ್ಮುವಿನ ಮೇಲೆ ನುಗ್ಗಿ ಅಲ್ಲಿಯ ಅರಸನನ್ನು ಬಡಿದು ಎಲ್ಲವನ್ನೂ ತಾನೇ ಬಾಚಿಕೊಂಡು ಬಂದುಬಿಟ್ಟನು. ಆಮೇಲೆ ಹಕೀಕತನು ಮಾನಸಿಂಗನ ಮೇಲೆ

ಕೈಮಾಡಿ ಸೋತುಹೋಗಿ ಕೆಲವು ದಿನಗಳ ಮೇಲೆ ಸತ್ತುಹೋದನು. ಆದರೆ ಅವನ ಕಡೆಯ ಜಯಸಿಂಗನೆಂಬವನು ಮತ್ತೆ ಹೆಮ್ಮೆಯಿಂದ ಬಂದು ಯುದ್ಧದಲ್ಲಿ ಸಂಪೂರ್ಣವಾಗಿ ಸೋತು ತನ್ನ ರಾಜ್ಯವನ್ನು ಮಹಾನಸಿಂಗನ ಕಡೆಯವರ ಪಾಲು ಮಾಡಬೇಕಾಯಿತಲ್ಲದೆ ತನ್ನ ಮುಮ್ಮಗಳಾದ ಮಹ್ತಾಬಕೂರಳನ್ನು ರಣಜಿತಸಿಂಗನಿಗೆ ಉಪಾಯನ ದಾನವಾಗಿ ಕೊಟ್ಟು ತಾನು ಪಾರಾಗಬೇಕಾಯಿತು. ಹೀಗೆ ರಣಜಿತ ಸಿಂಗನಿಗೆ ಮಹ್ತಾಬಕೂರಳು ಪತ್ನಿಯಾದಳು.

## ಮೊದಲು ತಲೇತಾಕಿದ್ದು

ಯುದ್ಧದಲ್ಲಿಯೇ ತೊಳಲಿ ಬಳಲುತ್ತಿದ್ದ ಮಹಾನಸಿಂಗನು ಸ್ವಲ್ಪ ದಿವಸಗಳಲ್ಲಿಯೇ ಒಂದು ಯುದ್ಧದಲ್ಲಿ ಬಲಿಯಾದನು. ರಣಜಿತಸಿಂಗ ನಿನ್ನೂ ಹೆಚ್ಚಿನ ಪ್ರಾಯಕ್ಕೆ ಬಂದಿರಲಿಲ್ಲ. ಅತ್ತ ರಣಜಿತನ ಮಾವ ನಾದ ಜಯಸಿಂಗನೂ ಸ್ವರ್ಗಸ್ಥನಾಗಿದ್ದನು. ಈ ಸಮಯದಲ್ಲಿ ರಣಜಿತನ ಅತ್ತೆಯಾದ ಸಾದಕುವರಳು ತನ್ನ ರಾಜ್ಯವನ್ನೂ ರಣಜಿತನ ರಾಜ್ಯವನ್ನೂ ಎರಡನ್ನೂ ಸೇರಿಸಿಕೊಂಡು ತಾನೇ ಅಧಿನಾಯಕಿಯಾಗಿ ರಣಜಿತನನ್ನು ತನ್ನ ಹಿಡಿಯಲ್ಲಿಟ್ಟುಕೊಂಡಳು. ಆಕೆ ಬರೀ ಇಷ್ಟ ರಿಂದಲೂ ಸುಮ್ಮನಿರಲಿಲ್ಲ. ರಾಮಗಡಿಯಾ ಸಂಸ್ಥಾನದ ಮೇಲೆ ದಂಡನ್ನು ನಡೆಸಿ ಆ ರಾಜನನ್ನು ಮೆತ್ತಗೆಮಾಡಿದಳು ಆ ರಾಜನು ಅಮೃತಸರದಲ್ಲಿದ್ದ ಸೀಕಜನರ ಗುರುವಿಗೆ ಶರಣುಹೋದನು. ಆ ಗುರು ಆಜ್ಞೆಮಾಡಿದರೂ ಸಾದಕುವರಳು ಹಿಮ್ಮೆಟ್ಟಲಿಲ್ಲ. ಆದರೆ ದೈವ ಯೋಗದಿಂದ ಬಿಯಾಸ ನದಿಯು ಉಕ್ಕೇರಿ ಆಕೆಯ ದಂಡಿನ ಬಹಳ ಭಾಗವು ನೀರಪಾಲಾಯಿತು. ಆಮೇಲೆ ಉಪಾಯಾಂತರವಿಲ್ಲದೆ ಆಕೆಯು ರಣಜಿತನೊಡನೆ ಬಾಡಿದ ಮುಖದಿಂದ ಗುಜರಾನವಾಲಾಕ್ಕೆ ಹಿಂದಿರುಗಬೇಕಾಯಿತು.

## ಅತ್ತೆಯನ್ನು ಮೂಲೆಗೆ ಕೂಡಿಸಿದ್ದು

ಸಾದಕುವರಳ ಪಾರುಪತ್ಯವು ರಣಜಿತಸಿಂಗನಿಗೆ ಸರಿಹೋಗಲಿಲ್ಲ. ಆಕೆಯ ಕೈಯ ಬೊಂಬೆಯಾಗಿರುವದು ತನ್ನ ಘನತೆಗೆ ಸರಿಯಲ್ಲ ವೆಂದು ಅವನಿಗೆ ತೋರಿತು. ಆದ್ದರಿಂದ ಮಹ್ತಾಬಕೂರಳ ಹೊಟ್ಟೆಯಲ್ಲಿ

ಹುಟ್ಟಿರುವ ತನ್ನ ಹಿರಿಯ ಮಗನನ್ನು ಕನ್ಹೀರ ಮನೆತನಕ್ಕೆ ದತ್ತಕವಾಗಿ ಮಾಡಿಕೊಂಡು ರಾಜ್ಯವನ್ನೆಲ್ಲಾ ಬಿಟ್ಟುಕೊಟ್ಟು ತೆಪ್ಪಗೆ ದೇವರ ಧ್ಯಾನದಲ್ಲಿ ಕಾಲವನ್ನು ಕಳೆಯಬೇಕೆಂದು ಅತ್ತೆಯಾದ ಸಾದಕುವರಳಿಗೆ ರಣಜಿತಸಿಂಗನು ಸೂಚನೆ ಮಾಡಿದನು. ಅದಕ್ಕೆ ಆಕೆಯು ಸಮ್ಮತಿಸದೆ ರಣಜಿತಸಿಂಗನನ್ನೇ ಮೂಲೆಗೆ ಕೂಡಿಸಬೇಕೆಂದು ಇಂಗ್ಲೀಷರಿಗೆ ಶರಣು ಹೋಗುವ ಯೋಚನೆಯನ್ನು ಮಾಡಿದಳು. ಇದಕ್ಕೆ ಅವಕಾಶವನ್ನು ಕೊಡದೆ ರಣಜಿತನು ಆಕೆಯನ್ನು ಸೆರೆಯಲ್ಲಿಟ್ಟು ತನ್ನ ಉದ್ದೇಶವನ್ನು ಸಾಧಿಸಿಕೊಂಡನು.

## ರಾಜನೆನಿಸಿದ್ದು

ಬಿಯಾಸ ನದಿಯ ಬಳಿಯಲ್ಲಿ ಆದ ಸೇನೆಯ ನಷ್ಟ ಮೊದಲಾದ್ದರಿಂದ ಎಂಥವರಿಗಾದರೂ ಎದೆಯೊಡೆಯುವ ಹಾಗಿತ್ತು. ಆದರೆ ರಣಜಿತನು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಪೂರ್ವಾಧಿಕವಾದ ಉತ್ಸಾಹದಿಂದ ತನ್ನ ಕಾರ್ಯವನ್ನು ಸಾಧಿಸುವ ನಿಶ್ಚಯವನ್ನು ಮಾಡಿದನು. ಇದೇ ಸಮಯದಲ್ಲಿಯೇ ಕಾಬೂಲಿನಿಂದ ಶಹಾಝಮಾರನೆಂಬವನು ಬಂದು ಲಾಹೋರನ್ನು ಸ್ವಾಧೀನ ಮಾಡಿಕೊಂಡು ಇನ್ನೂ ಸುತ್ತುಮುತ್ತು ಹಣಿಕಿಹಾಕುವದರಲ್ಲಿದ್ದನು. ಅವನ ಮೇಲೆ ಕೈಮಾಡ ಹೋಗುವದು ಶಕ್ಯವಿರಲಿಲ್ಲವಾದ್ದರಿಂದ ರಣಜಿತನು ತಾನಾಗಿ ಅವನಿಗೆ ಕಾಣಿಕೆಯನ್ನು ಕಳುಹಿಸಿ ಅವನ ಮೈತ್ರಿಯನ್ನು ಸಂಪಾದಿಸಿದನು. ಇಷ್ಟರಲ್ಲಿಯೇ ಅಫಘಾನಸ್ತಾನದಲ್ಲಿ ಗದ್ದಲವೆದ್ದಿತ್ತು. ಅದನ್ನಡಗಿಸುವದಕ್ಕಾಗಿ ಶಹಾಝಮಾರನು ಹಿಂದಕ್ಕೆ ಹೊರಟನು. ದಾರಿಯಲ್ಲಿ ಜೀಲಂನದಿಯು ಉಕ್ಕಿ ಏರಿದ್ದರಿಂದ ಅವನ ಹನ್ನೆರಡು ತೋಫುಗಳು ಅಲ್ಲಿ ಕೃಷ್ಣಾರ್ಪಣವಾದವು. ಆಗ ಶಹಾಝಮಾರನು ಆ ತೋಫುಗಳನ್ನು ತೆಗಿಸಿಕೊಟ್ಟರೆ ಲಾಹೋರ ಪ್ರಾಂತವನ್ನೆಲ್ಲಾ ಬಿಟ್ಟುಕೊಟ್ಟು ನಿನ್ನ ರಾಜತ್ವವನ್ನು ಒಪ್ಪಿಕೊಳ್ಳುತ್ತೇನೆಂದು ರಣಜಿತಸಿಂಗನಿಗೆ ಹೇಳಲು ರಣಜಿತನು ಬಹು ಸಾಹಸಮಾಡಿ ಆ ತೋಫುಗಳನ್ನು ತೆಗೆಸಿಕೊಟ್ಟನು. ಇದರಿಂದ ಅವನಿಗೆ ಲಾಹೋರ ಪ್ರಾಂತವೂ ಸಿಕ್ಕಿತು; ರಾಜನೆಂಬ ಪದವಿಯೂ ಬಂತು. ಹೀಗೆ ಅವನು ದಿನದಿನಕ್ಕೆ ಗರಿಗಟ್ಟಿಕೊಳ್ಳುವದಕ್ಕಾರಂಭಿಸಿದನು.

## ಅಮೃತಸರವನ್ನು ಗೆದ್ದದ್ದು

ರಣಜಿತನ ಅಜ್ಜನ ಪಾಲಿಗೆ ಬಂದಿದ್ದ ಒಂದು ತೋಪು ಅಮೃತ ಸರದಲ್ಲಿ ಆಳುತ್ತಿದ್ದ ಭಂಗೀಸರದಾರರಲ್ಲಿತ್ತು. ಈಗ ಅದನ್ನು ತನಗೆ ಕೊಡಬೇಕೆಂದು ರಣಜಿತನು ಕೇಳಿದನು. ರಣಜಿತನು ಮುಂದು ಮುಂದಕ್ಕೆ ಬರುತ್ತಿದ್ದದ್ದು ಅವರಿಗೆ ಬೇಡವಾಗಿತ್ತು. ಆದರೆ ರಣಜಿತನ ಮೇಲೆ ಕೈಮಾಡುವ ಎದೆಯು ಅವರಿಗೆ ಇರಲಿಲ್ಲ. ಆದ್ದರಿಂದ ಅವ ರೆಲ್ಲರೂ ಸೇರಿ ರಣಜಿತನನ್ನು ಮೋಸದಿಂದ ಕೊಲ್ಲಬೇಕೆಂದು ಒಳ ಸಂಚನ್ನು ನಡೆಯಿಸಿದ್ದರು. ಇವರ ತಲೆಯ ಪಿತ್ಥವನ್ನಿಳಿಸಬೇಕೆಂದು ರಣಜಿತನು ಅಲ್ಲಿಗೆ ದಂಡೆತ್ತಿಹೋಗಿ ಅಮೃತಸರವನ್ನು ಸ್ವಾಹಾಕಾರ ಮಾಡಿಬಿಟ್ಟನು.

## ಹಾವಳಿ

ರಣಜಿತನಿಗೆ ಇನ್ನು ಪಂಜಾಬಿನಲ್ಲಿ ಶತ್ರುಗಳು ಯಾರೂ ಉಳಿ ದಿರಲಿಲ್ಲ. ತೋಳತೀಟೆಯು ಹೆಚ್ಚಾಗಿದ್ದ ರಣಜಿತನು ಸುಮ್ಮನೆ ಕೂತು ಮಾಡುವದೇನೆಂದು ಕಾಲುಕೆರೆದು ಜಗಳವನ್ನು ತೆಗೆಯುವ ಉದ್ಯೋ ಗಕ್ಕೆ ಬಿದ್ದನು. ಆ ಕಾಲದಲ್ಲಿ ನಕ್ಕಾಯಿ ಮನೆತನವೆಂಬದೊಂದು ಮನೆತನವು ಪ್ರಸಿದ್ಧವಾಗಿತ್ತು. ರಣಜಿತನು ಅದರ ಮುಖ್ಯಸ್ಥನಿಗೆ ತನ್ನ ಆಸ್ಥಾನದಲ್ಲಿರೆಂದು ಹೇಳಿದನು. ಅವನು ಸಮ್ಮತಿಸಲಿಲ್ಲ. ಆದ್ದರಿಂದ ಒಡನೆ ಅವನ ಮೇಲೆ ಹರಿದುಹೋಗಿ ರಣಜಿತನು ಅವನ ಸರ್ವಸ್ವವನ್ನೂ ಸೂರೆಮಾಡಿಕೊಂಡುಬಿಟ್ಟನು. ಮತ್ತು ಮುಲ್ತಾನಿ ನಲ್ಲಿದ್ದ ಮುಸಲ್ಮಾನರ ಮೇಲೆ ಎಷ್ಟೋವೇಳೆ ಹೋಗಿ ಪರಾಕ್ರಮದಿಂದ ಅವರ ಹಣವನ್ನು ಸುಲಿದುಕೊಂಡದ್ದಲ್ಲದೆ ಕೊನೆಗೆ ಅವರನ್ನೆಲ್ಲಾ ಸದೆದು ಆ ರಾಜ್ಯವನ್ನೇ ನುಂಗಿ ನೀರುಕುಡಿದನು. ಇಷ್ಟರಲ್ಲಿ ಇವನ ಉದ್ಧಟತನಕ್ಕೆ ಒಂದನುಕೂಲತೆ ದೊರೆಯಿತು. ಇಂಗ್ಲೀಷರಿಗೆ ಹೆದರಿ ಓಡಿಬಂದ ಹೋಳಕರನು ರಣಜಿತನ ಆಶ್ರಯವನ್ನು ಬಯಸಿ ಬಂದನು. ಆಗ ಇಂಗ್ಲೀಷರ ಪರಿಸ್ಥಿತಿಯು ಒಂದುಬಗೆಯ ನಾಜೂಕಾಗಿದ್ದದರಿಂದ ಇಂಗ್ಲೀಷರು ರಣಜಿತಸಿಂಗನನ್ನು ತಮ್ಮ ಕಡೆಗಿಟ್ಟುಕೊಳ್ಳಬೇಕಾಗಿತ್ತು. ಆದ್ದರಿಂದ ಹೋಳಕರನಿಗೆ ಆಶ್ರಯ ಕೊಡದಿದ್ದರೆ ಸೀಕರ ಸಂಸ್ಥಾನ

ಗಳೊಳಗೆ ತಮ್ಮ ದಂಡು ಕೈಹಾಕುವದಿಲ್ಲವೆಂದು ಇಂಗ್ಲೀಷರು ಹೇಳಿದರು. ರಣಜಿತಸಿಂಗನು ಅದಕ್ಕೊಪ್ಪಿ ನಿರಾತಂಕವಾಗಿ ಇತರ ಸಣ್ಣಪುಟ್ಟ ಎಷ್ಟೋ ಸಂಸ್ಥಾನಗಳನ್ನು ಬಾಯಲ್ಲಿ ಹಾಕಿಕೊಳ್ಳುವದಕ್ಕೆ ಈ ಸಂಧಿಯನ್ನು ಪಯೋಗಿಸಿಕೊಂಡನು. ಕಾಲಕರ್ಮಸಂಯೋಗದಿಂದ ಸ್ವಲ್ಪ ಕಾಲದಲ್ಲಿ ಇಂಗ್ಲೀಷರು ತಲೆಎತ್ತಿದರು. ಕೆಲವರು ರಜಪೂತ ಸಂಸ್ಥಾನಿಕರು ಅವರಿಗೆ ಶರಣುಹೋದರು. ಆಗ ಅವರು ಬಂದು ರಣಜಿತನ ತಲೆಯ ಮೇಲೆ ಮೆಟ್ಟಿ ಅವನು ತನ್ನ ಮೇರೆಯನ್ನು ಬಿಟ್ಟುಬರದಂತೆ ದಿಗ್ಬಂಧನಮಾಡಿದರು.

## ಕಾಶ್ಮೀರವನ್ನು ತೆಗೆದುಕೊಂಡದ್ದು

ಇಂಗ್ಲೀಷರ ಹೆದರಿಕೆಯಿಂದ ರಾಜಪುತ್ರಸ್ಥಾನಗಳ ಮೇಲೆ ಹೋಗುವದನ್ನು ಬಿಟ್ಟು ರಣಜಿತನು ಇತ್ತ ಕಾಶ್ಮೀರ ಮತ್ತು ಅಫಘಾನಸ್ಥಾನಗಳ ಮೇಲೆ ತನ್ನ ಬೆಳಕನ್ನು ಕೆಡಹುವ ಯೋಚನೆಯನ್ನು ಮಾಡಿದನು. ಅವನು ಕಾಶ್ಮೀರವನ್ನು ಗೆಲ್ಲುವದಕ್ಕೆ ಹೋಗಿ ನಾಲ್ಕೂರುಗಳನ್ನು ಕೈಯೊಳಗೆ ತೆಗೆದುಕೊಂಡಿರುವಾಗ ಅಫಘಾನಸ್ಥಾನದಿಂದ ಪತ್ತೇಖಾನನೆಂಬ ಸರದಾರನು ಅದೇ ಉದ್ದೇಶದಿಂದ ಬಂದನು. ಆಗ ರಣಜಿತನು ಕಾಶ್ಮೀರದ ಸುಲಿಗೆಯಲ್ಲಿ ಒಂದು ಪಾಲಿಗೊಪ್ಪಿ ತನ್ನ ಸೇನಾಪತಿಯನ್ನು ಖಾನನ ಸಹಾಯಕ್ಕೆ ಕೊಟ್ಟುಬಂದನು. ಆದರೆ ಖಾನನು ರಣಜಿತನಿಗೆ ಏನನ್ನೂ ಕೊಡದೆ ಆ ಸೇನಾಪತಿಯನ್ನು ಬರೀ ಕೈಯಲ್ಲಿ ಹಿಂದಕ್ಕೆ ಕಳುಹಿಸಿದನು. ಇದರಿಂದ ಸಿಟ್ಟಿಗೆದ್ದ ರಣಜಿತನು ಖಾನನ ಮೇಲೆ ದಂಡೆತ್ತಿ ಹೋಗಿ ಅವನ ಸೇನೆಯನ್ನು ನುಚ್ಚುನುರಿ ಮಾಡಿ ಕಾಶ್ಮೀರವನ್ನು ಹಿಡಿದುಕೊಳ್ಳುವದಕ್ಕೆ ಹೋದನು. ಅಷ್ಟರಲ್ಲಿ ಅಫಘಾನರು ರಣಜಿತನನ್ನು ಹೊಡೆದಟ್ಟಿಬಿಟ್ಟರು. ಆಗ ಯತ್ನವಿಲ್ಲದೆ ಜೋಲುಮುಖವನ್ನು ಹಾಕಿಕೊಂಡು ಬಂದರೂ ನಿರಾಶನಾಗದೆ ಮತ್ತೊಂದು ವೇಳೆಯನ್ನು ಸಾಧಿಸಿಕೊಂಡು ಹೋಗಿ ಕಾಶ್ಮೀರದಲ್ಲಿ ತನ್ನ ಧ್ವಜಸ್ತಂಭವನ್ನು ನಿಲ್ಲಿಸಿಯೇಬಿಟ್ಟನು.

## ಕಾಂಗ್ರಾ ಪಟ್ಟಣವನ್ನು ಕಸುಕೊಂಡದ್ದು

ಕಾಂಗ್ರಾದಲ್ಲಿ ಆಳುತ್ತಿದ್ದ ಸಾಸರಚಂದನೆಂಬ ರಾಜಪುತ್ರನು ತನ್ನ ಮೇಲೆ ನುಗ್ಗಿಬಂದಿರುವ ಘೂರ್ಕರನ್ನು ಹಿಮ್ಮೆಟ್ಟಿಸಿ ತನ್ನನ್ನು

ರಕ್ಷಿಸಬೇಕೆಂದು ಕೇಳಿಕೊಂಡಂತೆ ರಣಜಿತನು ಅಲ್ಲಿಗೆ ಹೋಗಿ ಘೂರ್ಕರಿಗೆ ತಮ್ಮ ಊರಿನ ದಾರಿಯನ್ನು ಹಿಡಿಸಿ ಕಾಂಗ್ರಾ ಕೋಟೆಯಲ್ಲಿ ತನ್ನ ಆಧಿಪತ್ಯವನ್ನು ಸ್ಥಾಪಿಸಿದನು. ಸಾಸರಚಂದನು ಸತ್ತಮೇಲೆ ಅವನ ಮಗನಾದ ಅನುರೋಧಚಂದನು ಆಸ್ಥಾನದಲ್ಲಿರಲು ರಣಜಿತನು ಆ ರಾಜಪುತ್ರಸಂತತಿಯ ಹೆಸರಿಲ್ಲದಂತೆ ಮಾಡಬೇಕೆಂದು ಯೋಚಿಸಿ ಆತನ ತಂಗಿಯನ್ನು ತನ್ನ ಮಂತ್ರಿಯ ಮಗನಿಗೆ ತಂದುಕೊಳ್ಳುವ ಸಂಚು ಮಾಡಿದನು. ಜಾತ್ಯಭಿಮಾನದಿಂದ ಅನುರೋಧಚಂದನು ಇದಕ್ಕೊಪ್ಪಲಿಲ್ಲ. ರಣಜಿತನು ಅವನನ್ನು ಓಡಿಸಿ ಅವನ ಇಬ್ಬರು ತಂಗಿಯರನ್ನು ತನ್ನ ಹೆಂಡತಿಯರನ್ನಾಗಿಯೇ ಮಾಡಿಕೊಂಡುಬಿಟ್ಟನು.

## ಅಫಘಾನರಿಗೆ ಮುಖಭಂಗ

ಖೈಬರ ಕಣಿವೆಯಿಂದ ಬರುವ ಅಫಘಾನರ ದಂಡಿಗೆ ದಾರಿ ಕೊಡಬಾರದೆಂದು ರಣಜಿತನು ಜಮರೂದೆವೆಂಬಲ್ಲಿ ಒಂದು ಕೋಟೆಯನ್ನು ಕಟ್ಟಿಸಿ ಅಲ್ಲಿ ತನ್ನ ಸುಭೇದಾರನನ್ನು ಇಟ್ಟಿದ್ದನು. ಇದನ್ನು ಹಾರಹೊಡೆಯಬೇಕೆಂದು ಅಮೀರನು ದೊಡ್ಡದಂಡನ್ನು ಕಳುಹಿಸಿದನು. ಇಲ್ಲಿ ಸೀಕರಿಗೂ ಅಫಘಾನರಿಗೂ ಯುದ್ಧದ ಮೇಲೆ ಯುದ್ಧಗಳಾಗುತ್ತ ಸೋಲುಗೆಲವುಗಳು ನಡೆಯುತ್ತಿರಲು ರಣಜಿತನು ತನ್ನ ದಂಡನ್ನು ಕಳುಹಿಸಿ ಅಫಘಾನರನ್ನು ಬಂದದಾರಿಗೆ ಸುಂಕವಿಲ್ಲದಂತೆ ಮಾಡಿ ತನ್ನ ಕೋಟೆಯನ್ನು ಬಲಪಡಿಸಿದನು.

## ಮರಣ

ಹೀಗೆ ಹುಟ್ಟಿಸಾಯುವವರೆಗೂ ರಾಜ್ಯವನ್ನು ಬೆಳೆಸುವ ಉದ್ಯೋಗದಲ್ಲಿಯೇ ತೊಡಗಿ ಎಲ್ಲೆಲ್ಲಿಯೂ ತನ್ನ ಮೇಲುಗೈಯನ್ನು ತೋರಿಸಿ ತನ್ನ ಸೈನಿಕರಿಗೆ ಫ್ರೆಂಚರಿಂದ ಶಿಕ್ಷಣವನ್ನು ಕೊಡಿಸಿ ಅಂತು ಪಂಜಾಬವನ್ನೆಲ್ಲಾ ತನ್ನ ಹಸ್ತದೊಳಯುಲ್ಲಡಗಿಸಿಕೊಂಡ ವೀರಾಗ್ರೇಸರನಾದ ಮಹಾರಾಜನಾಗಿ ರಣಜಿತನೆಂಬ ಹೆಸರನ್ನು ಸಾರ್ಥಕಮಾಡಿಕೊಂಡು ಪಂಜಾಬಿನ ಸಿಂಹವೆಂದು ಖ್ಯಾತಿಯನ್ನು ಪಡೆದ ರಣಜಿತನು ಕೊನೆಗೆ ೧೮೩೯ ರಲ್ಲಿ ಉತ್ಪನ್ನವಾದ ರೋಗದಿಂದ ಪೀಡಿತನಾಗಿ ಬಡಬಗ್ಗರಿಗೂ ಧರ್ಮೋಪದೇಶಕರಿಗೂ ಬೇಕಾದಹಾಗೆ ದಾನಧರ್ಮಗಳನ್ನು ಮಾಡಿ ದಿವಂಗತನಾದನು.

## ಗುಣಾನುವಾದ

ರಣಜಿತಸಿಂಗನು ಕುಳ್ಳನೂ ಮತ್ತು ತೆಳುವಾದ ದೇಹದವನೂ ಆಗಿದ್ದನು. ಅವನ ಎಡಗಣ್ಣು ಕುರುಡಾಗಿತ್ತು. ಅವನ ಮುಖದ ಮೇಲೆಲ್ಲಾ ಮೈಲಿಯ ಕಲೆಗಳಿದ್ದವು. ಅವನಿಗೆ ಕುದುರೆಯ ಸವಾರಿಯಲ್ಲಿಯೂ ಬೇಟೆಯಲ್ಲಿಯೂ ಬಹಳ ಪ್ರೀತಿ. ಇನ್ನು ಅವನ ಎದೆಗಾರತನವೂ ದೂರದರ್ಶಿತ್ವವೂ ಉದ್ಯೋಗಪರತೆಯೂ ಅವನ ಚರಿತ್ರೆಯಲ್ಲಿ ತಮಗೆ ತಾವೇ ಎದ್ದುಕಾಣುತ್ತವೆ. ಸಂಪಾದನೆಯ ಸಾಮರ್ಥ್ಯಕ್ಕೆ ಅನುಗುಣವಾಗಿ ಇವನಲ್ಲಿ ಔದಾರ್ಯವೂ ಚೆನ್ನಾಗಿತ್ತು. ಶರಣಾಗತರನ್ನು ಇವನು ಬಹು ಆದರದಿಂದ ಕಾಣುತ್ತಿದ್ದನು. ಒಮ್ಮೆ ಅಫಘಾನಸ್ಥಾನದ ಅರಸನಾದ ಷಾಷೂಜನು ಬಂದು ಮರೆಹೊಕ್ಕಾಗ ಅವನಲ್ಲಿದ್ದ ಕೋಹಿನೂರೆಂಬ ಮಹಾರತ್ನವು ರಣಜಿತಸಿಂಗನಿಗೆ ಲಭ್ಯವಾಯಿತು. ನಮ್ಮ ಕರ್ಣಾಟಕದಲ್ಲಿರುವ ಹಂಪೆಯಲ್ಲಿ ಹುಟ್ಟಿ ಲೋಕದಲ್ಲೆಲ್ಲಾ ಅಮೂಲ್ಯವೆನಿಸಿರುವ ಆ ರತ್ನವು ಈಗ ಇಂಗ್ಲೀಷ ಸಾರ್ವಭೌಮರ ಶಿರಸ್ಸನ್ನೇರಿ ವಿರಾಜಿಸುತ್ತಿರುವದು. ಇನ್ನು ಅವನ ವ್ಯಕ್ತಿವಿಶೇಷದ ಕಡೆಗೆ ಲಕ್ಷ್ಯವನ್ನು ಕೊಟ್ಟರೆ ಅವನು ಸ್ವಾರ್ಥಿಯೂ ಕುಡುಕನೂ ಅನೀತಿಪರನೂ ಆಗಿದ್ದನು. ಒಮ್ಮೆ ತಾಯಿಯನ್ನು ಕೂಡ ತನ್ನ ವಿರುದ್ಧವೆಂದು ಸೆರೆಯಲ್ಲಿ ಇಟ್ಟಿದ್ದನು. ಇಷ್ಟೆಲ್ಲಾ ಇದ್ದರೂ ಜನರನ್ನೆಲ್ಲಾ ಒಟ್ಟುಗೂಡಿಸಿ ಅಸಾಮಾನ್ಯ ಸಾಹಸದಿಂದ ತನ್ನ ಜನ್ಮಭೂಮಿಯನ್ನು ಮುಂದಕ್ಕೆತಂದ ಶ್ಲಾಘನೆಗೆ ಮಾತ್ರ ಇವನು ಸಂಪೂರ್ಣಪಾತ್ರನು. ಒಬ್ಬನು ಸಾಧಿಸಿದ ಕಾರ್ಯವು ಚಿರಸ್ಥಾಯಿಯಾಗುವದು ದೇವರ ಕಡೆಯ ಮಾತೆಂದು ಅದನ್ನು ಒಂದುಕಡೆಗೆ ಬಿಟ್ಟುನೋಡಿದರೆ ಸಾಮಾನ್ಯವಾದ ಮನುಷ್ಯ ಪ್ರಯತ್ನದಿಂದ ದೊಡ್ಡದೊಂದು ರಾಜ್ಯವನ್ನು ಸ್ಥಾಪನೆ ಮಾಡಿದಂಥ ರಣಜಿತನ ಎಷ್ಟೋ ಗುಣಾತಿಶಯಗಳು ನಿಜವಾಗಿ ಅನುಕರಣೀಯಗಳಾಗಿವೆ.

---

# ಮಹಾರಾಣಿ ಲಕ್ಷ್ಮೀಬಾಯಿ

## ಹುಟ್ಟು

ದೈವಭಕ್ತಿಯುಳ್ಳ ಮನೆತನದಲ್ಲಿ ದೇಶಭಕ್ತರ ಜನ್ಮವಾಗಿಯೇ ತೀರುವದೆಂದು ಸೃಷ್ಟಿಯ ನಿಯಮವೇ ಆಗಿರುವಂತೆ ತೋರುತ್ತದೆ. ಕೃಷ್ಣಾತೀರದಲ್ಲಿ ಸತಾರಾ ಜಿಲ್ಲೆಗೆ ಸೇರಿದ ವಾಯಿ ಎಂಬ ಊರಿನಲ್ಲಿ ಮೋರೋಪಂತ ತಾಂಬೇ ಎಂಬ ಹೆಸರಿನ ಒಬ್ಬ ಕರ್ಹಾಡೆ ಬ್ರಾಹ್ಮಣನಿದ್ದನು. ಈತನು ದೈವೀಸಂಪತ್ತಿನಿಂದ ಕೂಡಿದವನಾಗಿದ್ದನು; ಮತ್ತು ಆಗಿನ ಕಾಲದಲ್ಲಿ ಶ್ರೀಮಂತನೂ ಸಾಧುಪುರುಷನೂ ಆದವನೆಂದು ಹೆಸರು ಹೊಂದಿದ ಚಿಮಾಜಿ ಅಪ್ಪಾ ಎಂಬಾತನ ಆಶ್ರಿತಮಂಡಲಿಯಲ್ಲೊಬ್ಬನಾಗಿದ್ದನು. ಚಿಮಾಜಿ ಅಪ್ಪಾನು ಕಾಶೀಯಾತ್ರೆಗೆ ಹೊರಟ ಒಂದು ಸಮಯದಲ್ಲಿ ಮೋರೋಪಂತನು ತನ್ನ ಧರ್ಮಪತ್ನಿಯಾದ ಭಾಗೀರಥೀಬಾಯಿಯೊಡನೆ ಆತನ ಪರಿವಾರದಲ್ಲಿ ಸೇರಿ ಹೋಗಿದ್ದನು. ಮೋರೋಪಂತನು ಕಾಶಿಯಲ್ಲಿದ್ದಾಗ ಕ್ರಿ. ೧೮೩೫ ರಲ್ಲಿ ಕ್ಷೀರಸಮುದ್ರದಿಂದ ಲಕ್ಷ್ಮಿಯು ಉದ್ಭವಿಸಿದಂತೆ ಭಾಗೀರಥೀಬಾಯಿಯ ಗರ್ಭಾಂಬುಧಿಯಿಂದ ಒಂದು ಸ್ತ್ರೀರತ್ನದ ಜನನವಾಯಿತು. ತಾಯಿತಂದೆಗಳು ತಮ್ಮ ಮುದ್ದುಮಗುವಿಗೆ ಮನೂಬಾಯಿಯೆಂದು ಹೆಸರಿಟ್ಟರು. ಶ್ರೀಮಂತರ ಆಶ್ರಯದಲ್ಲಿ ಆ ಕನ್ಯಾರತ್ನವು ಕೋಮಲವಾಗಿ ಬೆಳೆಯಿತು.

## ಆಟಪಾಟಗಳು

ಮನೂಬಾಯಿಯ ಮೂಲಕ ಭಗವಂತನು ಹಸುವನ್ನು ಹುಲಿಯಾಗಿ ಮಾಡಬಲ್ಲಂಥ ತನ್ನ ವಿಲಕ್ಷಣ ಸಾಮರ್ಥ್ಯವನ್ನು ಪ್ರಕಟಮಾಡಬೇಕೆಂದು ಮನಸ್ಸು ಮಾಡಿದಂತೆ ತೋರುತ್ತದೆ. ಮನೂ

ಬಾಯಿಯು ಚಿಕ್ಕಮಕ್ಕಳೊಡನೆ ಆಡುವಾಗ ತಾನು ರಾಣಿಯೆಂದೂ ಉಳಿದವರೆಲ್ಲಾ ತನ್ನ ಪರಿವಾರದವರೆಂದೂ ಮಾಡಿಕೊಂಡು ಆಡುತ್ತ ತನ್ನ ಅಪ್ಪಣೆಯನ್ನು ಮೀರಿದವರಿಗೆ ಶಾಸನವನ್ನು ಮಾಡುತ್ತಿದ್ದಳು. ಮನೂಬಾಯಿಯು ಸ್ತ್ರೀವರ್ಗದಲ್ಲಿಯೇ ಬೆಳೆದು ಸ್ತ್ರೀತ್ವವನ್ನು ಮಾತ್ರ ಪುಷ್ಟಿಗೊಳಿಸಿಕೊಳ್ಳುವ ಅವಕಾಶಕ್ಕೆ ಸೊನ್ನೇ ಸುತ್ತಬೇಕೆಂದು ದೈವ ಪ್ರಯತ್ನವು ನಡೆಯಿತೆಂಬಂತೆ ಮುಂದಿನ ವೈಭವವನ್ನು ನೋಡಲಿಕ್ಕಿಲ್ಲದ ದುರ್ದೈವಿಯಾದ ಭಾಗೀರಥೀಬಾಯಿಯು ಆ ಶಿಶುವನ್ನು ಹಡೆದ ಮೂರು ನಾಲ್ಕು ವರ್ಷಗಳಲ್ಲಿಯೇ ಪರಲೋಕಯಾತ್ರೆಗೆ ಹೋದಳು. ಇತ್ತ ಮನೂಬಾಯಿಗೆ ತಂದೆಯ ತೊಡೆಗಳ ಮೇಲೆಯೇ ಆಡುವ ಚಟವೇ ಹತ್ತಿತು. ಇಷ್ಟರಲ್ಲಿ ಚಿಮಾಜಿ ಅಪ್ಪಾನೂ ದಿವಂಗತನಾದ್ದರಿಂದ ಮೋರೋಪಂತನು ಬ್ರಹ್ಮಾವರ್ತಕ್ಕೆ ಬಂದು ಪೇಶ್ವೆವಂಶದ ಶ್ರೀಮಂತ ಬಾಜೀರಾಯನ ಆಶ್ರಯದಲ್ಲಿ ನಿಲ್ಲಬೇಕಾಯಿತು. ಬಾಜೀರಾಯನ ಮನೆಯಲ್ಲಿ ಮನೂಬಾಯಿಗೆ ಆಟಕ್ಕೆ ಗಂಡುಹುಡುಗರ ಜೊತೆಯೇ ಬಿತ್ತು. ಅಂತೂ ಇಂತೂ ಮನೂಬಾಯಿಗೆ ಗಂಡಸರ ಬಳಕೆಯೇ ಹೆಚ್ಚಾಗಿ ಗಂಡಸುತನದ ಗುಣಗಳೇ ಅಂಕುರಿಸಿ ಚಿಗತು ಗಿಡವಾಗಿ ಮರವಾಗಿ ಹೂಬಿಟ್ಟು ಕಾಯಿಡಿದು ಹಣ್ಣಿನಿಂದ ಗಿಟ್ಟಿಗಿರಿಯುವ ಅವಕಾಶವು ಪೂರ್ಣವಾಗಿ ಸಿಕ್ಕಿತು. ಆಕೆಯ ಜಾಜ್ವಲ್ಯಮಾನವಾದ ಕೆಂಪು ಮುಖದಲ್ಲಿ ಪೌರುಷಪ್ರಧಾನವಾದ ಕಾಂತಿಯುಕ್ಕುತ್ತಿರುವದು ಚಿನ್ನದ ಹೂವಿಗೆ ಪರಿಮಳವುಂಟಾದಂತಿತ್ತು. ಬಾಜೀರಾಯನ ಮಗನಾದ ನಾನಾಸಾಹೇಬ ಮೊದಲಾದವರ ಜೊತೆಯಲ್ಲಿ ಒಳಹೊಕ್ಕು ಈಕೆಯು ಮುಂದೆಬಿದ್ದು ತಾನೇ ಅಕ್ಷರಾಭ್ಯಾಸವನ್ನು ಮಾಡಿದಳು. ಅಷ್ಟೇ ಅಲ್ಲ; ಕತ್ತಿಯನ್ನು ತಿರುಹುವದು ಮೊದಲಾದ ಶಾಸ್ತ್ರಾಭ್ಯಾಸದಲ್ಲಿಯೂ ಮೇಲುಗಯ್ಯಾದಳು. ಹುಡುಗರು ಕುದುರೆಯನ್ನು ಹತ್ತುವದನ್ನು ನೋಡಿ ಆಕೆ ತಾನೂ ಆ ವಿದ್ಯೆಯಲ್ಲಿ ಅಗ್ರಗಣ್ಯಳಾದಳು. ಒಂದು ದಿನ ಆಕೆಯು ಆನೆಯ ಮೇಲೆ ಕುಳಿತುಕೊಳ್ಳಬೇಕೆಂದು ಹಠವನ್ನು ಹಿಡಿದಳು. ಆಗ ಹಿರಿಯರು ‘ ನಿನಗೂ ಅದಕ್ಕೂ ಬಹುದೂರ ’ ವೆಂದು ಬೆದರಿಸಲು ಆಕೆ ವಯೋಧರ್ಮಕ್ಕನುಸರಿಸಿ ನಿರ್ಬಂಧದಿಂದ ಸುಮ್ಮನಾದರೂ ಬೆಳೆಯುವ ಪೈರು ಮೊಳಕೆಯಲ್ಲಿಯೇ ತೋರುವದೆಂಬಂತೆ

ಹುಬ್ಬನ್ನು ಗಂಟಿಕ್ಕಿ 'ಇಂಥ ಆನೆಗಳ ಸಾವಿರಾರನ್ನಾದರೂ ಪಡೆಯ ಬಹುದು' ಎಂದು ಆಕೆ ಧಿಟ್ಟತನದಿಂದ ಆಡಿತೋರಿಸಿದಳು.

## ಮದುವೆ

ಮನೂಬಾಯಿಯು ಪ್ರಾಯಪ್ರಬುದ್ಧಳಾದಳು. ತಕ್ಕ ವರನನ್ನು ಹುಡುಕಬೇಕೆಂದು ತಂದೆಯು ಅಲ್ಲಲ್ಲಿ ಹುಡುಕುತ್ತಿದ್ದನು. ಒಂದು ದಿನ, ಬುಂದೇಲಖಂಡಕ್ಕೆ ಸೇರಿದ ಝಾಂಸಿ ಸಂಸ್ಥಾನದ ಜ್ಯೋತಿಃಶಾಸ್ತ್ರ ಪಂಡಿತನಾದ ತಾತ್ಯಾದೀಕ್ಷಿತನು ಬಂದಿದ್ದಾಗ ಮೋರೋಪಂತನು ತನ್ನ ಮಗಳಿಗೆ ಲಗ್ನವಾಗುವ ಯೋಗ ಯಾವಾಗ ಇರುವದೊ ತಿಳಿಯ ಬೇಕೆಂದು ಆ ಹುಡುಗಿಯ ಜಾತಕವನ್ನು ಆ ಪಂಡಿತನ ಮುಂದಿಟ್ಟನು. ಪಂಡಿತನು ಅದನ್ನು ನೋಡಿ ಆ ಗ್ರಹಯೋಗಕ್ಕೆ ಬೆರಗಾಗಿ ಐಶ್ವರ್ಯ ದಲ್ಲಿಯೂ ಪೌರುಷದಲ್ಲಿಯೂ ವೈಭವದಲ್ಲಿಯೂ ಆಕೆಯು ಕ್ಷಾತ್ರತೇಜ ಸ್ವಿನ ಜೀವರತ್ನವಾಗಿರುವಳೆಂದು ಹೇಳಿ ಆಕೆಯ ಪ್ರತಿಭಾವಿಶೇಷಕ್ಕೆ ಮೂಗಿನ ಮೇಲೆ ಬೆರಳಿಟ್ಟುಕೊಂಡು ಬೆರಗಾಗುತ್ತಿರುವಾಗ ತನ್ನ ರಾಜ ನಾದ ಶ್ರೀಮಂತ ಮಹಾರಾಜ ಗಂಗಾಧರರಾಯನು ಆಗ ಅಪತ್ನೀಕ ನಾಗಿದ್ದದ್ದು ನೆನಪಿಗೆ ಬಂತು. ಆತನಿಗೆ ಈಕೆಯ ಪಾಣಿಗ್ರಹಣವನ್ನು ಮಾಡಿಸಿದರೆ ಚಿನ್ನಕ್ಕೆ ಕುಂದಣವನ್ನು ಕೆತ್ತಿದಂತಾಗುವದೆಂಬ ಅಭಿಪ್ರಾಯವು ಆತನ ಮನಸ್ಸಿನಲ್ಲಿ ಬೇರೂರಿತು. ದೈವಯೋಗವೂ ಇದಕ್ಕನುಕೂಲವಾಗಿ ಅವರೀರ್ವರಿಗೂ ಝಾಂಸಿಯಲ್ಲಿಯೇ ವಿವಾಹ ಸಮಾರಂಭವಾಯಿತು. ವರನ ಕಡೆಯವರು ಸಾಕ್ಷಾತ್ ಲಕ್ಷ್ಮಿ ಯಂತಿದ್ದ ಮನೂಬಾಯಿಗೆ ಲಕ್ಷ್ಮೀಬಾಯಿಯೆಂದು ನಾಮಕರಣ ಮಾಡಿದರು. ಪುರೋಹಿತರು ವಿವಾಹಾಂತದಲ್ಲಿ ವಧೂವರರ ಸೆರಗಿಗೆ ಗಂಟಿಕ್ಕಹೋದಾಗ ಲಕ್ಷ್ಮೀಬಾಯಿಯು ತೇಜಃಪುಂಜವಾದ ಕಣ್ಣು ಗಳಿಂದ ನೋಡಿ "ಬಿಗಿಯಾದ ಗಂಟನ್ನು ಹಾಕಿರಿ" ಎಂದು ಪುರೋ ಹಿತರಿಗೆ ಹೇಳುವದರ ಮೂಲಕ ತನ್ನ ವೀರಪಾತಿವ್ರತ್ಯಪ್ರಭಾವದಿಂದ ಎಲ್ಲರ ಹೃದಯವನ್ನೂ ಪ್ರಫುಲ್ಲಿತವಾಗಿ ಮಾಡಿದಳು.

## ವೈಧವ್ಯ

ಲಕ್ಷ್ಮೀಬಾಯಿಯನ್ನು ಮನೆದುಂಬಿಸಿಕೊಂಡಂದಿನಿಂದ ಭಾಗ್ಯ ಲಕ್ಷ್ಮಿಯೂ ಮನೆಯಲ್ಲಿ ತುಂಬಿಕೊಂಡದ್ದಲ್ಲದೆ ರಾಜ್ಯಲಕ್ಷ್ಮಿಯೂ

ವರಿಸಿಬಂದಳು. ಬ್ರಿಟಿಷರು ಝಾಂಸಿಯ ರಾಜವಂಶೀಯರ ರಾಜ ಭಕ್ತಿಯ ಏಕನಿಷ್ಠೆಗೆ ಒಲಿದವರಾಗಿ ರಾಜ್ಯಸೂತ್ರಗಳನ್ನು ಈಗ ಪೂರ್ಣ ವಾಗಿ ಗಂಗಾಧರರಾಯನ ಕೈಯಲ್ಲಿಟ್ಟರು. ಗಂಗಾಧರರಾಯನು ತನ್ನ ಆಳಿಕೆಯ ಚಾತುರ್ಯದಿಂದ ತನ್ನ ದೇಶೀಯರಿಗೆಲ್ಲ ಮನೆದೇವನಾದನು. ಆದರೇನು? ಝಾಂಸಿಯವರ ಆ ಪುಣ್ಯಪರಿಪಾಕವು ಬಹು ಅಲ್ಪಾಯುವಾಗಿತ್ತು. ಲಕ್ಷ್ಮೀಬಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಒಬ್ಬ ಪುತ್ರನು ಮೂರನೆಯ ತಿಂಗಳಲ್ಲಿಯೇ ಅಂತರ್ಧಾನನಾದದ್ದು ಗಂಗಾಧರರಾಯನಿಗೊಂದು ಆಕಾಶದ ಕಲ್ಲು ಬಿಡಿದಹಾಗಾಯಿತು. ಅದರ ರೋಗವು ಅವನಿಗೊಂದು ಮನೋರೋಗವಾಗಿ ಆಮೇಲೆ ಪರಿ ಣಮಿಸಿ ಶರೀರವನ್ನೂ ಆವರಿಸಿಕೊಂಡಿತು. ಮಹಾರಾಜನು ನೆಲಾ ಹಿಡಿದನು. ಇತ್ತ ಲಕ್ಷ್ಮೀಬಾಯಿಗೆ ಪುತ್ರವಿಯೋಗದುಃಖವೊಂದು, ಪತಿಯ ಅಸ್ವಸ್ಥತೆಯ ದುಃಖವೊಂದು—ಹೀಗೆ ಇಮ್ಮಡಿಯಾದ ದುಃಖ. ಪುರುಷಸಮಾಜದಲ್ಲಿ ಬೆಳೆದು ಪುರುಷಗುಣವನ್ನು ಮೈಗೂಡಿಸಿಕೊಂಡಿದ್ದರೂ ಕೂಡ ಈ ದುಃಖಕ್ಕೆ ಧೈರ್ಯದಿಂದ ಎದೆಗೊಡುವದು ಆಕೆಗೆ ಬಹು ಕಷ್ಟಸಾಧ್ಯವಾಗಿತ್ತು. ಇನ್ನೇನು, ಗಂಗಾಧರರಾಯನಿಗೂ ಅಧೈರ್ಯವುಂಟಾಯಿತು. ಆಗ ಅವನು ತನ್ನ ವಂಶವು ಉಳಿಯುವ ದಕ್ಕಾಗಿ ತನ್ನ ಬಂಧುವರ್ಗದಲ್ಲಿ ಒಳ್ಳೇ ಚಟುವಟಿಕೆಯುಳ್ಳ ಒಬ್ಬ ಐದುವರ್ಷದ ಹುಡುಗನಿಗೆ ದಾಮೋದರನೆಂದು ಹೆಸರಿಟ್ಟು ತನ್ನ ದತ್ತ ಪುತ್ರನನ್ನಾಗಿ ಮಾಡಿಕೊಂಡನು. ಇದಾಗುತ್ತಲೆ ಸ್ವಲ್ಪ ದಿವಸಗಳ ಲ್ಲಿಯೇ ಮಹಾರಾಜನ ಮೇಲೆ ಬಂದಿದ್ದ ಮೃತ್ಯುದೇವತೆಯೂ ತನ್ನ ನಿರ್ದಯವನ್ನು ಪೂರ್ಣವಾಗಿಯೇ ವ್ಯಕ್ತಮಾಡಿಬಿಟ್ಟಳು. ಪ್ರಬಲರಾದ ಉತ್ತರಾಧಿಕಾರಿಗಳಿಲ್ಲವೆಂದು ಹೇಳಬಹುದಾದ ಸಮಯವನ್ನೇ ಹೊಂಚುಹಾಕಿಕೊಂಡು ರಾಜ್ಯಗಳನ್ನು ನುಂಗಿ ನೀರು ಕುಡಿಯುತ್ತಿದ್ದ ಲಾರ್ಡ ಡಾಲಹೌಸಿಯು ಝಾಂಸಿಗೆ ಆಗ ದಿಕ್ಕಿಲ್ಲದ ರಾಜ್ಯವೆಂದು ಹೆಸರಿಟ್ಟು ಅದನ್ನು ಪಟಕ್ಕನೆ ತನ್ನ ಬಾಯಲ್ಲಿ ಹಾಕಿಕೊಂಡನು. ಇಂಥ ಎಷ್ಟೋ ದತ್ತಪುತ್ರರನ್ನು ಉತ್ತರಾಧಿಕಾರಿಗಳನ್ನಾಗಿ ಇಂಗ್ಲೀಷರೇ ಒಪ್ಪಿ ಕೊಂಡಿರುವದನ್ನೂ ಝಾಂಸಿಯ ರಾಜಮನೆತನದವರು ಇಂಗ್ಲೀಷರಿಗೆ ಮಾಡಿದ ಅನ್ಯಾದೃಶವಾದ ಸಹಾಯವನ್ನೂ ಕಣ್ಣಿಗೆ ಕಟ್ಟಿದ ಹಾಗೆ ತೋರಿಸಿ ಮಹಾರಾಣಿಯು ಮತ್ತೆ ಬರೆದುಕೊಂಡ ವಿನಂತಿಪತ್ರದ ಕಡೆಗೆ

ಇಂಗ್ಲೀಷರು ಕಣ್ಣು ಹಾಕಲೇ ಇಲ್ಲ. ದಾಮೋದರರಾಯನು ಹಣಕಾಸು ಮೊದಲಾದವುಗಳಿಗೆ ಮಾತ್ರ ಉತ್ತರಾಧಿಕಾರಿಯೆಂದೂ ಬೇಕಾದರೆ ಲಕ್ಷ್ಮೀಬಾಯಿಯು ಐದುಸಾವಿರ ರೂಪಾಯಿಗಳ ಮಾಸಾಶನವನ್ನು ತೆಗೆದುಕೊಳ್ಳಬಹುದೆಂದೂ ರಾಜ್ಯಸೂತ್ರವು ಹಸ್ತಾಂತರವಾಯಿತೆಂದೂ ಇಂಗ್ಲೀಷರ ಅಧಿಕಾರಿಯು ಹೇಳುವದಕ್ಕೆ ಬಂದಾಗ ಅತ್ಯಂತ ಸಂತಪ್ತಳಾದ ಮಹಾರಾಣಿಯ ಬಾಯಿಂದ "ಝಾಂಸಿಯನ್ನು ನಾನು ಕೈಬಿಡಲಾರೆನು" ಎಂಬ ಉದ್ಗಾರವು ಹೊರಟಿತು. ಆದರೆ ದೈವೇಚ್ಛೆ ಅದಕ್ಕೆ ಅನುಕೂಲವಾಗಿರಲಿಲ್ಲ. ಆಕೆಯ ಕಣ್ಣೀರಿನಧಾರೆಯೊಡನೆ ಝಾಂಸಿಯು ಇಂಗ್ಲೀಷರ ಕೈಗೆ ಇಳಿಯಲೇಬೇಕಾಯಿತು. ಇಷ್ಟೇ ಅಲ್ಲ; ಇಂಗ್ಲೀಷರ ಆಜ್ಞೆಯಂತೆ ಆಕೆಯು ಕೋಟೆಯ ಅರಮನೆಯನ್ನು ಕೂಡ ಬಿಟ್ಟು ಕೊಟ್ಟು ಪೇಟೆಯ ಅರಮನೆಗೆ ಬಂದಿರಬೇಕಾಯಿತು. 'ದೊರೆಯ ತನಕ ದೂರು' ಎಂಬಂತೆ ತನ್ನ ಕಾರ್ಯವನ್ನು ಸಾಧಿಸುವದಕ್ಕಾಗಿ ಆಕೆ ವಿಲಾಯತಿಗೆ ಕೂಡ ತನ್ನವರನ್ನು ಕಳುಹಿಸಿದಳು. ಆದರೆ ಅವರು ಅಷ್ಟು ಚತುರರೂ ಆಗಿರಲಿಲ್ಲ; ಪ್ರಾಮಾಣಿಕರೂ ಆಗಿರಲಿಲ್ಲ. ಆದ್ದರಿಂದ ಎಲ್ಲಾ ಪ್ರಯತ್ನವೂ ನೀರಲ್ಲಿ ಹೋಮ ಮಾಡಿದಂತೆ ಆಯಿತು. ಮಹಾರಾಣಿಯು ತಾನು 'ಭಿಕ್ಷಾಂದೇಹಿ' ಎನ್ನತಕ್ಕವಳಲ್ಲವೆಂದು ಮಾಸಾಶನಕ್ಕೆಂದಿಗೂ ಕೈ ಒಡ್ಡಲಿಲ್ಲ. ಹೀಗಾಗಿ ಝಾಂಸಿ ಸಂಸ್ಥಾನವು ಗುಟುಕುನೀರು ಕುಡಿದು ಹೋಯಿತು.

## ತ್ರಿಶಂಕು ಸ್ವರ್ಗ

ಮಹಾಯೋಧಳೆಂದು ಹೆಸರುವಾಸಿಯಾಗಿದ್ದ ಲಕ್ಷ್ಮೀಬಾಯಿಯನ್ನು ಕೋಟೆಯಲ್ಲಿಡುವದಕ್ಕೆ ಹಿಂದುಮುಂದು ನೋಡಿ ಇಂಗ್ಲೀಷರು ಉಚ್ಚಾಟನೆ ಮಾಡಿದರಷ್ಟೆ! ಅಲ್ಲಿಂದ ಹೊರಬಿದ್ದಾಕೆಯು ಪೇಟೆಯ ಅರಮನೆಯಲ್ಲಿ ಪ್ರತಿದಿವಸ ಪರಮೇಶ್ವರಪೂಜೆ, ರಾಮನಾಮಲೇಖನ ಮತ್ತು ಮಹಾಲಕ್ಷ್ಮಿಯ ಉಪಾಸನೆ—ಮೊದಲಾದವುಗಳನ್ನು ಮಾಡಿಕೊಂಡು ಕೇವಲ ಧಾರ್ಮಿಕವರ್ತನದಲ್ಲಿ ಕಾಲವನ್ನು ಕಳೆಯುತ್ತಿದ್ದಳು. ಆಗಿನ ಗವ್ಹರ್ನರ ಜನರಲ್ಲನಾದ ಲಾರ್ಡ ಡಾಲಹೌಸಿಯು ಇದೇ ರೀತಿಯಲ್ಲಿ ಅನೇಕ ಸಂಸ್ಥಾನಗಳನ್ನು ಸ್ವಾಹಾಕಾರಮಾಡಿಕೊಂಡದ್ದರಿಂದ

ಹಿಂದುಸ್ಥಾನದಲ್ಲೆಲ್ಲಾ ಹೊಟ್ಟೆಯಲ್ಲಿ ಸಂಕಟವು ಹೆಚ್ಚಾಗಿದ್ದು ೧೮೫೭ನೇ ಇಸ್ವಿಯಲ್ಲಿ ಇಂಗ್ಲೀಷರು ಹಸುವಿನ ಮತ್ತು ಹಂದಿಯ ಕೊಬ್ಬಿನಿಂದ ಕೂಡಿದ ತೋಟಾಗಳನ್ನು ಉಪಯೋಗ ಮಾಡಿಸುವದರ ಮೂಲಕ ತಮ್ಮ ಧರ್ಮದ ಬುಡಕ್ಕೆ ಬೆಂಕಿಯನ್ನು ಹಚ್ಚುವರೆಂದು ಪರೆಯನ್ನು ಬಿಟ್ಟ ಸರ್ಪದಂತೆ ರೇಗಿದವರಾದ ಶಿಪಾಯಿಗಳು ಹಾವಳಿಯನ್ನು ಮಾಡುತ್ತ ಕಂಡಕಂಡ ಕಡೆಯಲ್ಲಿಯೇ ಇಂಗ್ಲೀಷರ ಆಹುತಿಯನ್ನು ತೆಗೆದುಕೊಳ್ಳುತ್ತ ಬಂದು ಝಾಂಸಿಯಲ್ಲಿಯೂ ತಮ್ಮ ಸಾಹಸಕೃತ್ಯ ಗಳನ್ನು ಸಾಗಿಸಿದರು. ಅವರ ಗಡಿಬಿಡಿಯಲ್ಲಿ ಇಂಗ್ಲೀಷ ಜನರಿಗೆ ನಿಲ್ಲುವದಕ್ಕೆ ನೆರಳಿಲ್ಲದಂತೆ ಆಗಲು ಮಹಾರಾಣಿಯು ಅವರ ಹೆಂಗಸ ರನ್ನೆಲ್ಲಾ ಕೆಲವುಕಾಲ ತನ್ನ ಮನೆಯಲ್ಲಿ ಅಡಗಿಸಿಕೊಂಡು ಸುರಕ್ಷಿತ ರನ್ನಾಗಿ ಮಾಡಿ ದಂಗೇಕಾರರಿಗೆ ತಿಳಿಯದಂತೆ ಗಂಡಸರಿಗೆ ಆಹಾರ ಸಾಮುಗ್ರಿಗಳನ್ನು ಒದಗಿಸಿ ಭಾರತೀಯರಿಗೆ ಸ್ವಾಭಾವಿಕವಾದ ಭೂತ ದಯೆಯನ್ನು ಅಭಿವ್ಯಕ್ತಮಾಡಿದಳು. ಕೊನೆಗೆ ದಂಗೇಕಾರರು ಲಕ್ಷ್ಮೀ ಬಾಯಿಯ ಅರಮನೆಗೇ ಮುತ್ತಿಗೆಯನ್ನು ಹಾಕಿ ಮೂರು ಲಕ್ಷ ರೂಪಾ ಯಿಗಳನ್ನು ಕೊಡದಿದ್ದರೆ ಅರಮನೆಯನ್ನು ಧೂಳಿಬ್ಬಿಸಿಬಿಡುವೆವೆಂದು ಬೆದರಿಕೆಯನ್ನು ಹಾಕಿದರು. ಮಹಾರಾಣಿಯು ತನ್ನ ಕಷ್ಟಸುಖ ಗಳನ್ನು ಅವರಿಗೆ ಹೇಳಿ ಕೊನೆಗೆ ಉಪಾಯಾಂತರವಿಲ್ಲದೆ ಒಂದು ಲಕ್ಷ ರೂಪಾಯಿಗಳನ್ನು ಕೊಟ್ಟು ಬಂದ ಮಾರಿಯನ್ನು ಸಾಗಕಳುಹಿದಳು. ದಂಗೆಯವರು ಊರುಬಿಡುವ ಕಾಲಕ್ಕೆ ಅಲ್ಲಿ ಇಂಗ್ಲೀಷರ ಅಧಿಕಾರಿ ಗಳನ್ನು ಉಳಿಸಿರಲಿಲ್ಲವಾದ್ದರಿಂದ ವಿಲಾಯತಿಯವರಾದರೂ ಧರ್ಮ ಬದ್ಧರಾಗಿ ಮುಂದೆ ತನ್ನನ್ನೇ ಉತ್ತರಾಧಿಕಾರಿಯನ್ನಾಗಿ ಮಾಡಿಕೊಳ್ಳ ಬಹುದೆಂದೂ ಅಥವಾ ಸ್ವಲ್ಪ ತಡವಾಗಿ ತಮ್ಮ ಕಡೆಯ ಅಧಿಕಾರಿ ಯನ್ನೇ ಬೇರೆ ಕಳುಹಿಸಿದರೂ ಅದುವರೆಗೆ ನಾನು ರಾಜ್ಯವನ್ನು ಅನಾ ಯಕವಾಗಿ ಮಾಡದೆ ಇದ್ದ ಉಪಕಾರಕ್ಕಾದರೂ ಬದ್ಧರಾಗುವರೆಂದೂ ಯೋಚಿಸಿ ಆಕೆ ತಾನೇ ರಾಜ್ಯಸೂತ್ರವನ್ನು ಕೈಕೊಂಡಳು. ಮನೆಯಲ್ಲಿ ತಾಯ ಯಜಮಾನಿಕೆಯಾದರೆ ಮಕ್ಕಳಿಗೆ ಹೊಟ್ಟೆ ತಣ್ಣಗಾಗುವಂತೆ ಮಹಾರಾಣಿಯ ಆಳಿಕೆಯಿಂದ ಝಾಂಸಿಯ ಪ್ರಜೆಗಳೆಲ್ಲಾ ಅತ್ಯಂತ ಸಂತುಷ್ಟರಾದರು.

## ವಿಘ್ನ ಪರಂಪರೆ

ಕೈಗೆ ಬಂದ ತುತ್ತು ಬಾಯ್ಗೆ ಬರುತ್ತದೆಂಬ ನಿಯಮವಿಲ್ಲ. ಲಕ್ಷ್ಮೀಬಾಯಿಯು ರಾಜಶಾಸನವನ್ನು ಕೈಗೆ ತೆಗೆದುಕೊಳ್ಳುತ್ತಲೇ ಗಂಗಾಧರರಾಯನ ದೂರದ ದಾಯಾದಿಯಾದ ಸದಾಶಿವರಾಯನೆಂಬವನು ದಂಡುತಂದು ಸರಹದ್ದಿನಲ್ಲಿದ್ದ ಕೆಲವು ಪ್ರಾಂತಗಳನ್ನು ಮುತ್ತಿ ಅಲ್ಲಿಗೆಲ್ಲಾ ತಾನೇ ಅಧಿನಾಯಕನೆಂದು ಪ್ರಕಟನೆಯನ್ನು ಹೊರಡಿಸಿದನು. ಮಹಾರಾಣಿಯು ತನ್ನ ಸೇನೆಯನ್ನು ಕಳುಹಿಸಿ ಆ ಧೂರ್ತನ ಸೊಕ್ಕುಮುರಿದು ಅವನನ್ನು ಹಿಡಿತರಿಸಿ ಸೆರೆಯಲ್ಲಿಟ್ಟಳು. ವಿಪತ್ತುಗಳು ಒಂಟಿಯಾಗಿ ಬರುವದಿಲ್ಲ. ಬುಂದೇಲ ಸಂಸ್ಥಾನದ ನಾಥೇಖಾನನೆಂಬವನು ಇಲ್ಲಿ ತನ್ನ ನಿಶಾನೆಯನ್ನು ಊರಬೇಕೆಂದು ಅಟ್ಟಹಾಸದಿಂದ ಬಂದನು. ಲಕ್ಷ್ಮೀಬಾಯಿಯು ತಾನು ಹುಟ್ಟನಿಂದ ಹೆಂಗಸಾದರೂ ಕೃತಿಯಲ್ಲಿ ಹೆಂಗಸಾಗದೆ ಪರಪಕ್ಷವನ್ನು ಹೆಂಗಸಾಗಿ ಮಾಡುವವಳೆಂದು ಹೇಳಿ ತಾನೇ ಪಠಾಣವೇಷವನ್ನು ಧರಿಸಿ ಸಾಕ್ಷಾತ್ತಾಗಿ ಯುದ್ಧರಂಗವನ್ನು ಹೊಕ್ಕು ತನ್ನ ಕತ್ತಿಯ ಹೊಳಪಿನಿಂದ ಶತ್ರುವಿನ ಕಣ್ಣುಕುಕ್ಕುವಂತೆ ಮಾಡಿ ಬಹು ಚಾತುರ್ಯದಿಂದ ಯುದ್ಧಮಾಡಿದಳು. ನಾಥೇಖಾನನು ಸೋತು ಸಂಧಿಮಾಡಿಕೊಂಡನು. ಶಿಪಾಯಿ ದಂಗೆಯ ಗಡಿಬಿಡಿಯಲ್ಲಿ ಇಂಗ್ಲೀಷರಿಗೆ ದಿಕ್ಕುತೋಚದಂತಾಗಿದ್ದದರಿಂದ ಇಲ್ಲಿ ಮಹಾರಾಣಿಯ ಆಳಿಕೆಯು ೮-೧೦ ತಿಂಗಳು ನಡೆಯಿತು. ಈ ಸಮಯದಲ್ಲಿ ಮಹಾರಾಣಿಯು ಇಲ್ಲಿನ ಎಲ್ಲ ವಿದ್ಯಮಾನಗಳನ್ನೂ ಪತ್ರದಲ್ಲಿ ಬರೆದು ಇಂಗ್ಲೀಷರಿಗೆ ಕಳುಹಿಸುತ್ತಿದ್ದಳು. ಮಹಾಕಪಟಿಯಾದ ನಾಥೇಖಾನನು ಆಕೆಯ ಪತ್ರವೊಂದಾದರೂ ಅವರಿಗೆ ಮುಟ್ಟದಂತೆ ಮಾಡಿದ್ದಲ್ಲದೆ ಲಕ್ಷ್ಮೀಬಾಯಿಯು ರಾಜದ್ರೋಹಿಯಾದ್ದರಿಂದ ತಾನು ಆಕೆಯ ಮೇಲೆ ಯುದ್ಧವನ್ನು ಹೂಡಿದ್ದೇನೆಂದು ಮುಂತಾಗಿ ಅವರಿಗೆ ಮನಗಾಣಿಸಿದನು. ಆಗ ಇದಕ್ಕೆ ತಕ್ಕದ್ದನ್ನು ಮಾಡಬೇಕೆಂದು ಸರ್ ಹ್ಯೂರೋಜ ಎಂಬ ಸೇನಾಪತಿಯು ದಂಡುತಂದು ಊರಹೊರಗೆ ನಿಂತು, "ನಿಃಶಸ್ತ್ರಳಾಗಿ ಬಂದು ತನಗೆ ಗೌರವವನ್ನು ತೋರಿಸಬೇಕು; ತಪ್ಪಿದರೆ ಶಸ್ತ್ರಪ್ರಯೋಗವೇ ಉತ್ತರಪ್ರತ್ಯುತ್ತರ" ಎಂದೂ ಲಕ್ಷ್ಮೀಬಾಯಿಗೆ ಹೇಳಿಕಳುಹಿಸಿದನು. ಆಕೆಗೆ ಈ ಒಳಗುಟ್ಟು ಗೊತ್ತಿಲ್ಲ. ತನ್ನ

ಮನಸ್ಸಿನ ನೋವನ್ನು ತನ್ನಲ್ಲಿಯೇ ನುಂಗಿಕೊಂಡು ತಾನು ತ್ರಿಕರಣ ಶುದ್ಧಿಯಿಂದ ಉಪಕಾರವನ್ನೇ ಮಾಡುತ್ತಿದ್ದರೂ ಇಂಗ್ಲೀಷರು ಹೀಗೆ ತಲೆತಿರುಗಿದ ಮಾತಾಡುವದನ್ನು ನೋಡಿ ಆಕೆಯ ಮನಸ್ಸಿನ ಪ್ರಸನ್ನತೆಯು ಹಾರಿಹೋಯಿತು. ಒಡನೆ "ದೈನ್ಯತೆಯನ್ನರಿಯದ ತನಗೆ ಶಸ್ತ್ರಮೂಲಕವಾದ ಉತ್ತರಪ್ರತ್ಯುತ್ತರವೇ ಸರಿ" ಯೆಂದು ಹೇಳಿ ಯುದ್ಧಸನ್ನದ್ಧಳಾದಳು. ಸೈನಿಕರೆಲ್ಲರೂ ಇಂಗ್ಲೀಷರ ವಿಷಯದಲ್ಲಿ ಬೇಸರಪಟ್ಟಿದ್ದವರಾದ್ದರಿಂದ ಎಲ್ಲರೂ ಮಹಾರಾಣಿಯ ಪರವಾಗಿ ಯುದ್ಧಮಾಡುವದಕ್ಕೆ ದೀಕ್ಷೆಯನ್ನು ವಹಿಸಿದರು. ಬಲವತ್ತರವಾದ ಯುದ್ಧವು ನಡೆಯಿತು. ಹೀಗೆ ೮-೧೦ ದಿನ ಲಕ್ಷ್ಮೀಬಾಯಿಯೇ ಎದೆಗೊಟ್ಟು ಶತ್ರುಗಳನ್ನು ತಡೆದು ನಿಲ್ಲಿಸುತ್ತಿರುವಷ್ಟರಲ್ಲಿ ಪೇಶ್ವೆಯ ಕಡೆಯಿಂದ ದಂಡು ಬಂತು. ಏನು ಪ್ರಯೋಜನ? ಪೇಶ್ವೆಯ ಅಶಿಕ್ಷಿತ ಸೈನಿಕರು ಇಂಗ್ಲೀಷರ ಹೊಡೆತಕ್ಕೆ ನುಚ್ಚುನೂರಾಗಿ ದಿಕ್ಕುಗೆಟ್ಟು ಹೋದರು. ಆಮೇಲೆ ಝಾಂಸಿಯ ಸೇನೆಯೂ ಹಿಮ್ಮೆಟ್ಟಿತು. ಇಂಗ್ಲೀಷ ಸೈನಿಕರು ಪಟ್ಟಣದ ಒಳಹೊಕ್ಕು ಜನರಿಗೆ ಮನುಷ್ಯಮಾತ್ರದವರ ಊಹೆಗೆ ಕೂಡ ನಿಲುಕದಂಥ ಹಿಂಸೆಗಳನ್ನು ಮಾಡುವದಕ್ಕೆ ಆರಂಭಿಸಿದರು. ಅರಮನೆಯ ಮೇಲುಪ್ಪರಿಗೆಯಿಂದ ಈ ಅನಾಹುತವನ್ನು ನೋಡಿದ ಮಹಾರಾಣಿಯು ಇನ್ನು ತಾನಿಲ್ಲಿರಬಾರದೆಂದು ಒಡನೆ ತನ್ನ ಕಂದನಾದ ದಾಮೋದರನನ್ನು ಬೆನ್ನಿಗೆ ಕಟ್ಟಿಕೊಂಡು ಕುದುರೆಯ ಮೇಲೆ ಕುಳಿತು ಹತ್ತುಕಡೆಗೂ ತಿರುಗುತ್ತಿದ್ದ ತನ್ನ ಕತ್ತಿಯ ಸಹಾಯದಿಂದ 'ಜಯಶಂಕರ, ಹರಹರ ಮಹಾದೇವ' ಎನ್ನುತ್ತ ಹೇಗೋ ಆ ಕುತ್ತದಿಂದ ಪಾರಾದಳು. ಇತ್ತ ಸೈನಿಕರಿಗೆ ಅಷ್ಟೈಶ್ವರ್ಯವೆಲ್ಲಾ ಸೂರೆಯಾಗಿ ಭಯಂಕರವಾದ ಕೊಲೆಗಳಿಂದ ಎಲ್ಲೆಲ್ಲಿಯೂ ರಕ್ತಮಾಂಸಮಯವಾಗಿ ಹದ್ದುಗಳಿಗೂ ಗೂಗೆಗಳಿಗೂ ಕಾಗೆಗಳಿಗೂ ವಾಸಸ್ಥಾನವಾಗಿದ್ದ ಆ ಹಾಳೂರಲ್ಲಿ ಆಗ ತಮ್ಮ ಯೂನಿಯನ್ನಜಾಕನ್ನು ನೆಟ್ಟು ಇಂಗ್ಲೀಷರು ಊರು ಸುಟ್ಟಮೇಲೆ ಊರ ಬಾಗಿಲನ್ನು ಹಾಕಿದಂತೆ ಜನರ ಮುಂದೆ ಅಭಯಹಸ್ತವನ್ನು ಹಿಡಿದರು.

## ಮೋರೋಪಂತನ ಮರಣ

ಲಕ್ಷ್ಮೀಬಾಯಿಯು ಹೋದಮೇಲೆ ಆಕೆಯ ತಂದೆ ಮೋರೋಪಂತನು ಅಲ್ಪಸ್ವಲ್ಪ ಆಭರಣಗಳನ್ನು ಕಟ್ಟಿಕೊಂಡು ಹೋಗುತ್ತ ದಾರಿ

ಯಲ್ಲಿ ಶತ್ರುಗಳಿಂದ ಗಾಸಿಯಾಗಿ ದತಿಯಾ ಎಂಬ ಒಂದೂರಲ್ಲಿ ಸ್ವಲ್ಪ ವಿಶ್ರಮಿಸಿಕೊಂಡಿರಲು ಕಟುಕನಾದ ಅಲ್ಲಿಯ ದಿವಾನನು ಅವನ ಹಣ ವನ್ನೆಲ್ಲಾ ಸುಲಿದುಕೊಂಡು ಅವನನ್ನು ಇಂಗ್ಲೀಷರಿಗೆ ಹಿಡಿದುಕೊಟ್ಟನು. ಇಂಗ್ಲೀಷರು ಅವನನ್ನು ಹಿಡಿದುತಂದು ನಡುಹಗಲಲ್ಲಿ ಝಾಂಸಿಯ ಅರಮನೆಯ ಮುಂದೆ ಗಲ್ಲಿಗೇರಿಸಿ ಲಕ್ಷ್ಮೀಬಾಯಿಯ ಮೇಲಿನ ರಚ್ಚನ್ನು ತೀರಿಸಿಕೊಂಡರು.

## ಕಾಲ್ಪಿಯ ಕಾಳಗ

ಲಕ್ಷ್ಮೀಬಾಯಿಯ ಕುದುರೆಯು ಝಾಂಸಿಯಿಂದ ವಾಯುವೇಗ ದಿಂದ ಹೊರಟಿತೆಂದು ಸುದ್ದಿ ಹತ್ತುತ್ತಲೇ ಇಂಗ್ಲೀಷರೂ ಹಿಂದಟ್ಟಿ ಕೊಂಡು ಹೊರಟರು. ಕುದುರೆಯ ಸವಾರಿಯಲ್ಲಿ ಲಕ್ಷ್ಮೀಬಾಯಿಗೆ ಸರಿಜೋಡಿಯಾದವರು ಹಿಂದೆಯೂ ಇರಲಿಲ್ಲ; ಮುಂದೆಯೂ ಇರ ಲಾರರು. ಆಕೆ ಮೇಲೆ ಕುಳಿತಳೆಂದರೆ ಎಂಥ ನಾಡಾಡಿಯ ಕುದುರೆ ಯಾದರೂ ದಿವ್ಯಾಶ್ವವಾಗುತ್ತಿತ್ತು. ತನ್ನ ಸಹಾಯಕ್ಕೆಂದು ಝಾಂಸಿಗೆ ಬಂದಿದ್ದ ಪೇಶ್ವೆಯು ಕಾಲ್ಪಿಕೋಟೆಯನ್ನು ಸೇರಿರುವನೆಂದು ಆಕೆಗೆ ಗೊತ್ತಾಗಿತ್ತು. ಆದ್ದರಿಂದ ತನ್ನ ಕುದುರೆಯನ್ನು ಕಾಲ್ಪಿಯ ಕಡೆಗೆ ಪಕ್ಷಿಯಂತೆ ಹಾರಿಸಿದಳು. ಹಿಂಬಾಲಿಸಿದವರು ಆಕೆಯನ್ನು ಹಿಡಿ ಯುವದಾಗಲಿಲ್ಲ. ಹೋಗುತ್ತ ಹೋಗುತ್ತ ಆಕೆಯು ಹಸಿದಿರುವ ತನ್ನ ದತ್ತಪುತ್ರನಿಗಾಗಿ ಭಾಂಡೇರಿ ಎಂಬ ಒಂದು ಕಡೆಯಲ್ಲಿ ಸ್ವಲ್ಪ ನಿಂತು ಆ ಹುಡುಗನ ಯೋಗಕ್ಷೇಮವನ್ನು ನೋಡುತ್ತಿರುವಷ್ಟರಲ್ಲಿಯೇ ದೂರದಲ್ಲಿ ಇಂಗ್ಲೀಷ ರಾವುತರ ಕುದುರೆಯ ಖುರಪುಟಧ್ವನಿಯು ಕೇಳಿ ಸಿತು. ಒಡನೆ ಆಕೆಯು ಮತ್ತೆ ಕುದುರೆಯನ್ನು ಹತ್ತುವದರೊಳ ಗಾಗಿಯೇ ಒಬ್ಬ ಇಂಗ್ಲೀಷ ಸವಾರನು ಹತ್ತಿರಕ್ಕೆ ಬಂದೇಬಿಟ್ಟನು. ಆದರೂ ಎದೆಗುಂದದೆ ಮಹಾರಾಣಿಯು ಅವನಿಗೆ ಕತ್ತಿಯಿಂದ ಒಳ್ಳೆಯ ದೊಂದು ಪೆಟ್ಟುಕೊಟ್ಟು ಕುದುರೆಯನ್ನೇರಿ ತಾನು ಮುಂದಾದಳು. ಝಾಂಸಿಗೆ ಕಾಲ್ಪಿಯು ನೂರೆರಡು ಮೈಲಿ ಇತ್ತು. ಈ ಪ್ರಯಾಣ ವನ್ನು ಆಕೆಯು ಅನ್ನನೀರಿಲ್ಲದೆ ಇಪ್ಪತ್ನಾಲ್ಕು ಗಂಟೆಗಳಲ್ಲಿ ಮುಗಿಸಿ ಕಾಲ್ಪಿಯನ್ನು ಸೇರಿದಳು. ಆಗ ಅರ್ಧರಾತ್ರಿಯಾಗಿತ್ತು. ಆದರೂ ಆಕೆ ಶ್ರೀಮಂತ ರಾವಸಾಹೇಬನನ್ನು ಎಚ್ಚರಗೊಳಿಸಿ ಆತನ ಮುಂದೆ

ಹೋಗಿ ತನ್ನ ಕತ್ತಿಯನ್ನಿಟ್ಟು ನಮಸ್ಕರಿಸಿ "ಸರದಾರರೇ, ಪವಿತ್ರ ಕ್ಷಾತ್ರತೇಜಸ್ಸಿನ ನಮ್ಮ ಪೂರ್ವಜರು ನನ್ನ ಕೈಯಲ್ಲಿ ಈ ಕತ್ತಿಯನ್ನು ಕೊಟ್ಟಿದ್ದರು. ನಾನು ಸ್ತ್ರೀಯಾದ್ದರಿಂದ ಇದರ ತೀಕ್ಷ್ಣಧಾರೆಯನ್ನು ಕಾಯ್ದುಕೊಳ್ಳಲಾರದೆ ಕ್ಷಾತ್ರತೇಜಸ್ಸುಳ್ಳ ನಿಮಗೆ ಇದನ್ನು ಒಪ್ಪಿಸಿದ್ದೇನೆ. ದಯವಿಟ್ಟು ತೆಗೆದುಕೊಂಡು ನನ್ನನ್ನು ಕೃತಾರ್ಥಳಾಗಿ ಮಾಡಬೇಕು." ಎಂದು ಕಣ್ಣೀರಿಡುತ್ತ ಗದ್ಗದಸ್ವರದಿಂದ ಹೇಳಿದಳು. ರಾವಸಾಹೇಬನೂ ಆಕೆಯ ಮೇಲೆ ಪ್ರೇಮಪೂರ್ವಕವಾದ ಸಹಾನುಭೂತಿಯನ್ನು ತೋರಿಸಿ ತನ್ನ ಕೈಲಾದ ಸಹಾಯವನ್ನು ಮಾಡುತ್ತೇನೆಂದು ಆಕೆಗೆ ಆಶ್ರಯವನ್ನು ಕೊಟ್ಟು ಮತ್ತೆ ಆ ಕತ್ತಿಯನ್ನು ಆಕೆಯ ಕೈಯಲಿಟ್ಟನು. ರಾಮೇಶ್ವರಕ್ಕೆ ಹೋದರೆ ಶನೇಶ್ವರ ಬಿಟ್ಟೀತೇ? ಇಂಗ್ಲೀಷರ ದಂಡು ಅಲ್ಲಿಗೂ ಬಂತು. ಯುದ್ಧವೂ ನಡೆಯಿತು. ಶ್ರೀಮಂತರ ಸೇನೆಯಲ್ಲಿ ಒಳ್ಳೇ ಚಾಲಕರಿಲ್ಲದ್ದರಿಂದ ಜಯವಾಗದೆ ಕೊನೆಗೆ ರಾವಸಾಹೇಬನೂ ಲಕ್ಷ್ಮೀಬಾಯಿಯೂ ಸಹ ಕಾಲ್ಪೀಕೋಟೆಯನ್ನು ಬಿಟ್ಟು ಕಾಲಿಗೆ ಬುದ್ಧೀಹೇಳಬೇಕಾಯಿತು.

## ಗ್ವಾಲಿಯರಿನ ಹೆಣಗಾಟ

ಝಾಂಸಿಯಲ್ಲಿಯೂ ಕಾಲ್ಪಿಯಲ್ಲಿಯೂ ಕೋಟೆಗಳಿದ್ದದರಿಂದ ಇಂಗ್ಲೀಷರನ್ನು ಎದುರಿಸಬಹುದಾಗಿದ್ದ ಅನುಭವವನ್ನಿಟ್ಟುಕೊಂಡು ರಾವಸಾಹೇಬನೂ ಮತ್ತು ಲಕ್ಷ್ಮೀಬಾಯಿಯೂ ಗ್ವಾಲಿಯರಿನ ಕಡೆಗೆ ತಿರುಗಿದರು. ಏಕೆಂದರೆ ಗ್ವಾಲಿಯರಿನ ಕೋಟೆಯೊಂದು ಬಲವಾಗಿತ್ತು. ಮತ್ತು ಅಲ್ಲಿನ ಅರಸನಾದ ಸಿಂಧ್ಯನು ಪೇಶ್ವೆಯವರ ಊಳಿಗದವನಾಗಿದ್ದನು. ಆದ್ದರಿಂದ ಅವನು ತಮಗೆ ನೆರವಾಗಿಯೇ ತೀರುವನೆಂದು ರಾವಸಾಹೇಬನಿಗೆ ಬಲವಾದ ನಂಬಿಕೆ ಇತ್ತು. ಒಂದುಪಕ್ಷ ಸಿಂಧ್ಯನು ತಾನಾಗಿ ಒಳಗಾಗದಿದ್ದರೂ ಅವನ ಸೇನೆಯು ಅಂತರಂಗದಲ್ಲಿ ನಮಗೆ ಅನುಕೂಲವಾಗಿರುವದರಿಂದ ಸ್ವರಾಜ್ಯ ಹಿತಕ್ಕಾಗಿ ಅರಸನನ್ನು ನಮ್ಮ ಬಾಹುಬಲದಿಂದ ತಳಕ್ಕೊತ್ತಿಯಾದರೂ ನಾವು ರಣಯಜ್ಞವನ್ನು ಸಾಂಗಮಾಡಿ ಅವಭೃಥಸ್ನಾನವನ್ನು ಮಾಡಬೇಕೆಂದು ಲಕ್ಷ್ಮೀಬಾಯಿ ಅಭಿಪ್ರಾಯಪಟ್ಟಳು. ಇಬ್ಬರೂ ಗ್ವಾಲಿಯರಿಗೆ ಹೋದದ್ದಾಯಿತು. ಆಗ ರಾವಸಾಹೇಬನು ತನ್ನ ಅಭಿಪ್ರಾಯವನ್ನು ಜಯಾಜಿರಾವ

ಸಿಂಧ್ಯನಿಗೆ ಹೇಳಿಕಳುಹಿದನು. ಅವನು ಪೇಶ್ವೆಯವರ ಪೂರ್ವದ ಗುರುತ್ವವನ್ನು ಮನ್ನಿಸಲಿಲ್ಲ; ಮತ್ತು ಪೂರ್ವದ ಉಪಕಾರವನ್ನು ಮನಸ್ಸಿಗೆ ತಂದುಕೊಳ್ಳಲಿಲ್ಲ ಇಂಗ್ಲೀಷರ ಭಿಕ್ಷಾನ್ನದಿಂದ ಅವನ ದೇಹವು ಅಪವಿತ್ರವಾಗಿತ್ತು. ಆದ್ದರಿಂದ ಯುದ್ಧವೇ ಆಗಬೇಕಾಯಿತು; ಯುದ್ಧವಾಯಿತು. ರಾವಸಾಹೇಬನು ಗಂಡಸಾದರೂ ಎದೆಗಾರನೂ ಆಗಿರಲಿಲ್ಲ; ವಿವೇಕಿಯೂ ಆಗಿರಲಿಲ್ಲ. ಲಕ್ಷ್ಮೀಬಾಯಿಯ ಹಸ್ತ ಚಮತ್ಕೃತಿಯಿಂದ ಜಯಾಜಿರಾಯನು ನಿಲ್ಲಲಾರದೆ ತಲೇತಪ್ಪಿಸಿಕೊಂಡು ಪಲಾಯನಸೂಕ್ತವನ್ನು ಹೇಳಬೇಕಾಯಿತು. ಅಷ್ಟಾಗುತ್ತಲೇ ರಾವ ಸಾಹೇಬನು ಗ್ವಾಲಿಯರದಲ್ಲಿ ತಾನೇ ರಾಜನೆಂದು ಪ್ರಕಟನೆಯನ್ನು ಹೊರಡಿಸಿ ಆ ದಿನ ಸಂತೋಷಪ್ರದರ್ಶಕವಾಗಿ ಭೂರಿಭೋಜನ ಮೊದ ಲಾದವುಗಳನ್ನು ಮಾಡಿಸುವ ಗೊಂದಲದಲ್ಲಿ ಬಿದ್ದನು. ಇದು ಲಕ್ಷ್ಮೀ ಬಾಯಿಗೆ ಎಷ್ಟುಮಾತ್ರವೂ ಸರಿಬೀಳಲಿಲ್ಲ. ಸೇನೆಯನ್ನು ಸಜ್ಜುಗೊಳಿ ಸುತ್ತಿರಬೇಕೆಂಬ ಲಕ್ಷ್ಮೀಬಾಯಿಯ ಆಲೋಚನೆಯು ರಾವಸಾಹೇಬನಿಗೆ ಎಮ್ಮೆಯ ಮೇಲೆ ಮಳೆಗರೆದಂತೆ ಆಯಿತು. ಇಷ್ಟರಲ್ಲಿ ಊರಹೊರಗೆ ಇಂಗ್ಲೀಷರ ಧಾಂಧೂಂ ಶಬ್ದದಿಂದ ವಾಯುಮಂಡಲವೆಲ್ಲಾ ತುಂಬಿ ಹೋಯಿತು. ರಾವಸಾಹೇಬನಂತೂ ಮರಣಕಾಲದಲ್ಲಿ ಮದುವೆ ಯಾಗುವ ಹೆಡ್ಡನಂತೆ ಒಳ್ಳೇ ವೈಭವದಿಂದ ತನ್ನ ಮೆರವಣಿಗೆಯನ್ನು ಮಾಡಿಸಿಕೊಳ್ಳುವ ಸಡಗರದಲ್ಲಿದ್ದನು. ಲಕ್ಷ್ಮೀಬಾಯಿಗೆ ಉಪಾ ಯಾಂತರವೇನೂ ತೋರಲಿಲ್ಲ. ದೇವದತ್ತವಾದಂಥ ಬಾಹುಬಲದ ಮೇಲೆಯೇ ಆಕೆಯ ಭರವಸ. ಒಡನೆ ಆಕೆಯು ಇದ್ದ ಅಷ್ಟಿಷ್ಟು ಸೈನಿಕರನ್ನೇ ಹುರಿದುಂಬಿಸಿ ಯುದ್ಧವನ್ನು ಹೂಡಿ ರಣರಂಗದಲ್ಲಿ ಸಾಕ್ಷಾದ್ದುರ್ಗಾವತಾರವನ್ನು ತಾಳಿ ಬೇಕಾದಷ್ಟು ಬಲಿಯನ್ನು ತೆಗೆದು ಕೊಂಡು ಮುಂದಿನ ಆಲೋಚನೆಯನ್ನು ಮಾಡಿ ದಾಮೋದರರಾಯ ನೊಡನೆ ಕುದುರೆಯ ಮೇಲೆ ಕುಳಿತು ಅಲ್ಲಿಂದ ಸಿಂಹದಂತೆ ಮುಂದು ವರಿದು ಯಾರ ಕೈಗೂ ಸಿಕ್ಕದಂತೆ ಕುದುರೆಯನ್ನು ಓಡಿಸಿದಳು.

## ಮರಣ

ದುರ್ದೈವದಿಂದ ಅವತ್ತಿನ ಕುದುರೆಯು ಬಲಹೀನವಾಗಿತ್ತು. ಆದರೂ ಅದು ತನ್ನ ಸರ್ವಶಕ್ತಿಯಿಂದಲೂ ಓಡಿತು. ಲಕ್ಷ್ಮೀಬಾಯಿಯ

ಉಪಾಸ್ಯದೇವತೆಯಾದ ದುರ್ಗೆಯು ತನ್ನ ಭಕ್ತಳಿಗೆ ಜಯವನ್ನು ತಂದುಕೊಡುವದಕ್ಕಿಂತಲೂ ಹಸುವಿನ ರೂಪದಲ್ಲಿದ್ದು ವ್ಯಾಘ್ರತ್ವವನ್ನು ಪ್ರಕಟಮಾಡಿದಂಥ ಅಸಾಧಾರಣ ಮಹಿಮಾಪ್ರದರ್ಶನದ ಕೀರ್ತಿ ಮಾತ್ರವನ್ನು ತಂದುಕೊಡಬೇಕೆಂದೇ ಇದ್ದಂತೆ ಕಾಣುತ್ತದೆ. ದಾರಿಯಲ್ಲಿ ಹೋಗುತ್ತ ಹೋಗುತ್ತ ಒಂದು ಪ್ರವಾಹವು ಅಡ್ಡಬಂತು. ಏನೇನು ಮಾಡಿದರೂ ಕುದುರೆ ಮುಂದೆ ಹೆಜ್ಜೆ ಇಡಲಿಲ್ಲ. ಲಕ್ಷ್ಮೀಬಾಯಿಯು ನಿರಾಶಳಾಗಿ ಹತ್ತರದಲ್ಲಿದ್ದ ತನ್ನ ಸೈನಿಕನೊಬ್ಬನನ್ನು ಕರೆದು "ನಾನು ಸತ್ತರೂ ನನ್ನ ಪವಿತ್ರದೇಹವನ್ನು ಮಾತ್ರ ಇತರರು ಮುಟ್ಟದಂತೆ ಸರ್ವಸಾಹಸವನ್ನೂ ಮಾಡಬೇಕು" ಎಂದು ಹೇಳಿ ನದೀದಾಟುವ ಸನ್ನಾಹದಲ್ಲಿದ್ದಳು. ಹಿಂದಿನಿಂದ ಶತ್ರುಸೈನಿಕರು ಬಂದೇಬಿಟ್ಟರು. ಲಕ್ಷ್ಮೀಬಾಯಿಯು ತನ್ನ ಕತ್ತಿಯನ್ನು ಒರೆಯಿಂದ ಹಿರಿದು ಅವರ ಮೇಲೆ ಅದನ್ನು ಪ್ರಯೋಗಿಸುತಿರುವಾಗ ಒಬ್ಬನು ಹಿಂದಿನಿಂದ ಬಂದು ಆಕೆಯ ತಲೆಯ ಮೇಲೆ ಕತ್ತಿಯಿಂದ ಬಲವಾದ ಪೆಟ್ಟನ್ನು ಹಾಕಿದನು. ಮತ್ತು ಮತ್ತೊಬ್ಬನು ಭಲ್ಲೆಯಿಂದ ಚುಚ್ಚಿದನು. ಆಗ ಲಕ್ಷ್ಮೀಬಾಯಿಯ ಕೈ ಕುಂಠಿತವಾಯಿತು. ಹತ್ತರದಲ್ಲಿದ್ದ ದೇಶಮುಖಿ ರಾಮಚಂದ್ರರಾಯನೆಂಬವನು ಅಲ್ಲಿಂದ ಒಂದು ಪರ್ಣಶಾಲೆಗೆ ಆಕೆಯನ್ನು ಒಯ್ದನು ಮತ್ತು ಭೂಮಿಯಿಂದ ತೆಗೆದುಕೊಂಡಿದ್ದ ರಕ್ತವನ್ನೆಲ್ಲಾ ಭೂಮಿಗೇ ಬಸಿದು ಬಾಯಾರಿದ್ದ ಆಕೆಗೆ ಗಂಗೋದಕವನ್ನು ತಂದು ಕುಡಿಸಿದನು. ಅದರಿಂದ ಚೇತನಗೊಂಡು ಒಮ್ಮೆ ತನ್ನ ಮಗನ ಮುದ್ದುಮುಖವನ್ನು ಅರಳಿದ ಕಣ್ಣುಗಳಿಂದ ನೋಡಿ, 'ಜಯಶಂಕರ ಮಹಾದೇವ' ಎಂದು ನುಡಿದು ಕಣ್ಮುಚ್ಚಿದವಳು ಮತ್ತೆ ಕಣ್ಣುಬಿಡಲಿಲ್ಲ. ಈ ರೀತಿಯಾಗಿ ಝಾಂಸಿ ಸಂಸ್ಥಾನದ ಜೀವಜ್ಯೋತಿಯು ಕ್ರಿ. ೧೮೫೮ ರಲ್ಲಿ ನಂದಿಹೋಗಿ ಬರೀ ಝಾಂಸಿಗೆ ಮಾತ್ರವೇ ಅಲ್ಲದೆ ಭರತಖಂಡಕ್ಕೇ ಕಗ್ಗತ್ತಲೆ ಕವಿದುಕೊಂಡಿತು. ರಾಮಚಂದ್ರರಾಯನು ಆಕೆಯ ದೇಹವನ್ನು ಹುಲ್ಲಿನ ಚಿತಿಯ ಮೇಲಿಟ್ಟು ಅಗ್ನಿ ಪ್ರತಿಷ್ಠೆಮಾಡಲು ತನ್ನ ಪವಿತ್ರತೆಗಾಗಿ ಹೋರಾಡಿದ ಆ ದೇಹವು ದೇವತೆಗಳಿಗೂ ಕೂಡ ಬೇಕಾದುದೆಂದು ಅಗ್ನಿಯು ದೇವತೆಗಳಿಗಾಗಿ ಅದನ್ನು ಆದರದಿಂದ ತೆಗೆದುಕೊಂಡನೆಂಬಂತೆ ಅದು ಕ್ಷಣಮಾತ್ರದಲ್ಲಿ ದಗ್ಧವಾಗಿಹೋಯಿತು. ಈ ರೀತಿಯಲ್ಲಿ ಲಕ್ಷ್ಮೀಬಾಯಿಯು ತನ್ನ ಸ್ಥೂಲದೇಹವನ್ನು ಇತರರು ಮುಟ್ಟ

ದಂತೆ ರಕ್ಷಣೆ ಮಾಡಿಕೊಂಡದ್ದಲ್ಲದೆ ಇತರರಿಗೆ ಅನುಕರಣಕ್ಕೆ ಅಸಾಧ್ಯವಾಗಿರುವದರ ಮೂಲಕ ಅನ್ಯಾದೃಶವಾದ ತನ್ನ ಯಶಶ್ಶರೀರವನ್ನು ಕೂಡ ಇತರರು ಮುಟ್ಟದಂತೆ ಮಾಡಿಕೊಂಡಿರುವ ಪ್ರತಿಭೆಯು ಚಿರಸ್ಮರಣೀಯವಾಗಿದೆ.

**ಸಮಾಪ್ತಮ್**



ಈ ಪುಸ್ತಕವನ್ನು ಶ್ರೀ. ಹ. ರಾ. ಮೋಹರೆ ಇವರು ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ಮುದ್ರಿಸಿದರು. ಶ್ರೀ. ತ. ಬ. ಪುರೋಹಿತ ಬಿ. ಏ (ಆನರ್ಸ) ಇವರು ಕರ್ನಾಟಕ ಶಿಕ್ಷಣ ಸಮಿತಿಯ ಪರವಾಗಿ ಹುಬ್ಬಳ್ಳಿಯ ಶಿಕ್ಷಣ ಸಮಿತಿ ಮಂದಿರದಲ್ಲಿ ಪ್ರಸಿದ್ಧ ಮಾಡಿದರು.